ತ. ರಾ. ಸು.

# ರಕ್ತರಾತ್ರಿ





ವಿದ್ಯಾನಿಧಿ ಪ್ರಕಾಶನ

# ಈ ಕಾದಂಬರಿಯನ್ನು ಕುರಿತು

ಸುಮಾರು ಇನ್ನೂರು ಎಂಬತ್ತು ವರುಷಗಳ ಹಿಂದಿನ ಮಾತು.

ಮದಕರಿನಾಯಕ ಗಂಡು ಸಂತಾನವಿಲ್ಲದೆ ಸತ್ತಮೇಲೆ ರಾಣಿಗೌರವ್ವ ನಾಗತಿಯ ತಮ್ಮ ಓಬಣ್ಣನಾಯಕ ದುರ್ಗದ ಗದ್ದುಗೆಯನ್ನೇರಿದ; ನ್ಯಾಯವಾದ ಹಕ್ಕುದಾರರಾದ ಮದಕರಿನಾಯಕನ ಅಣ್ಣನ ಮಕ್ಕಳು ಲಿಂಗಣ್ಣನಾಯಕ ಚಿಕ್ಕಣ್ಣನಾಯಕರನ್ನು ತುಳಿದು. ಇದರಿಂದ ಕ್ರೋಧ ಗೊಂಡ ಸೈನಿಕರು ಓಬಣ್ಣನಾಯಕನನ್ನು ಕೊಂದುಹಾಕಿದರು.

ಬಳಿಕ ದಳವಾಯಿ ಮುದ್ದಣ್ಣನ ಬೆಂಬಲದಿಂದ ಚಿಕ್ಕಣ್ಣನಾಯಕ ಪಟ್ಟಕ್ಕೆ ಬಂದ. ಹನ್ನೆರಡು ವರ್ಷಗಳ ಆಳ್ವಿಕೆಯ ಬಳಿಕ ಚಿಕ್ಕಣ್ಣ ನಾಯಕ ಸಂತಾನವಿಲ್ಲದೆ ಮೃತನಾದ.

ದುರ್ಗದ ಸಿಂಹಾಸನ ಮತ್ತೆ ಬರಿದಾಯಿತು. ದಳವಾಯಿ ಮುದ್ದಣ್ಣ ನಿಗೆ ತಾನೆ ನಾಯಕನಾಗಬೇಕೆಂಬ ಹಂಬಲ. ಅದಕ್ಕಾಗಿ ಪಟ್ಟಕಟ್ಟುವು ದನ್ನು ತಡಮಾಡಿದನು. ಆದರೆ ಮದಕರಿನಾಯಕನ ಅಣ್ಣನ ಮಕ್ಕಳಾದ ಲಿಂಗಣ್ಣನಾಯಕನಿಗೇ ಪಟ್ಟಕಟ್ಟಬೇಕೆಂಬ ಒತ್ತಾಯ ಬಂದದ್ದರಿಂದ ಮುದ್ದಣ್ಣ ಅದಕ್ಕೆ ತಲೆಬಾಗಲೇ ಬೇಕಾಯಿತು. ಆದರೆ ಅರಮನೆಯ, ದುಗನದ ಸರ್ವಾಧಿಕಾರ ಮುದ್ದಣ್ಣ ಮತ್ತು ಅವನ ತಮ್ಮಂದಿರಲ್ಲಿಯೇ ಉಳಿಯಿತು. ತಾನು ಅರಮನೆಯಲ್ಲಿ ಸೆರೆಯಲ್ಲಿದ್ದೇನೆ ಎಂಬ ಅರಿವು ಲಿಂಗಣ್ಣನಾಯಕನಲ್ಲಿ ಮೂಡುವ ವೇಳೆಗೆ ಸರ್ವನಾಶವಾಗಿತ್ತು. ನಾಯ ಕನು ಅಧಿಕಾರ ತೆಗೆದುಕೊಳ್ಳಲು ಯತ್ನಿಸಿದಾಗ ಅದಕ್ಕೆ ಅವಕಾಶ ಕೊಡದೆ ಮುದ್ದಣ್ಣನಿಂದ ನಾಯಕನ ಕೊಲೆಯಾಯಿತು. ಲಿಂಗಣ್ಣ ನಾಯಕನ ಕೊಲೆಯಿಂದ ಮತ್ತಿ ತಿಮ್ಮಣ್ಣನಾಯಕನ ವಂಶ ಕೊನೆ ಗಂಡಿತು. ಇದೇ ಈ ಕಾದಂಬರಿಯ ವಸ್ತು.

# ರಕ್ತರಾತ್ರಿ

ತ. ರಾ. ಸು.





ಎಚ್. ವೆಂಕಟರಾಮಯ್ಯ ಅಂಡ್ ಸನ್ಸ್
ವಿದ್ಯಾನಿಧಿ ಬುಕ್ ಡಿಪೋ, ಮೈಸೂರು

ಮೊದಲನೆಯ ಮುದ್ರಣ ೧೯೫೩
ವಿದ್ಯಾನಿಧಿ ಪ್ರಕಾಶನದಿಂದ ಮೊದಲನೆಯ ಮುದ್ರಣ ೧೯೫೪



ಬೆಲೆ: ೧-೮-೦

ಮುದ್ರಣಕಾರರು:
ಜಿ. ಎಚ್. ರಾಮರಾವ್, ಬಿ. ಎಸ್ಸಿ.
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್,
ಮೈಸೂರು.

## ಮೊದಲ ಮಾತು

'ಕಂಬನಿಯ ಕುಯಿಲು' ವಿನ ಮುನ್ನುಡಿಯಲ್ಲಿ ಮಾತುಕೊಟ್ಟಂತೆ, ಇಂದು 'ರಕ್ತ ರಾತ್ರಿ' ಯನ್ನು ವಾಚಕರು ಮುಂದೆ ಇಡುತ್ತಿದ್ದೇನೆ. ಇಷ್ಟು ಬೇಗ ಈ ಕಾದಂಬರಿ ಹೊರಬೀಳಲು, 'ಕಂಬನಿಯ ಕುಯಿಲ'ನ್ನು ಓದಿ ಮೆಚ್ಚಿದ ವಾಚಕರು, ಮುಂದಿನ ಭಾಗವನ್ನು ಓದಬೇಕೆಂಬ ಉತ್ಸಾಹವೂ, ಅದರೊಂದಿಗೆ ಇದರ ಪ್ರಕಾಶನದ ಹೊಣೆಹೊತ್ತು ಬರೆಯಿಸಿದ ಹಿರಿಯ ಮಿತ್ರರಾದ ಶ್ರೀ ಎಚ್.ಎಂ. ಶಂಕರನಾರಾಯಣರಾಯರ ಸ್ನೇಹ ಮೂಲವಾದ ಅಭಿಮಾನವೂ, ಎರಡೂ ಕಾರಣವಾಗಿವೆ.

ಚಿತ್ರದುರ್ಗದ ಇತಿಹಾಸದಲ್ಲಿ ಶಕವರ್ಷ ೧೫೯೬–೧೬೧೧ರ ನಡುವಣ ೧೫ ವರ್ಷಗಳ ಕಾಲದ ರಕ್ತಸಿಕ್ತ ವಿಷಘಟ್ಟವನ್ನು ಆಧಾರವಾಗಿಟ್ಟುಕೊಂಡು ನಾನು ರಚಿಸಲೆಳಸಿದ ಕಾದಂಬರೀತ್ರಯದಲ್ಲಿ 'ರಕ್ತ ರಾತ್ರಿ' ಎರಡನೆಯದು. ಲಿಂಗಣ್ಣನಾಯಕನ ಪಟ್ಟಾಭಿಷೇಕ ಪ್ರಯತ್ನದಿಂದ ಆರಂಭವಾಗುವ ಈ ಕಾದಂಬರಿ ಲಿಂಗಣ್ಣನಾಯಕನ ಕೊಲೆ, ಅದರೊಂದಿಗೆ ಮತ್ತಿವಂಶದ ಮುಕ್ತಾಯದೊಂದಿಗೆ ಕೊನೆಯಾಗುತ್ತದೆ. ಆದರೆ ಈ ದುರಂತದ ಖಳನಾಯಕ ಮುದ್ದಣ್ಣನ ಬಾಳು ಜನಕ್ರೋಧದ ಅಗ್ನಿಕುಂಡದಲ್ಲಿ ಆಹುತಿಯಾಗುವ 'ತಿರುಗು ಬಾಣ'ದೊಂದಿಗೆ ಈ ಕಾದಂಬರೀತ್ರಯ ಮುಕ್ತಾಯವಾಗುತ್ತದೆ. 'ಕಂಬನಿಯ ಕುಯಿಲಿ'ಗೆ ದೊರೆತಷ್ಟೇ ವಾಚಕ ಪ್ರೋತ್ಸಾಹ ಇದಕ್ಕೂ ದೊರೆತರೆ, ಅದಷ್ಟು ಬೇಗ ಅದೂ ಹೊರಬೀಳುತ್ತದೆ.

'ಕಂಬನಿಯ ಕುಯಿಲು'ನಲ್ಲಿ ಇರುವಂತೆ, ಈ ಕಾದಂಬರಿಗೂ ಇರುವ ಚಾರಿತ್ರಿಕಾಧಾರಗಳು ಅಲ್ಪ. ಲಿಂಗಣ್ಣನಾಯಕ, ಮುದ್ದಣ್ಣ ಆತನ ಸಹೋದರರು, ಉಗ್ರ ಚನ್ನವೀರಸ್ವಾಮಿಗಳು, ಮಲ್ಲವ್ವನಾಗತಿ, ಹೊರಕೆನಾಯಕ, ಭರಮಣ್ಣ-ಇವರಿಷ್ಟು ಜನ ಚಾರಿತ್ರಿಕ ವ್ಯಕ್ತಿಗಳು. ಕಾದಂಬರಿಯ ಮೂಲವಸ್ತು ಮುದ್ದಣ್ಣನಿಂದಾದ ಲಿಂಗಣ್ಣನಾಯಕನ ಕರಾಳ ಕೊಲೆಯೂ, ಐತಿಹಾಸಿಕ ವಸ್ತುವೇ. ಆದರೆ ಇತಿಹಾಸದಲ್ಲಿ ಬರಡು ಎಲುಬಿನ ಗೂಡಾಗಿ ಕಾಣುವ ಪಾತ್ರಗಳಿಗೆ, ನನ್ನ ಕಲ್ಪನೆಯಿಂದ ವಿಶಿಷ್ಟ

ವ್ಯಕ್ತಿತ್ವವನ್ನು ತುಂಬಿದ್ದೇನೆ. ಹಾಗೇ, ಕಾದಂಬರಿಯನ್ನು ಓದುವ ಜನಕ್ಕೆ ಆ ಕಾಲದ ಜನಜೀವನದ ಪರಿಚಯವೂ ಅಷ್ಟಿಷ್ಟು ಆಗುವಂತೆ ಶ್ರಮಿಸಿದೇನೆ. ಈ ಪ್ರಯತ್ನ ಎಷ್ಟುಮಟ್ಟಿಗೆ ಗ್ರಾಹ್ಯವೋ, ಆಸ್ವಾದನಾರ್ಹವೋ ವಾಚಕರೇ ನಿರ್ಣಯಿಸಬೇಕು.

ಈ ಕಾದಂಬರಿಯ ಮೂಲವಸ್ತುವಿಗೂ ನಾನು 'ಚಿತ್ರದುರ್ಗದ ಪಾಳಯಗಾರರು' ಮತ್ತು 'ಚಿತ್ರದುರ್ಗದ ಬಖೈರು' ಗ್ರಂಥಗಳಿಗೆ ಋಣಿಯಾಗಿದ್ದೇನೆ. ಆ ಗ್ರಂಥಗಳನ್ನು ದೊರಕಿಸಿಕೊಟ್ಟ ಮಿತ್ರರಿಗೆ ನಾನು ಋಣಿ.

ಈ ಕಾದಂಬರಿಯನ್ನು ನನ್ನಿಂದ ಬರೆಯಿಸಿ, ತಮ್ಮ 'ಕನ್ನಡ ಕವಿ ಕಾವ್ಯಮಾಲೆ'ಯಲ್ಲಿ ಪವಣಿಸಿಕೊಂಡು, ಅಚ್ಚುಮಾಡಿದ, ಮಿತ್ರರಾದ ಶ್ರೀ ಎಚ್.ಎಂ. ಶಂಕರನಾರಾಯಣರಾವ್, ಎಂ.ಎ. ಅವರಿಗೆ ನಾನು ಚಿರಋಣಿಯಾಗಿದೇನೆ. ಅಷ್ಟೇ ಮಟ್ಟಿಗೆ ಇದನ್ನು ಅಂದವಾಗಿ ಮುದ್ರಿಸಿದ ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸಿನ ಗೆ. ಶ್ರೀ ಜಿ. ಹೆಚ್. ರಾಮರಾಯರಿಗೂ.

ಮೈಸೂರು
೧೫-೧೨-೫೩ } ತ. ರಾ. ಸು.

## ಎರಡನೆಯ ಮುದ್ರಣದ ಮುನ್ನುಡಿ

ಚಿತ್ರದುರ್ಗ ಇತಿಹಾಸದ ಆಧಾರದ ಮೇಲೆ ರಚಿತವಾದ ಕಾದಂಬರೀ ತ್ರಯದ ಎರಡನೆಯ ಭಾಗವಾದ 'ರಕ್ತರಾತ್ರಿ'ಯ ಪ್ರಥಮ ಮುದ್ರಣದ ಪ್ರತಿಗಳು ಬಹುಬೇಗ ಮುಗಿದು, ಎರಡನೆಯ ಮುದ್ರಣಕ್ಕೆ ಅವಕಾಶವಾಗಿದೆ. ಇದನ್ನು ಓದಿ ಮೆಚ್ಚಿ ಎಷ್ಟೋ ಜನ ಕಾಗದಗಳನ್ನು ಬರೆದಿದಾರೆ. ವಾಚಕರ ಈ ಉತ್ಸಾಹ, ಪ್ರೋತ್ಸಾಹಗಳೆರಡಕ್ಕೂ ನಾನು ತುಂಬಾ ಋಣಿಯಾಗಿದೇನೆ,

ಕಾದಂಬರಿಯ ದ್ವಿತೀಯ ಮುದ್ರಣವನ್ನು, ಇದರ ಮೊದಲಭಾಗವಾದ 'ಕಂಬನಿಯ ಕುಯಿಲು'ವನ್ನು ಮುದ್ರಿಸಿದ ಮೆ. ಹೆಚ್. ವೆಂಕಟರಾಮಯ್ಯ ಅಂಡ್ ಸನ್ಸ್‌ರವರು ಹೊರತರುತ್ತಿರುವುದು ನನಗೆ ಸಂತೋಷದ ವಿಷಯ. ಈ ಸಾಹಸಕ್ಕಾಗಿ ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

೩೦-೭-೫೪
ಚಾಮುಂಡಿಪುರಂ, ಮೈಸೂರು. } ತ. ರಾ. ಸು.

# ರಕ್ತ ರಾತ್ರಿ

## ೧

ತೊಳೆದ ನೀಲಿಯ ಮುಗಿಲಿನಲ್ಲಿ ಅಲ್ಲಲ್ಲಿ ತೇಲುತ್ತಿದ್ದ, ಹಿಂಜಿದ ಅರಳೆಯಂತಿದ್ದ ಬಿಳಿಯ ಮೋಡಗಳಿಗೆ ಸಂಜೆಯ ಅಸ್ತಮಯ ಸಮೀಪನಾದ ಸೂರ್ಯನ ಕೆಂಬೆಳಕು, ಕುಂಕುಮಲೇಪನ ಮಾಡಿ, ಗಾಳಿ ಸುಳಿಯದ ಬೈಗಿನ ಮೌನದಲ್ಲಿ ಏನೋ ಒಂದು ಬಗೆಯ ಭೀತಿಯನ್ನು ಕದಡಿತ್ತು. ಬಾನಿನಾಳದಲ್ಲಿ ಕರಿಯ ಚುಕ್ಕೆಗಳಂತೆ ತೇಲುತ್ತಿದ್ದ ಹದ್ದುಗಳ ಸಿಳ್ಳುದನಿ ಅಸ್ಪಷ್ಟವಾಗಿ ಕೇಳಿಬಂದು, ಮೆದುಳಿನಾಳದಲ್ಲಿ ಮಲಗಿದ ಯಾವುದೋ ಹಳೆಯ ಘೋರವನ್ನು ಕೆಣಕುತ್ತಿತ್ತು. ಗಾಳಿಯಾಡದೆ, ಎಲೆಯೂ ಅಲುಗದೆ ಚಿತ್ರದಲ್ಲಿ ಬರೆದಂತೆ ನಿಶ್ಚಲವಾಗಿ ನಿಂತ ಮರಗಳು, ಕಂದುಬಣ್ಣದ ಬಂಡೆಗಳು, ಕೋಟೆಯ ಗೋಡೆ ಬತೇರಿಗಳು, ಎಲ್ಲವೂ— ಒಮ್ಮೆ ಜೀವ ತುಂಬಿ ಓಡಾಡುತ್ತಿದ್ದವೂ—ಯಾವುದೋ ಮೋಡಿಗೆ ಸಿಕ್ಕಿ ಒರಗಿದಂತೆ ಕಾಣುತ್ತಿದ್ದವು. ಗೋಪಾಲಸ್ವಾಮಿಯ ಹೊಂಡದ ನೀರೂ, ಅಲೆ ಚಲಿಸದೆ, ಕಪ್ಪಾಗಿ ಹರಡಿತ್ತು.

ಆ ನೀರನ್ನು ನೋಡನೋಡುತ್ತಾ ಲಿಂಗಣ್ಣನಾಯಕನ ಕಣ್ಣಲ್ಲೂ ನೀರು ತುಂಬಿತು.

ಆ ನೀರು–ನಿಜ, ಅದೇ ನೀರು! ನಿಶ್ಚಲವಾಗಿ, ನೀರವವಾಗಿ ಹಾಸುಬಂಡೆಗಳ ತೋಳ ತೆಕ್ಕೆಯೊಳಗೆ, ಹಸುಮಗುವಿನಂತೆ ಮಲಗಿರುವ ನೀರು ಹನ್ನೆರಡು ವರ್ಷಗಳ ಹಿಂದೆ, ಭೂತದಂತೆ ಬಾಯ್ದೆರೆದು, ಅವನ ಪ್ರೀತಿಯ ಚಿಕ್ಕಮ್ಮ ಓಬವ್ವನಾಗತಿಯ ಜೀವವನ್ನು ನುಂಗಿತ್ತು. ಆಗಲೂ ಈಗಿನಂತೆಯೇ ಇತ್ತು ಈ ನೀರು. ಈ ನೀರು ನುಂಗಿದ ಜೀವಕ್ಕಾಗಿ ಎಷ್ಟು ಜನ ಅತ್ತರು, ಎಷ್ಟು ಜನ ಕಂಬನಿಗರೆದರು, ಎಷ್ಟು ಜನ ತಾವೂ ಮುಳುಗಿ ಇದರ ಗರ್ಭವನ್ನು ಬಗೆದು, ಹುಡುಕಿ ಆ ಜೀವವನ್ನು ಕಾಣದೆ, ಬರಿಯ ದೇಹವನ್ನು ಹೊರತಂದು, ಅದರ ಮೇಲೆ ಹೊರಹೊರಳಿ ಅತ್ತಿ

ದ್ದರು. ಆದರೆ ಈ ನೀರು ಮಾತ್ರ ಅದಾವುದರ ಪರಿವೆಯೇ ಇಲ್ಲದಂತೆ ಹೀಗೆಯೇ ಹಾಯಾಗಿ ಮಲಗಿತ್ತು—ಮಲೆತು ಮಲಗಿದ ದೈತ್ಯನಂತೆ.

ಈಗ ಈ ನೀರು ಹಾಗೇ ಇದೆ; ಅಂದು ಇದರ ಸುತ್ತುಮುತ್ತ ನಿಂತು, ಈ ನೀರಿನಾಳದೊಳಗೆ ಅನರ್ಘ್ಯ ಜೀವರತ್ನವೊಂದು ಮುಳುಗಿ ಹೋದುದನ್ನು ಕೈ ಬೆರಳಲುಗಿಸದೆಯೇ ನಿಂತು ನೋಡಿದ ಕಲ್ಲು ಬಂಡೆ ಗಳು, ಬತೇರಿಗಳು, ಕೋಟೆ, ದೇವಾಲಯ—ಎಲ್ಲವೂ ಅಂದಿದ್ದ ಹಾಗೇ ಇವೆ.

ಆದರೆ ಈಗ ಆ ಜೀವವಿಲ್ಲ; ನೀರು ಜೀವವುಂಡು ಉಳಿಸಿದ ದೇಹವೂ ಇಲ್ಲ. ನಾಗತಿಯ ಶಿಲಾಮೂರ್ತಿಯನ್ನು ಹೊತ್ತ ಸಮಾಧಿ ಯೊಂದನ್ನುಳಿದು, ಬೇರಾವುದಕ್ಕೂ ಅದರ ನೆನಪೂ ಇದ್ದಂತಿಲ್ಲ.

ನೆನಪಿಲ್ಲ, ಆದರೆ ನೆನಪು ಇರಬೇಕೇ? ಯಾವ ಸುಖಕ್ಕೆ? ಆ ನೆನಪಿನ ಮುಳ್ಳು ಹೊರೆಯನ್ನು ಹೊತ್ತ ಲಿಂಗಣ್ಣನಾಯಕನ ಮೆದುಳು ಆ ಕಲ್ಲುಗಳಂತೆ, ಮರಗಳಂತೆ, ಮುಗಿಲಿನಂತೆ, ತಾನೂ ಆ ನೆನಪಿನ ಹೊರೆ ಇಲ್ಲದೆ ಇರಬಹುದಾಗಿದ್ದರೆ ಎಷ್ಟು ಹಾಯಾಗಿತ್ತು ಎಂದು ಮರು ಗಿತು. ನೆನಪು ಮರೆತು ನಿಶ್ಚಿಂತವಾಗಿ ನಿಂತವನ್ನು ಕಂಡು ಕರುಬಿತು.

ಆದರೆ ಅವನಿಗದು ಸಾಧ್ಯವಿರಲಿಲ್ಲ. ಹನ್ನೆರಡುವರ್ಷಗಳು ಕಳೆದು ಹೋಗಿದ್ದರೂ, ಇಂದು ಈಗ ತಾನೇ ನಡೆದಂತೆ ಎಲ್ಲವೂ ಸವಿವರವಾಗಿ ಕಾಣುತ್ತಿದೆ ಅವನ ಕಣ್ಣಮುಂದೆ—ಆ ನೆನಪು, ಬೇಡ ಬೇಡವೆಂದರೂ ನುಗ್ಗಿ ಬಂದಾಗ.

ಹನ್ನೆರಡು ವರ್ಷಗಳ ಹಿಂದೆ—

ಅರಮನೆಯ ಓಲಗಸಾಲೆಯಲ್ಲಿ, ಇವನ ಕಣ್ಣಿನ ಇದಿರೇ, ಸಿಂಹಾ ಸನದ ಮೇಲೆ ಕುಳಿತ ಓಬಣ್ಣನಾಯಕನ ಪಾದಕ್ಕೆ, ಶರಣಾಗತಿಯ ಸೂಚನೆಯೆಂದು ತನ್ನ ಕತ್ತಿಯನ್ನು ಒಪ್ಪಿಸಲು ಬಂದ ದಳವಾಯಿ ಮುದ್ದಣ್ಣ, ಅದೇ ಕತ್ತಿಯಿಂದ, ಮಿಂಚಿನ ವೇಗದಲ್ಲಿ ನಾಯಕನ ತಲೆ ಯನ್ನು ಹೊಯ್ದಾಗ; ಕತ್ತಿಯ ಪೆಟ್ಟು ಬಿದ್ದೆಡೆಯಿಂದ ಛಿಲ್ಲೆಂದು ಚಿಮ್ಮಿದ ರಕ್ತ ಹಾರಿ, ಇವನ ಬಿಳಿಯುಡುಪನ್ನು ತೋಯಿಸಿದಾಗ ಪ್ರಾಣ ಭೀತಿಯಿಂದ, ನೋವಿನಿಂದ, ಆರ್ತಸ್ವರದಲ್ಲಿ ಓಬಣ್ಣನಾಯಕ; 'ಅಣ್ಣಾ'

ಎಂದು ಚೀರಿದ ಕೂಗು, ಕುದಿಕುದಿವ ಲೋಹಜಲದಂತೆ ಇವನ ಕಿವಿಯನ್ನು ತುಂಬಿದಾಗ, ಸಿಂಹಾಸನದಿಂದ ಕೆಳಗುರುಳಿದ ರುಂಡವಿಲ್ಲದ ಮುಂಡ, ಅತ್ತಿತ್ತ ಹೊಯ್ದಾಡಿ, ಸುತ್ತಲಿದ್ದವರಿಗೆಲ್ಲಾ ರಕ್ತಸೇಚನ ಮಾಡಿ, ಆಸ್ಥಾನದ ಜರಿಯ ಕಸೂತಿ ಕೆಲಸದ ರತ್ನಗಂಬಳಿಯ ಮೇಲೆ ಹೊರಳಿದಾಗ—ಲಿಂಗಣ್ಣನಾಯಕನೂ ಹೀಗೆಯೇ ಗರಬಡಿದಂತೆ ನಿಂತು ನೋಡಿದ್ದ. ಒಂದು ಗಳಿಗೆ—ಮರುಗಳಿಗೆ ಆಕಸ್ಮಿಕದ ಆಘಾತ ಮರೆಯಾಗಿ ಕ್ರೋಧ ಉಮ್ಮಳಿಸಿದಾಗ, ಕತ್ತಿಯನ್ನು ಹಿರಿಯಲೆಂದು ಕೈ ಚಾಚಿದಾಗ, ಕೈಗೆ ಕೋಳಗಳು ಬಿಗಿದುದು ಅರಿವಾಗಿ, ಮುದ್ದಣ್ಣನ ವಿಕಟ ನಗು ಕೇಳಿ ಬಂದು, ಹಾವು ಮೈಯಡರಿದಂತೆ ನಡುಗಿದ್ದ.

ಅವನ ಮೈ ಇನ್ನೂ ಹಾಗೆಯೇ ನಡುಗುತ್ತಿರುವಾಗಲೇ 'ನಾಗತಿಯರು ಹೊಂಡದಲ್ಲಿ ಹಾರಿಕೊಂಡರು' ಎಂಬ ಚೀತ್ಕಾರ ಧ್ವನಿಯನು ಕೇಳಿ, ತಡೆಯಲು ಬಂದವನ ತಲೆಯ ಮೇಲೆ ಕೈಯನ್ನು ಕಟ್ಟಿದ ಉಕ್ಕಿನ ಕೋಳವನ್ನೇ ಅಪ್ಪಳಿಸಿ, ಆ ಕೈಯನ್ನೇ ಗದೆಯಂತೆ ತಿರುಗಿಸುತ್ತಾ, ಅಡ್ಡ ಬಂದವರನ್ನು ಸದೆಯುತ್ತಾ, ಎದೆಬಿರಿವ ದುಃಖದ ಕುದುರೆಯೇರಿ, ಗೋಪಾಲಸ್ವಾಮಿಯ ಹೊಂಡದೆಡೆಗೆ ಧಾವಿಸಿದ್ದ—ಆ ತಾಯಿಯನ್ನು ಉಳಿಸಬೇಕೆಂದು.

ಶೃಂಗಾರವನದಲ್ಲಿ ಸಾಕಿ ಬೆಳಸಿದ ಹೂ ಬಳ್ಳಿಗಳೂ ತನ್ನ ಕಾಲ್ತುಳಿತಕ್ಕೆ ಸಿಕ್ಕು ನಲುಗುತ್ತಿರುವುದನ್ನೂ ಲೆಕ್ಕಿಸದೆ, ಹೊಂಡದ ಬಳಿಸಾರಿ ನೋಡಿದ—

ನೋಡಿದ—

ಬಿದ್ದವೇಗಕ್ಕೆ ಬಂಡೆಗೆ ಸಿಕ್ಕು ತಲೆಯೊಡೆದು, ನೀರಿನಲ್ಲಿ ಮುಳುಗಿ ಜೀವಹೋದ ನಾಗತಿಯ ಶವವನ್ನು.

ನೀರಿನೊಳಗೆ ಮುಳುಗಿ, ಅದನ್ನು ಹೊರಗೆಳೆದು ತಂದವರೂ, ಸುತ್ತಲೂ ತಲೆಬಾಗಿಸಿ, ಸದ್ದಡಗಿ ಶಿಲಾಪ್ರತಿಮೆಗಳಂತೆ ನಿಂತಿದ್ದರು.

ನೋಡಿದ: ನೋಡಿದ ಕಣ್ಣನ್ನೇ ನಂಬಲಾಗದವನಂತೆ ಬಿರುಗಣ್ಣು ಅರಳಿಸಿ ನೋಡಿದ—ಹುಲ್ಲಿನ ಹಸುರಿನಲ್ಲಿ ನೆತ್ತರ ಕೆಂಪು ಬೆರಸುತ್ತಾ, ನೀರಿನಲ್ಲಿ ತೊಯ್ದು ಅಸ್ತವ್ಯಸ್ತವಾದ ತಾಯಿಯ ಶವವನ್ನು.

ಅದನ್ನು ನೋಡಿದವನೇ 'ಚಿಕ್ಕಮ್ಮಾ' ಎಂದು ಚೀರಿ, ಕೈಯನ್ನು ಬಿಗಿದ ಕೋಳಗಳಿಂದಲೇ ಹಣೆಯನ್ನು ಘಟ್ಟಿಸಿಕೊಂಡು, ಹೆಣದ ಮೇಲೆ ಉರುಳಿದ.

ಆಗ ಉರುಳಿದವನು ಮತ್ತೆ ಕಣ್ಣು ತೆರೆದಾಗ, ಅವನ ಕಣ್ಣ ಇದಿರು ಅವನ ತಮ್ಮ ಚಿಕ್ಕಣ್ಣನಾಯಕ ದುರ್ಗದ ನಾಯಕರ ಕಿರೀಟವನ್ನು ಧರಿಸಿ ನಿಂತಿದ್ದುದನ್ನು ನೋಡಿದ.

ಆ ರಾಜಮುಕುಟ—

ಮುತ್ತಿನ ಕುಚ್ಚು, ತುರಾಯಿ, ವಜ್ರದ ಪದಕಗಳಿಂದ ಥಳಥಳಿಸುವ ರಾಜಮುಕುಟವನ್ನು ನೋಡಿದ–ಅದರಿಂದ ರಕ್ತ ಚಿಮ್ಮುತ್ತಿರುವಂತೆ ತೋರಿತು. 'ಥೂ, ದ್ರೋಹಿ' ಎಂದು ಉಗಿದು, ತೋಳಲ್ಲಿ ಕಣ್ಣು ಮುಚ್ಚಿಕೊಂಡ.

ಅಂದು ಅದನ್ನು ಕಂಡು ಮುಖ ಮುಚ್ಚಿಕೊಂಡವನು ಮತ್ತೆ ಆದರತ್ತ ನೋಡಲಿಲ್ಲ. ಹನ್ನೆರಡು ವರ್ಷಗಳಕಾಲ ಅದು ಥಳಥಳಿಸುತ್ತಿದ್ದ ಅರಮನೆಯತ್ತ ಅವನು ಕಾಲಿಟ್ಟಿರಲಿಲ್ಲ.

ಇಂದು—ಹನ್ನೆರಡು ವರ್ಷಗಳು ಕಳೆದ ಬಳಿಕ—

ಆ ಮುಕುಟವನ್ನು ಬಯಸಿ, ಅದನ್ನು ಹೊತ್ತ ತಲೆಯನ್ನು ಕತ್ತರಿಸಿ, ಅದನ್ನು ಧರಿಸಿದ ಚಿಕ್ಕಣ್ಣನಾಯಕ, ಅಪುತ್ರಕನಾಗಿ ಸತ್ತು, ಅದೇ ಅವನನ್ನು ಹುಡುಕಿಕೊಂಡು ಬಂದಿದೆ.

ಅದೇ, ಅದೇ ಕಿರೀಟ–ಅದನ್ನು ಧರಿಸಿದ ಪಾಪಕ್ಕಾಗಿ ಓಬಣ್ಣನಾಯಕನ ತಲೆಯನ್ನು ಕೊಂಡ ಕಿರೀಟ; ಅದರ ರಕ್ಷಣೆಗಾಗಿ ಬದುಕಿದ ನಾಗತಿಯನ್ನು ನೀರಿನಲ್ಲಿ ಅದ್ದಿಕೊಂಡ ಕಿರೀಟ; ಅದರ ಗೌರವಕ್ಕಾಗಿ ಶ್ರಮಿಸಿದ ಭರಮಪ್ಪ, ದೇಸಣ್ಣನವರಂಥ ಹಿರಿಯರ ಜೀವವನ್ನು ನುಂಗಿದ ಮುಕುಟ; ಕುಲಟೆಯಂತೆ ಸ್ವಾಮಿಯನ್ನು ಬಿಟ್ಟು, ಪರಕೀಯನ ನೆತ್ತಿಯನ್ನೇರಿ ಮೆರೆದ ಕಿರೀಟ—

ಇಂದು, ತನ್ನನ್ನು ಹುಡುಕಿಕೊಂಡು, ತನ್ನ ಮನೆಯ ಬಾಗಿಲಿಗೇ ಬಂದಿದೆ—ಬೇಟೆಯನ್ನು ಹುಡುಕಿಕೊಂಡು, ಪೊದೆಪೊದೆಯ ಬಳಿಯೂ ಅಲೆಯುವ ಕಾಡಪಶುವಿನಂತೆ.

ದ್ರೋಹದ ತಲೆಯನ್ನೇರಿ, ನಲಿದು ಮೆರೆದ ರಕ್ತಕಲಂಕಿತವಾದ ಆ ಮುಕುಟ, ಅವನ ತಲೆಯನ್ನೇರಲು ಬಯಸಿ ಬಾಯ್ದೆರೆದಿದೆ.

ಆ ಕಿರೀಟ—ತನ್ನ ತಲೆಯ ಮೇಲೆ!

ಆ ಭಾವನೆಯಿಂದಲೇ ಲಿಂಗಣ್ಣನಾಯಕನ ಮೆದುಳನ್ನು ಸಾವಿರ ಚೇಳು ಕುಟುಕಿದಂತಾಯಿತು; ಕೆಂಡದ ಹೆಡಿಗೆಯನ್ನು ಅವನ ನೆತ್ತಿಯ ಮೇಲೆ ಹೊರಿಸಿದಂತಾಯಿತು. ಏಟು ತಿಂದು ಕೆರಳಿದ ಮೃಗದಂತೆ ಕೊಸಕ್ಕನೆ ಹಿಂದಿರುಗಿ ಹೇಳಿದ—

"ಮತ್ತೊಮ್ಮೆ ನನ್ನ ಬಳಿ ಆ ಮಾತು ಎತ್ತಬೇಡಿ."

ಚಾಟಿಯ ಪೆಟ್ಟನಂತಿದ್ದ ಆ ಕರ್ಕಶವಾದ ಮಾತಿನ ಆಘಾತದಿಂದ ಒಂದು ಗಳಿಗೆ ಅಪ್ರತಿಭನಾಗಿ, ಬಳಿಕ ಚೇತರಿಸಿಕೊಂಡು, ಲಿಂಗಣ್ಣ ನಾಯಕನ ಮೊಗವನ್ನು ನೋಡಿದ ದಳವಾಯಿ ಭರಮಣ್ಣ. ಆತ ನೊಂದಿಗೆ ಬಂದಿದ್ದ ಉಳಿದವರೂ ಮಾತನಾಡದೆ, ಒಮ್ಮೆ ಲಿಂಗಣ್ಣ ನಾಯಕನತ್ತ, ಒಮ್ಮೆ ದಳವಾಯಿ ಭರಮಣ್ಣನತ್ತ ನೋಡುತ್ತಾ ಕುಳಿತಿದ್ದರು.

ಕರ್ಕಶಧ್ವನಿಯಲ್ಲಿ ಆ ಮಾತನ್ನು ಹೇಳಿದ ಲಿಂಗಣ್ಣನಾಯಕನ ಮುಖದಲ್ಲಿ ಕ್ರೋಧದ ಕಠೋರತೆಯಿರಲಿಲ್ಲ; ಅಪಾರ ವ್ಯಥೆಯ ಅಸೀಮ ಯಾತನೆಯ ವಿಕಾರತೆ ಇತ್ತು. ಆ ಮೊಗವನ್ನು ನೋಡಿಯೇ ನೋಡಿದ ದಳವಾಯಿ ಭರಮಣ್ಣ.

ನಲವತ್ತು ವರ್ಷಗಳು ಬಳಿಸಾರಿದ ಆ ಮೊಗದ ಮೇಲೆ ಅರವತ್ತು ದಾಟಿದ ವೃದ್ಧಾಪ್ಯ ಅಧಿಕಾರ ಮಾಡುತ್ತಿತ್ತು. ಆಳವಾಗಿ, ಕಪ್ಪು ವರ್ತುಲಗಳು ಸುತ್ತುವರಿದ ಅವನ ಕಣ್ಣುಗಳು ಕಣ್ಣಿನಂತಿರದೆ ದುಃಖದ ಗೂಡುಗಳಂತಿದ್ದವು. ಸಂಪೂರ್ಣವಾಗಿ ನರೆಯಲು ಬಂದಿದ್ದ ಕೂದಲು ನೆತ್ತಿಯ ಮೇಲೆ ಬೂದಿ ಹರಡಿದಂತಿತ್ತು. ಒಮ್ಮೆ ಸಾಧನೆಯಿಂದ ಪಟುವಾಗಿದ್ದ ಮೈಯ ಮಾಂಸಖಂಡಗಳು, ಕೃಶವಾಗಿ, ಸಡಿಲವಾಗಿ, ಎಲುಬಿನ ಹಂದರದ ಮೇಲೆ ಜೋಲು ಬಿದ್ದಿದ್ದವು. ಮನಸ್ಸಿನ ಉದ್ವೇಗವನ್ನು ತಡೆಯಲಾಗದೆ, ತೆರೆದು, ಬಿಗಿದು, ಮತ್ತೆ ತೆರೆದು ನಸುಕಂಪಿಸುವ ನೀಳವಾದ ಕೈಬೆರಳುಗಳು, ಗಾಳಿಯನ್ನೇ ಬಗೆದು ಏನನ್ನೋ ಬೆದಕುವಂತೆ

ಇದ್ದವು. ಅದನ್ನು ನೋಡಿ ತನ್ನ ಕರುಳನ್ನೇ ಆ ಕೈಬೆರಳುಗಳು ಹೊಸಕಿ ದಂತಾಯಿತು ದಳವಾಯಿ ಭರಮಣ್ಣನಿಗೆ. ಆ ಉಗ್ರದುಃಖದ ರುದ್ರ ಮೂರ್ತಿಯ ಇದಿರು ನಿಲ್ಲದೆ, ಎತ್ತಲಾದರೂ ಓಡಿಹೋಗಬೇಕು ಎನ್ನಿ ಸಿತು ಆತನಿಗೆ. ಆದರೆ ಬಂದ ಕರ್ತವ್ಯಭಾರ ತಡೆದು ನಿಲ್ಲಿಸಿ, ನುಡಿಯ ಲಾರೆನೆನ್ನುವ ಆತನ ನಾಲಗೆಯನ್ನು ನುಡಿಸಿತು :

"ಈ ಮಾತನ್ನು ಕೇಳಲು ತಮಗೆಷ್ಟು ದುಃಖವಾಗುತ್ತಿದೆಯೋ, ಅಷ್ಟೇ ದುಃಖ ಆ ಮಾತನ್ನು ಆಡಲು ನನಗೂ ಆಗುತ್ತದೆ ನಾಯಕರೇ. ತಮ್ಮ ಹೃದಯದ ಅಳಲನ್ನು ನಾನು ಬಲ್ಲೆ. ಆದರೂ ಇಂದಿನ ಪರಿಸ್ಥಿತಿ ಯಲ್ಲಿ ಈ ಮಾತನಾಡದೆ ಉಪಾಯವಿಲ್ಲ. ನೀವು ನಿಮ್ಮೆಲ್ಲಾ ದುಃಖ ವನ್ನು ಒತ್ತಟ್ಟಿಗಿಟ್ಟು ನಾವು ಹೇಳಿದುದಕ್ಕೆ ಒಪ್ಪಿಕೊಳ್ಳಬೇಕು. ಇಲ್ಲ ವಾದರೆ ಸಿದ್ಧರು ಅನುಗ್ರಹಿಸಿದ ಈ ಸಿಂಹಾಸನ ಅನಾಥವಾಗುತ್ತದೆ."

"ಅನಾಥವಾಗುತ್ತದೆಯೋ ಈ ಸಿಂಹಾಸನ?" ವ್ಯಂಗ್ಯದ ಮುಳ್ಳುಧ್ವನಿಯಲ್ಲಿ ಕೇಳಿದ ಲಿಂಗಣ್ಣನಾಯಕ. "ಇದು ಸಿಂಹಾಸನವಲ್ಲ; ಸೂಳೆ. ಎಂದು ಇದು ತನ್ನ ತೊಡೆಯ ಮೇಲೆ ದ್ರೋಹಿಯೊಬ್ಬನಿಗೆ ಎಡೆ ಕೊಟ್ಟಿತೋ ಅಂದೇ ಇದು ನನಗೆ ತ್ಯಾಜ್ಯವಾಯಿತು. ಇಂದು ನನಗೂ ಈ ಸಿಂಹಾಸನಕ್ಕೂ ಯಾವ ಸಂಬಂಧವೂ ಇಲ್ಲ. ಇದನ್ನು ಬಯಸಿ ಅಲೆಯುವ ಸಾವಿರ ಆಸೆಯ ಪ್ರೇತಗಳು ದುರ್ಗದಲ್ಲಿವೆ. ಯಾರಿಗೆ ಇದು ಬೇಕೋ ಅವರಿಗೆ ಇದನ್ನು ಕೊಡಿ. ನಾಯಿ ಮುಟ್ಟಿದ ಈ ಮಡಕೆ ನನಗೆ ಬೇಡ."

"ತಮ್ಮ ಮಾತು ನಿಜ. ಈ ಸಿಂಹಾಸನವನ್ನು ಬಯಸಿ ಅಲೆಯು ವವರಿಗೇನೂ ದುರ್ಗದಲ್ಲಿ ಕಡಮೆ ಇಲ್ಲ ನಾಯಕರೇ. ಅದನ್ನು ನಾವೂ ಬಲ್ಲೆವು. ದುರ್ಗದ ಒಳಗಿರುವಂತೆ, ದುರ್ಗದ ಹೊರಗೂ ಹತ್ತಾರು ಪಿಶಾಚಿಗಳು ಇದರತ್ತ ಕಣ್ಣರಳಿಸಿ ನೋಡುತ್ತಿವೆ. ಆದರೆ ಇದನ್ನು ಆ ಪಿಶಾಚ ಪರಿವಾರಕ್ಕೆ ಬಲಿಕೊಡಬಾರದೆಂಬುದೇ ನಮ್ಮೆಲ್ಲರ ಆಕಾಂಕ್ಷೆ."

ಅವರಿಬ್ಬರ ಮಾತಿನ ನಡುವೆ ತಾನೂ ಬೆರೆತು ಹೇಳಿದ ದಳವಾಯಿ ರಂಗಣ್ಣ.

"ದಳವಾಯಿ ರಂಗಣ್ಣನವರ ಮಾತು ಸತ್ಯ ನಾಯಕರೇ. ಈ

ಸಿಂಹಾಸನಕ್ಕೆ ಪಟ್ಟಾಧಿಕಾರಿಗಳು ಇಲ್ಲದಂತಾಗುವ ದಿನವನ್ನೇ ಕಾಯು ತ್ತಿದಾರೆ ಬಹುಜನ. ಆ ರಾಜಕೀಯವನ್ನು ನಾನೇನೂ ತಮಗೆ ವಿವರಿಸ ಬೇಕಾಗಿಲ್ಲ. ದುರ್ಗದ ಸುತ್ತಮುತ್ತ ಹರಪನಹಳ್ಳಿ, ರಾಯದುರ್ಗ, ಸಿರಾ, ತರೀಕೆರೆಯವರು ಸಂದು ಸಿಕ್ಕೀತೇ ನುಗ್ಗೋಣ ಎಂದು ಕಾದಿ ದಾರೆ. ಅವರಿಗಿಂತಲೂ ಹೆಚ್ಚಾಗಿ ಇತ್ತ ಇಕ್ಕೇರಿಯವರು, ಅತ್ತ ಬಿಜಾ ಪುರದ ಕಡೆಯವರೂ ಈ ದುರ್ಗ ತಮ್ಮದಾಗುವ ದಿನ ಎಂದು ಬಂದೀತೋ ಎಂತಲೇ ಕಾಯುತ್ತಿದಾರೆ. ಒಳಗಿನ ಶತ್ರುಗಳೂ ಇಲ್ಲದಿಲ್ಲ. ಚಿಕ್ಕಣ್ಣನಾಯಕರ ಮರಣದಿಂದ ಕೈಕಟ್ಟಿದಂತಾಗಿರುವ ದಳವಾಯಿ ಮುದ್ದಣ್ಣನೂ ಏನೇನೋ ಹಂಚಿಕೆ ಮಾಡುತ್ತಿದ್ದಾನೆಂದು ಸುದ್ದಿ ಬಂದಿದೆ. ಆದರೆ ಅದಾವುದಕ್ಕೂ ಅವಕಾಶಕೊಡನೆ, ನಮ್ಮೆಲ್ಲರ ಮಾತು ನಡೆಯಲು ಅವಕಾಶವಿರುವಾಗಲೇ, ನಿಮ್ಮನ್ನು ಸಿಂಹಾಸನದ ಮೇಲೆ ಕೂರಿಸಿ, ಈ ಒಳಸಂಚುಗಳನ್ನು ಮೊಳಕೆಯಲ್ಲೇ ಮುರಿಯ ಬೇಕೆಂಬುದು ದುರ್ಗದ ಹಿತೈಷಿಗಳ ಬಯಕೆ. ಹಿರಿಯರೆಲ್ಲರ ಅಭಿ ಪ್ರಾಯವೂ ಹಾಗೇ ಇದೆ. ಆದ್ದರಿಂದಲೇ ನಾನು ನಿಮ್ಮನ್ನು ಕೇಳುತ್ತಿರು ವುದು—ನಿಮ್ಮ ಮನಸ್ಸಿಗೆ ಎಷ್ಟೇ ಬೇಡವಾದರೂ, ದುರ್ಗದ ಹಿತದೃಷ್ಟಿ ಯಿಂದ ಇದಕ್ಕೆ ಒಪ್ಪಿಕೊಳ್ಳಿ."

—ಭುವನಪ್ಪನವರ ಮಗ ಪರಶುರಾಮಪ್ಪ ಹೇಳಿದ.

"ನೀವೂ ಈ ಮಾತು ಹೇಳುತ್ತೀರಾ ಪರಶುರಾಮಪ್ಪನವರೇ?" ಪರಶುರಾಮಪ್ಪನ ಮಾತು ಕೇಳಿ ವ್ಯಥೆಗೊಂಡು ಕೇಳಿದ ಲಿಂಗಣ್ಣ ನಾಯಕ. "ನಿಮಗಿನ್ನೂ ಈ ಸಿಂಹಾಸನದ ಭ್ರಾಂತಿ ತೊಲಗಿಲ್ಲವೇ? ಹುಟ್ಟಿ ದಂದಿನಿಂದ, ಸಾಯುವವರೆಗೂ, ಎಪ್ಪತ್ತು ವರ್ಷಗಳ ಕಾಲ ಈ ಸಿಂಹಾಸ ನಕ್ಕೇ ಜೀವವನ್ನು ತೆಯ್ದ ಭುವನಪ್ಪನವರನ್ನು ಬೀದಿಯ ಭಿಕಾರಿ ಹೆಣವಾಗಿ ಮಾಡಿದ ಈ ಸಿಂಹಾಸನದ ಬಗ್ಗೆ ಇನ್ನೂ ನಿಮಗೆ ಮೋಹ ವಿದೆಯೇ? ನೀವೆಲ್ಲರೂ ನನ್ನ ಹಿತೈಷಿಗಳು, ದುರ್ಗದ ಹಿತೈಷಿಗಳು; ನಾನು ಬಲ್ಲೆ. ನಿಮ್ಮ ಮಾತಿಗೆ ಇಲ್ಲವೆನ್ನುವ ಯೋಗ್ಯತೆಯೂ ನನ್ನದಲ್ಲ. ಅದಕ್ಕಾಗಿಯೇ ನಿಮ್ಮಲ್ಲಿ ಸೆರಗೊಡ್ಡಿ ಬೇಡುತ್ತೇನೆ—ತಾನಾಗಿಯೇ ತೊಲಗಿ ಹೋಗಿರುವ ಈ ಪಿಶಾಚಿಯನ್ನು ಮತ್ತೆ ನನಗೆ ಕಟ್ಟಬೇಡಿ.

ನನ್ನನ್ನು ನಂಬಿದ ತಾಯಿ ನೀರಿನ ಪಾಲಾಗಿ ಹೋದ ಮೇಲೆ ನಾನು ಬದುಕಿರಬಾರದು. ಆದರೂ ಆತ್ಮಹತ್ಯೆಯ ಪಾಪಕ್ಕಳುಕಿ, ಜೀವಂತ ಶವದಂತೆ ಬದುಕಿದೇನೆ. ಆ ತಾಯಿಯನ್ನು ಉಳಿಸಿಕೊಂಡು ಸೇವೆ ಮಾಡುವಷ್ಟು ಭಾಗ್ಯ ಈ ನಿರ್ಭಾಗ್ಯನ ಹಣೆಯಲ್ಲಿ ಬರೆದಿರಲಿಲ್ಲ. ಇದ್ದಷ್ಟು ದಿನ ಆಕೆಯ ಸಮಾಧಿಗೆ ಹೂವುಹಾಕಿ, ದೀಪಹಚ್ಚಿ ಕಣ್ಣು ಮುಚ್ಚುತ್ತೇನೆ. ಅಷ್ಟಕ್ಕೆ ನನಗೆ ಅವಕಾಶ ಕೊಡಿ. ನನಗೆ ಬೇರಾವ ಸ್ವರ್ಗವೂ ಬೇಡ."

"ನಾಯಕರು ನನ್ನನ್ನು ಕ್ಷಮಿಸಬೇಕು. ಹೀಗೆ ಹೇಳುತ್ತೇನೆಂದು ಏನೂ ತಿಳಿಯಬಾರದು...."

ಲಿಂಗಣ್ಣನಾಯಕ ಆಡಿದುದನ್ನು ಕೇಳಿ ಹೇಳಿದ ಭರಮಣ್ಣ.

"ಏನು ಹೇಳಿ ಭರಮಣ್ಣ. ದೇಸಣ್ಣನವರ ಮಕ್ಕಳಿಗೆ ಮನ ಬಿಚ್ಚಿ ಮಾತನಾಡುವ ಅಧಿಕಾರವಿದೆ."

—ಹೇಳಬೇಕೆಂದು ನಾಲಗೆಯ ತುದಿಯವರೆಗೆ ಬಂದ ಮಾತನ್ನು ಆಡಲಾರದೆ ಹಿಂಜರಿಯುತ್ತಿದ್ದ ಭರಮಣ್ಣನತ್ತ ನೋಡಿ ಹೇಳಿದ ಲಿಂಗಣ್ಣನಾಯಕ.

"ಇಷ್ಟೆ . . . . ಇಷ್ಟೆ . . . . ನಾನು ಹೇಳಬೇಕೆಂದಿದ್ದುದು— ನಮ್ಮ ನಿಮ್ಮಂಥ ಗಂಡಸರು ಆಡುವಂಥ ಮಾತಲ್ಲ."

"ಗಂಡಸರು!" ಭರಮಣ್ಣನ ಮಾತನ್ನು ಕೇಳಿ ಲಿಂಗಣ್ಣನಾಯಕ ವಿಕಟವಾಗಿ ನಕ್ಕು ಹೇಳಿದ: "ನಾನು ಗಂಡಸು! ಆಮಾತು ಹೇಳಿ ನನ ಗೇಕೆ ಅಪಮಾನ ಮಾಡುತ್ತೀರಿ ಭರಮಣ್ಣ? ಬಿಡಿ—ಅದು ನಮಗೆ ಶೋಭಿ ಸುವ ಮಾತಲ್ಲ."

"ಏಕೆ"

"ಏಕೇ? ಗಂಡಸಾಗಿ ಹುಟ್ಟಿ ಗಂಡಸಾಗಿ ಬದುಕಿದವನನ್ನು ನಂಬಿ ಕೆಟ್ಟವರ ಮಾತು ಎಲ್ಲಾದರೂ ಕೇಳಿದೀರಾ ನೀವು"

"ಈಗ ಆ ಮಾತೆಲ್ಲಾ ಏಕೆ ನಾಯಕರೇ?"

"ಏಕೆಂದರೆ ಇಷ್ಟಕ್ಕೇ. ನಮ್ಮನ್ನು ಗಂಡಸು ಎಂದು ನೆಚ್ಚಿದವರು ಯಾರೂ ಇನ್ನೂ ನೀನು ಗಂಡಸು ಎಂದು ಹೇಳಲು ಬದುಕಿಲ್ಲ.

ಆದಕ್ಕಾಗಿ. ನಂಬಿದ ಒಬ್ಬರನ್ನು ಶತ್ರುಗಳು ತುಂಬಿದ ಸಭೆಯಲ್ಲಿ ಕೊಂದರು. ನಂಬಿದ ಮತ್ತೊಂದು ಜೀವ ನೀರಿನ ಪಾಲಾಯಿತು. ಆದರೂ ನಾನು, ಗಂಡಸು ಬದುಕಿದೇನೆ! ಬೆಳೆದ ಮೀಸೆಗೂ ಭಾರವಾಗಿ ಬದುಕಿದೇನೆ, ಅದೊಂದೇ ನನ್ನಲ್ಲಿ ಉಳಿದಿರುವ ಗಂಡಸುತನದ ಲಾಂಛನ. ಆ ಮಾತು ಬೇಡ ಬಿಡಿ ಭರಮಣ್ಣ. ಬೇರೆ ಯಾವುದಾದರೂ ಮಾತು ಇದ್ದರೆ ಹೇಳಿ."

"ಈಗ ಹೇಳಲು ಉಳಿದಿರುವುದು ಅದು ಒಂದೇ ಮಾತು. ನೀವೆಷ್ಟು ಬೇಡವೆಂದರೂ ನಾವು ಆ ಮಾತನ್ನು ಆಡಿಯೇ ತೀರಬೇಕು. ನಾನಾಡುವ ಮಾತನ್ನು ನೀವೂ ತಾಳ್ಮೆಯಿಂದ ಕೇಳಲೇಬೇಕು."

"ಅದೇನು ಹೇಳಿ?"

"ನಿಜ ಹೇಳಬೇಕೆಂದರೆ ಒಮ್ಮೆ ನೀವು ಸಿಂಹಾಸನ ಬೇಡವೆಂದುದೇ ಇಷ್ಟೆಲ್ಲ ಅನಾಹುತಕ್ಕೆ ಕಾರಣವಾಯಿತು. ನ್ಯಾಯವೋ, ಅನ್ಯಾಯವೋ ನೀವಾಗ ಪಟ್ಟಕ್ಕೆ ಬಂದಿದ್ದರೆ, ಅನ್ಯಾಯವಾಗಿದ್ದರೆ, ಅಷ್ಟು ಜನ ಕೆಲವು ದಿನ ಅನ್ಯಾಯವಾಯಿತು ಎಂದುಕೊಂಡು ಸುಮ್ಮನಾಗುತ್ತಿದ್ದರು. ಮುಂದಿನ ಹತ್ಯಾಕಾಂಡದ ಭೀಭತ್ಸ ನಡೆಯುತ್ತಿರಲಿಲ್ಲ. ಆಗ ನೀವು ಧರ್ಮಕ್ಕೆ ಕಟ್ಟುಬಿದ್ದು, ಬೇಡ ಎಂದು ಹೇಳಿ ಮುಂದೆ ನಡೆದುದೆಲ್ಲಕ್ಕೂ ದಾರಿ ಮಾಡಿಕೊಟ್ಟಿರಿ. ಈಗಲೂ . . ."

ನಡುವೆ ಮಾತನಾಡಿದ ಪರಶುರಾಮಪ್ಪ ಅಷ್ಟು ಹೇಳಿ ಮಾತನ್ನು ತಡೆದು ಆತನ ಮನಸ್ಸಿನ ಸಂಕೋಚವನ್ನು ಮುಖಮುದ್ರೆಯಿಂದಲೇ ಅರಿತುಕೊಂಡು ಹೇಳಿದ ಲಿಂಗಣ್ಣನಾಯಕ :

"ಈಗಲೂ ....ಏನು ಹೇಳಿ. ನೋಡಿ ಪರಶುರಾಮಪ್ಪ. ನೀವು ಯಾವ ಮಾತನ್ನೂ ಹೇಳಲು ಹಿಂಜರಿಯಬೇಕಾಗಿಲ್ಲ, ಯಾವ ಮಾತಿನಿಂದಲೂ ನನಗೆ ವ್ಯಥೆಯಾಗುತ್ತದೆ ಎಂದು ಸಂಕೋಚಪಡಲು ಕಾರಣವಿಲ್ಲ. ನಿಮಗೆ ಗೊತ್ತಿಲ್ಲ—ಈಗ ನನಗೆ ಯಾವ ಮಾತಿನಿಂದಲೂ ವ್ಯಥೆಯಾಗುವುದಿಲ್ಲ, ಸಿಟ್ಟೂ ಬರುವುದಿಲ್ಲ. ವ್ಯಥೆಯಾಗುವ, ಸಿಟ್ಟು ಬರುವ ಕಾಲವೂ ಒಂದಿತ್ತು. ಅದು ಈಗ ಬರಿಯ ಗತವೈಭವ. ಆದುದರಿಂದ ಹೇಳಬೇಕಾದುದನ್ನು ನಿಸ್ಸಂಕೋಚವಾಗಿ ಹೇಳಿ."

"ನಿಮಗೆ ವ್ಯಥೆಯಾಗುವುದಿಲ್ಲ ಎಂದು ನೀವು ಹೇಳಿದರೂ, ದಿನವೂ ನಿತ್ಯವೂ ನೀವೆಂಥ ದಾರುಣ ಯಾತನೆಯ ಸುಣ್ಣದ ಕುದಿಯಲ್ಲಿ ಬೇಯು ತ್ತಿದ್ದೀರೆಂಬುದನ್ನು ನಾನು ಬಲ್ಲೆ. ಈಗ ನೀವು ಆಡಿದ ಮಾತೂ ಅದರ ಪ್ರತಿಕ್ರಿಯೆಯೇ. ಆದರೂ ಈಗ ಸಂಕೋಚಕ್ಕೆ, ಮುಖಮರ್ಯಾದೆಗೆ ಸಮಯವಲ್ಲವಾದ್ದರಿಂದ ಹೇಳುತ್ತಿದ್ದೇನೆ. ಈಗ ಮತ್ತೊಂದು ಬಾರಿ ನೀವು ಸಿಂಹಾಸನ ಬೇಡವೆನ್ನುವಿರಾದರೆ-ಅದು ಯಾವುದೇ ಕಾರಣಕ್ಕೂ ಇರಬಹುದು—ಆದರೆ, ಮತ್ತೊಮ್ಮೆ ದುರ್ಗವನ್ನು ಭಯಂಕರ ಗಂಡಾಂ ತರದಲ್ಲಿ ಕೆಡಹುವುದಂತೂ ನಿಶ್ಚಯ. ಆಗ ಬಂದ ವಿಪತ್ತು ಒಂದೆರಡು ತಲೆಗಳನ್ನು ತಿಂದು ಬದುಕಿತು. ಆದರೆ ಈ ಬಾರಿ, ನೆತ್ತರ ಹೊಳೆಯೇ ಹರಿಯಬೇಕಾಗುವುದೇನೋ?"

—ನಿಶ್ಚಿತಧ್ವನಿಯಲ್ಲಿ ಹೇಳಿದ ಪರಶುರಾಮಪ್ಪ.

"ಆ....ನೆತ್ತರು ಹೊಳೆ ಹರಿಯಬೇಕೇ?....ಮತ್ತೊಮ್ಮೆ ನೆತ್ತರ ಹೊಳೆ ಹರಿಯಬೇಕೇ? ಇದೇನು ಮಾತು ನೀವಾಡುತ್ತಿರುವುದು ಪರಶು ರಾಮಪ್ಪ?"

—ನೆತ್ತರಿನ ನೆನಪಿನಿಂದ ಬೆಚ್ಚಿ ಕೇಳಿದ ಲಿಂಗಣ್ಣನಾಯಕ.

"ಅಹುದು ನಾಯಕರೇ, ನೆತ್ತರಿನ ಹೊಳೆ ಹರಿಯುತ್ತಿದೆ. ಈ ಹನ್ನೆರಡು ವರ್ಷಗಳ ಕಾಲ ನೀವು ರಾಜಕೀಯದ ಸಂಪರ್ಕದಿಂದ ದೂರ ವಾಗಿದ್ದು ಬಿಟ್ಟಿರಿ. ಅಂದು ಎಳೆಯ ಮರಿಯಾಗಿದ್ದ ಕಾಳಸರ್ಪ, ಇಂದು ಬಲಿತು ಘಟಸರ್ಪವಾಗಿರುವುದು ನಿಮಗೆ ಕಾಣುತ್ತಿದೆಯೋ ಇಲ್ಲವೋ. ಆದರೆ ಅನಿವಾರ್ಯವಾಗಿ ರಾಜಕೀಯದ ಕೆಸರಿನ ಕೂಪದಲ್ಲೇ ವಾಸ ಮಾಡಬೇಕಾಗಿ ಬಂದ ನಮಗೆ, ಇಂದು ನೀವು ನಾಯಕತನ ಬೇಡ ವೆಂದರೆ, ಮುಂದೆ ಬರಲಿರುವ ಕರಾಳ ಭವಿಷ್ಯ ಅಂಗೈಯ ನೆಲ್ಲಿಯ ಕಾಯಿಯಷ್ಟು ಸ್ಪಷ್ಟವಾಗಿ ಕಾಣುತ್ತಿದೆ. ದಳವಾಯಿ ಮುದ್ದಣ್ಣ, ಓಬಣ್ಣ ನಾಯಕರ ಕೊಲೆಮಾಡಿ, ಚಿಕ್ಕಣ್ಣನಾಯಕರನ್ನು ಪಟ್ಟಕ್ಕೆ ತಂದುದು ಏಕೆಂದು ನಿಮಗೆ ಗೊತ್ತಿಲ್ಲವೇ? ಅದು ಚಿಕ್ಕಣ್ಣನಾಯಕರ ಮೇಲಿನ ವಿಶ್ವಾಸದಿಂದಲ್ಲ, ತನ್ನ ಮಾತು ಕೇಳುವ ಅವರ ನೆರಳಿನಲ್ಲಿ ತನ್ನ ಗರಿ

ಬಲಿಸಿಕೊಂಡು ತಾನು ಬಲವಾಗಬೇಕೆಂಬುದು. ಈಗ ಹಾಗೇ ಆಗಿದಾನೆ ಮುದ್ದಣ್ಣ."

"ನೀವೆಲ್ಲಾ ಇದ್ದೂ ಈ ವಿಷಸರ್ಪ ಬೆಳೆಯಲು ಏಕೆ ಬಿಟ್ಟಿರಿ?"

—ಕಕ್ಕುಲತೆಯಿಂದ ಕೇಳಿದ ಲಿಂಗಣ್ಣನಾಯಕ.

"ಏಕೆ? ನೀವೂ ಏಕೆ ಸುಮ್ಮನಿದ್ದಿರಿ? ನಮ್ಮ ಕೈಯನ್ನೂ ಯಾವುದೋ ಭ್ರಾಂತಿ ಬಂಧಿಸಿತ್ತು."

—ನಿರಾಶೆಯಿಂದ ಕರ್ಕಶವಾದ ಸ್ವರದಲ್ಲಿ ಹೇಳಿದ ಪರಶುರಾಮಪ್ಪ.

"ನಿಮಗೇನು ಭ್ರಾಂತಿ?"

"ಕತ್ತಲು ಕಳೆದ ಮೇಲೆ ಬೆಳಕು ಬರಬಹುದೆಂಬ ಮಾನವ ಸಹಜವಾದ ಹುಚ್ಚು ಹಂಬಲ. ಕಗ್ಗತ್ತಲೆಯ ರುದ್ರಪ್ರಕರಣದ ಅನಂತರ, ತಮ್ಮ ಪಟ್ಟದ ಬಯಕೆ ತೀರಿದ ಬಳಿಕಲಾದರೂ ಚಿಕ್ಕಣ್ಣನಾಯಕರು ಮುದ್ದಣ್ಣನನ್ನು ಹದ್ದುಬಸ್ತಿನಲ್ಲಿಡಬಹುದು, ಅವರ ಹೊಟ್ಟೆಯಲ್ಲಾದರೂ ಸಂತಾನವಾಗಿ, ಮತ್ತೆ ಈ ಘೋರ ಮರುಕಳಿಸದಿರಬಹುದು ಎಂಬ ಭ್ರಾಂತಿ ನಮ್ಮನ್ನು ಆವರಿಸಿತ್ತು. ಆದರೆ ಚಿಕ್ಕಣ್ಣನಾಯಕರ ಕಾಲದಲ್ಲಾದ ಸಾಲು ಯುದ್ಧಗಳಿಂದ, ನಾಯಕರ ಬಳಿ ಮುದ್ದಣ್ಣನ ಪ್ರತಿಷ್ಠೆ ಮತ್ತಷ್ಟು ಬೆಳೆಯಲು ಕಾರಣವಾಯಿತು."

"ಆದರೆ ಷಂಷೇರ್‌ಖಾನನ ದಂಡು ಹರಿಹರವನ್ನು ದಾಟಿ ಬಾತಿ ಗುಡ್ಡದ ಬಳಿಯವರೆಗೂ ಬಂದಾಗ, ಸಾಕಷ್ಟು ಸೈನ್ಯವಿಲ್ಲದಿದ್ದರೂ, ಅವನನ್ನು ಬೆದರಿಸಿ ಓಡಿಸಿದ ಮುದ್ದಣ್ಣನ ಜಾಣ್ಮೆ ಯಾರೂ ಮೆಚ್ಚುವಂತಹುದೇ ಅಲ್ಲವೆ? ನಿಮ್ಮಂತೆಯೇ, ಅಲ್ಲ ಇನ್ನೂ ಹೆಚ್ಚಾಗಿ ಮುದ್ದಣ್ಣ ನನಗೆ ಶತ್ರು. ಆದರೆ ರಾತ್ರಿಯ ಹೊತ್ತು ಎತ್ತಿನ ಕೋಡುಗಳಿಗೆ ಪಂಜುಕಟ್ಟಿಸಿ, ಅವುಗಳನ್ನು ಕಂಡೇ ಇದು ದುರ್ಗದ ದಂಡೆಂದು ತಿಳಿದು ಷಂಷೇರ್‌ಖಾನ್ ಪಲಾಯನ ಮಾಡುವಂತೆ ಮಾಡಿದನಲ್ಲಾ, ಅದು ಯಾರೂ ಹೊಗಳಬೇಕಾದಂಥ ಚಾತುರ್ಯ."

"ಅದನ್ನು ನಾವು ಅಲ್ಲ ಎನ್ನಲಿಲ್ಲ. ಮುದ್ದಣ್ಣನಲ್ಲಿ ಸಾಹಸವೂ ಇದೆ, ಜಾಣ್ಮೆಯೂ ಇದೆ. ಆದರೆ ಅದು ಹಿಂಸೆಯಿಂದ ಬದುಕುವ ಕಾಡು ಪಶುವಿನ ಎದೆಗಾರಿಕೆ, ಜಾಣ್ಮೆ. ಅದರ ಗುರಿ ಲೋಕೋಪ

ಕಾರವಲ್ಲ, ಸ್ವಾರ್ಥ. ಚಿಕ್ಕಣ್ಣನಾಯಕರ ಅನುಗ್ರಹದಿಂದ ತನಗಿಂತ ಹಿರಿಯರಾದವರನ್ನೆಲ್ಲಾ ಹಿಂದೆ ತುಳಿದು ದೊಡ್ಡ ದಳವಾಯಿಯಾಗಿದ್ದವನು, ತನ್ನ ಮೊದಲ ಯುದ್ಧದಲ್ಲೇ ಸೋತು ಬಂದಿದ್ದರೆ, ಮುಳ್ಳುಕಾಳಷ್ಟೂ ಮರ್ಯಾದೆಯು ಉಳಿಯುತ್ತಿರಲಿಲ್ಲ. ಆಯಿತು—ಗೆದ್ದು ಬಂದು ಅವನು ಮಾಡಿದುದೇನು? ಆ ಸಂದರ್ಭದ ನೆಪ ಮಾಡಿಕೊಂಡು ತನ್ನಿಬ್ಬರು ತಮ್ಮಂದಿರನ್ನು ದಳವಾಯಿ ಪಟ್ಟಕ್ಕೆ ಏರಿಸಿದ. ಸೇನೆಯ ಮುಖ್ಯ ಸ್ಥಳಗಳಲ್ಲೆಲ್ಲಾ ತನ್ನವರನ್ನೇ ತಂದು ತುಂಬಿ ತನ್ನ ಸ್ಥಾನವನ್ನು ಸುರಕ್ಷಿತವಾಗಿ ಮಾಡಿಕೊಂಡು, ಮತ್ತಷ್ಟು ಬಲಿಷ್ಠನಾದ. ಅಷ್ಟೇ ತಾನೇ ಅವನಿಂದ ಆದ ಉಪಕಾರ! ಒಂದು ದೃಷ್ಟಿಯಲ್ಲಿ ನೋಡಿದರೆ, ಆ ಯುದ್ಧದಲ್ಲಿ ಸೋಲಾಗಿದ್ದರೂ ಒಳಿತಾಗುತ್ತಿತ್ತೇನೋ ಎನಿಸುತ್ತದೆ. ಏನೋ ಆಗ ಆದುದಾಯಿತು. ಈಗ ಅದೇ ಭಯಂಕರ ವಿಪತ್ತಿನ ಬೆದರಿಕೆಯಾಗಿ ಪರಿಣಮಿಸಿದೆ."

ಭರಮಣ್ಣ ಹೇಳಿದ.

"ಏನು ಬೆದರಿಕೆ ನಿಮ್ಮನ್ನೆಲ್ಲ ಬಾಧಿಸುತ್ತಿದೆ ಭರಮಣ್ಣ?"

"ಮತ್ತೊಮ್ಮೆ ಪಟ್ಟಾಧಿಕಾರಿಯಿಲ್ಲದ ಸಿಂಹಾಸನ ಮತ್ತಿ ಮನೆತನದವರಿಂದ ಜಾರಿ, ದಳವಾಯಿಯ ಬಾಯಿಗೆ ಬೀಳಬಹುದು ಎಂಬ ಭೀತಿ ನಾಯಕರೇ. ಈಗಾಗಲೇ ಅವರ ಕಡೆಯವರು ಅಲ್ಲಲ್ಲಿ ಮಾತನಾಡಿಕೊಳ್ಳುತ್ತಿದ್ದಾರೆ. "ಹುಟ್ಟನಿಂದ ಯಾರೂ ಅರಸನಾಗುವುದಿಲ್ಲ; ಪರಾಕ್ರಮವಿದ್ದವನ ಮಡದಿಯಾಗುತ್ತಾಳೆ ಈ ರಾಜ್ಯಲಕ್ಷ್ಮಿ. ಮೂಲಪುರುಷ ತಿಮ್ಮಣ್ಣನಾಯಕರಿಗೆ ಈ ದುರ್ಗ ಒಲಿದದ್ದು ಹೀಗೇ ಅಲ್ಲವೇ? ಅವರಿಗೆ ಪಟ್ಟವಾದಾಗಲೇ ಸಿದ್ಧರು ಹೇಳಿದ್ದರು "ಅರಿತು ನಡೆದರೆ ಆರು ತಲೆ" ಎಂದು. ಆ ಆರು ತಲೆಯ ಕಾಲ ಮುಗಿಯಿತು." ಎಂದು ಹೀಗೇ ಏನೇನೋ ಅಡ್ಡಸುದ್ದಿ ಹರಡುತ್ತಿದ್ದಾರೆ...."

"ಮುದ್ದಣ್ಣನೇ ಹೀಗೆ ಹೇಳುತ್ತಾನೆಯೇ?"

—ಲಿಂಗಣ್ಣನಾಯಕ ಭರಮಣ್ಣ ಹೇಳಿದ ಸುದ್ದಿಯನ್ನು ಕೇಳಿ ಅಚ್ಚರಿಯಿಂದ ಕೇಳಿದ.

"ಮುದ್ದಣ್ಣ ಅಷ್ಟು ದಡ್ಡನಲ್ಲ. ಅವನೇ ಬಾಯಿಬಿಟ್ಟು ಹೇಳಿದರೆ ಅವನ ಬಣ್ಣವೇ ಬಯಲಾಗುತ್ತದೆ. ಅದಕ್ಕೇ ತಾನು ಆ ಮಾತನಾಡದೆ ಹತ್ತಾರು ರೀತಿಯಲ್ಲಿ ಆ ಸುದ್ದಿ ಹಬ್ಬಿಸುತ್ತಿದ್ದಾನೆ. ಮೊನ್ನೆ ಸಂಜೆ ಉತ್ಸವಾಂಬ ದೇವಾಲಯದ ಮುಂದಿನ ಚೌಪಥದಲ್ಲಿ ಕಾಲಜ್ಞಾನದ ದಾಸಯ್ಯನೊಬ್ಬ "ಆರು ತಲೆ ಕಳೆದೀತು, ಅರಸು ಬದಲಾದೀತು. ದುರ್ಗ ವನು ಕಾಪಾಡಿದವರೆ ದುರ್ಗದ ಒಡೆಯರಾದಾರು; ಓಲೈಸಿದವರೆ ಓಲಗವ ನಡೆಸಿಯಾರು" ಎಂದು ಕೂಗುತ್ತಿದ್ದನಂತೆ. ಅದನ್ನು ಕೇಳಿದ ಜನ ಆಗಲೇ ಗುಜುಗುಜು ಮಾತಾಡಿಕೊಳ್ಳುತ್ತಿದ್ದಾರೆ.

"ಹಾಗೇ ? ಆದರೆ ಮುದ್ದಣ್ಣ ಏನು ಹೇಳುತ್ತಾನೆ."

"ಏನು ಹೇಳುತ್ತಾನೆ? ತಾನು ಜನರ ಕಣ್ಣಿನಲ್ಲಿ ಒಳ್ಳೆಯವ ನಾಗುವ ಮಾತನ್ನೇ ಹೇಳುತ್ತಾನೆ."

"ಏನು ?"

"ಈಗ ನಾಯಕನ ಸಂತಾನವಾಗಿ ಉಳಿದಿರುವವರು ನೀವು. ನೀವೇ ಪಟ್ಟಕ್ಕೆ ಬಂದರೆ ಆದೀತು ಎಂತ. ಅದನ್ನು ತಾನು ಬಾಯಿಬಿಟ್ಟು ಹೇಳುವುದಿಲ್ಲ. ಅದು ತನ್ನ ಮಾತು ಎಂಬಂತೆ ಬೇರೆಯವರ ಬಾಯಲ್ಲಿ ಆಡಿಸಿ, ಸಂದರ್ಭ ಹೇಗೋ ಎಂದು ನೋಡುತ್ತಿದ್ದಾನೆ."

—ಪರಶುರಾಮಪ್ಪ ಹೇಳಿದ.

"ಆದರೆ ನನಗೆ ಸಿಂಹಾಸನದ ಬಯಕೆ ಇಲ್ಲವೆನ್ನುವುದು ಅವನಿಗೆ ತಿಳಿಯದೇ ?"

"ತಿಳಿಯದೇ ಏನು ? ತಿಳಿದೂ ತಿಳಿದೂ ಉದ್ದೇಶಪೂರ್ವಕವಾಗಿಯೇ ಈ ಸುದ್ದಿ ಹಬ್ಬಿಸುತ್ತಿದ್ದಾನೆ.".

"ಏಕೆ ?"

"ನಿಮ್ಮಿಂದ ಮತ್ತೊಮ್ಮೆ ಸಿಂಹಾಸನ ಬೇಡ ಎಂಬ ಮಾತನ್ನು ಆಡಿಸಲು. ನೀವು ಹತ್ತು ಜನದ ಮುಂದೆ ಈ ಮಾತು ಹೇಳಿದರೆ ಅವನ ದಾರಿ ಸುಗಮವಾಗುತ್ತದೆ. ಅವರ ಹಂಬಲ ನಿರಾಯಾಸವಾಗಿ ಫಲಿಸುತ್ತದೆ."

"ಅಂದರೆ . . . . ?"

ಪರಶುರಾಮುಪ್ಪನ ಮಾತು ಅರ್ಥವಾಗದವನಂತೆ ಕೇಳಿದ ಲಿಂಗಣ್ಣ ನಾಯಕ.

“ಅಂದರೆ . . . . ಇರುವ ನೀವು ಒಬ್ಬರು ಈ ಸಿಂಹಾಸನ ಬೇಡವೆಂದರೆ ಸಿಂಹಾಸನಕ್ಕೆ ಈಗ ಮತ್ತಾರೂ ದಿಕ್ಕಿಲ್ಲ ಎಂದು ಹೇಳಿ ಅಹುದು ಎಂದು ಹತ್ತು ಜನದ ಬಾಯಲ್ಲಿ ಅನ್ನಿಸಿ, ಬಳಿಕ ತಾನೇ ಸಿಂಹಾಸನವೇರುವುದು.”

“ಓ ! ತಾನೇ ಸಿಂಹಾಸನವೇರುವ ಚಪಲವೇ ಈ ತೊತ್ತಿನ ಮಗನಿಗೆ?”

—ಆ ಮಾತು ಕೇಳಿ, ತಟಕ್ಕನೆ ತಾಳ್ಮೆಗೆಟ್ಟು ಹೇಳಿದ ಲಿಂಗಣ್ಣ ನಾಯಕ.

“ಸಲಿಗೆ ಕೊಟ್ಟ ನಾಯಿ ಸಿಂಹಾಸನ ಬೇಡಿತು ಅನ್ನುವ ಗಾದೆಯನ್ನು ಕೇಳಿಲ್ಲವೇ ನೀವು. ಮುದ್ದಣ್ಣನೂ ಅಂಥ ಶ್ವಾನವೇ. ಅದಕ್ಕೇ ಹಾಗಾಗಬಾರದು ಎಂತಲೇ ನಿಮ್ಮ ಬಳಿಗೆ ನಾವು ಓಡಿಬಂದದ್ದು. ಅವನು ನೀವಾದರೆ ಆಗಬಹುದು ಎನ್ನುವ ಮಾತು ಆಡುತ್ತಿರುವಾಗಲೇ ನಿಮ್ಮಿಂದ ಅಸ್ತು ಎನ್ನಿಸಿ, ಅವನ ಹಂಚಿಕೆಯನ್ನು ವಿಫಲಗೊಳಿಸಬೇಕು; ದುರ್ಗದ ಸಿಂಹಾಸನದ ಮೇಲೆ ನಾಯಕರ ಸಂತಾನವೇ ವಿರಾಜಿಸಬೇಕು ಎಂಬ ಅಭಿಪ್ರಾಯದಿಂದಲೇ ಧಾವಿಸಿ ಬಂದೆವು. ಆದರೆ ನೀವು ಎಲ್ಲ ಚಿಂತೆಯನ್ನೂ ಬಿಟ್ಟು ಸನ್ಯಾಸಿಯಾಗುತ್ತೇನೆ ಎನ್ನುತ್ತೀರಿ. ನಿಮಗೇ ದುರ್ಗದ ಅಭಿಮಾನ ತಪ್ಪಿದ ಮೇಲೆ ನಾವು ತಾನೇ ಮಾಡುವುದೇನು? ನಾಗತಿಯವರ ಹಾದಿ ಹಿಡಿದು ಹೊಂಡಕ್ಕೆ ಹಾರಿಕೊಳ್ಳಬೇಕಾದುದೊಂದೇ. ದುರ್ಗದ ಮೇಲಿನ ಅಭಿಮಾನದಿಂದ ನಾಗತಿಯವರು ತಮ್ಮ ಸರ್ವಸ್ವವನ್ನೂ ಬಲಿಗೊಟ್ಟರು. ಅವರ ಮೇಲಿನ ಅಭಿಮಾನದಿಂದ ನೀವು ದುರ್ಗವನ್ನೇ ಬಲಿಗೊಡುತ್ತೇನೆ ಎನ್ನುತ್ತೀರಾ? ನಿಜವಾಗಿ ಹೇಳಿ. ಇದು ನಾಗತಿಯವರು ಬದುಕಿದ್ದಿದ್ದರೆ ಮೆಚ್ಚುತ್ತಿದ್ದ ಮಾತೇ?”

—ಪರಶುರಾಮುಪ್ಪ ಲಿಂಗಣ್ಣನಾಯಕನನ್ನು ಕೆಣಕಿ ಕೇಳಿದ.

ಆತನ ಮಾತನ್ನು ಕೇಳಿ ಲಿಂಗಣ್ಣನಾಯಕ ಗೊಂದಲದಲ್ಲಿ ಬಿದ್ದ. ಆತನ ಮಾತಿಗೆ ಯಾವ ಪ್ರತ್ಯುತ್ತರವನ್ನೂ ಹೇಳಲಾಗದೆ, ಮಬ್ಬುಗತ್ತಲು ಬೆರೆತು ಕಪ್ಪಾಗುತ್ತಿದ್ದ ಹೊಂಡದ ನೀರನ್ನೇ ದಿಟ್ಟಿಸುತ್ತಾ ಕುಳಿತ.

"ನೀವು ಸುಮ್ಮನೆ ಕುಳಿತರಾಗದು ಲಿಂಗಣ್ಣನಾಯಕರೇ. ಅದಕ್ಕಿಂದು ಹೊತ್ತಿಲ್ಲ. ಪರಿಸ್ಥಿತಿ ಕೈಮೀರಿದ ಬಳಿಕ ಹಳಹಳಿಸಿಯೂ ಉಪಯೋಗವಾಗುವುದಿಲ್ಲ. ನಾಗತಿಯರ ಮೇಲೆ ನಿಮಗಿರುವ ಅಭಿಮಾನ ನಿಜವಾದರೆ, ಅವನ ಸಾವಿಗಾಗಿ, ಓಬಣ್ಣನಾಯಕರ ಕೊಲೆಗಾಗಿ ನಮ್ಮಂತೆಯೇ ನಿಮ್ಮ ಹೃದಯ ಕುದಿಯುತ್ತಿದ್ದರೆ, ಅದಕ್ಕೆ ಪ್ರತಿ ಮಾಡುವ ಹೊತ್ತು ಇಂದು ಪ್ರಾಪ್ತವಾಗಿದೆ. ಇಂದು ನೀವು ಮನಸ್ಸು ಮಾಡಿದರೆ, ಹನ್ನೆರಡು ವರ್ಷಗಳ ಅನಂತರವೂ ಅಂದಿನ ಕೊಲೆಗೆ ಪ್ರತೀಕಾರವನ್ನು ಪಡೆಯಬಹುದು. ಹೇಳಿ, ಹೊತ್ತುಬಂದಾಗ ಗಂಡಿನಂತೆ ಹೊಣೆಗಾರಿಕೆ ಹೊತ್ತು ನಿಲ್ಲುತ್ತೀರೋ ಅಥವಾ ಬರಡುವೇದಾಂತದ ಬಲೆಗೆ ಬಿದ್ದು ಕೈಗೆ ಸಿಕ್ಕುದನ್ನು ಕಳೆದುಕೊಳ್ಳುತ್ತೀರೋ. ನಮಗೆ ಉತ್ತರ ಕೊಡಬೇಡಿ ನಾಯಕರೇ? ಶಿಲಾರೂಪವಾಗಿ ನಮ್ಮ ಮಾತನ್ನು ಆಲಿಸುತ್ತ ಕುಳಿತಿರುವ ತಾಯಿಯನ್ನು ನೋಡಿ ಉತ್ತರ ಹೇಳಿ."

—ಭರಮಣ್ಣನೂ ಸವಾಲು ಹಾಕಿ ಹೇಳಿದ.

ಅವನ ಮಾತು ಕೇಳಿ ಲಿಂಗಣ್ಣನಾಯಕ ಅಲ್ಲಿಂದ ಎದ್ದು ನಾಗತಿಯ ಸಮಾಧಿಯ ಬಳಿಗೆ ಹೋದ. ಸಮಾಧಿಯ ಮೇಲೆ ನಿಲ್ಲಿಸಿದ, ನಾಗತಿಯ ಶಿಲಾವಿಗ್ರಹವನ್ನು ದಿಟ್ಟಿಸಿ ನೋಡುತ್ತಾ, ವಿಹ್ವಲನಾಗಿ ತನ್ನ ಮನದಲ್ಲಿಯೇ ಕೇಳಿದ—

"ಚಿಕ್ಕಮ್ಮ........ಏನು ಮಾಡಲಿ? ನಾನೀಗ ಏನು ಮಾಡಲಿ? ನನ್ನನ್ನು ಕವಿದಿರುವ ಈ ಕಾವಳದಲ್ಲಿ ದಾರಿತೋರು ಚಿಕ್ಕಮ್ಮಾ. ಈ ತಬ್ಬಲಿಗೆ ಬುದ್ಧಿ ಹೇಳುವವರು ಯಾರು? ಹೇಳು, ನೀನೊಬ್ಬಳೇ ನನಗೆ ದಿಕ್ಕು."

—ಎಂದು ಶಿಲಾವಿಗ್ರಹದ ಮುಖವನ್ನೇ ಹಂಬಲ ತುಂಬಿದ ಕಣ್ಣುಗಳಿಂದ ನೋಡಿ, ತನ್ನ ಬೇಡಿಕೆಯನ್ನು ಮನ್ನಿಸಿ ಶಿಲಾಮೂರ್ತಿ ನುಡಿಯುವುದೊ ಏನೊ ಎಂಬಷ್ಟು ನಂಬಿಕೆಯಿಂದ ಬೇಡಿದ. ನಾಗತಿಯ ವಿಗ್ರಹ ಅವನ ಮಾತಿಗೆ ಮಾರ್ನುಡಿಯಲಿಲ್ಲ. ಆದರೆ ಅರೆಗತ್ತಲಿನಲ್ಲಿ ಸೂಕ್ಷ್ಮ ರೇಖೆಗಳು ಮರೆಯಾದ ಮೂರ್ತಿಯ ಮುಖವೂ ಕರ್ಕಶವಾಗಿ, ಅದರ ಕಣ್ಣುಗಳಲ್ಲಿದ್ದ ಮಾರ್ದವತೆ ಮಾಯವಾಗಿ ಕಠೋರತೆ ಹೊಳೆದಂತೆ

ತೋರಿತು. ಅದನ್ನು ಕಂಡು ಲಿಂಗಣ್ಣನಾಯಕ ಮಿಂಚು ಸೋಂಕಿದವನಂತೆ ಮೇಲೆದ್ದು ನಿಂತ.

"ಆ....ಆ......ನಿನಗೂ ನನ್ನಮೇಲೆ ಸಿಟ್ಟೇ ಚಿಕ್ಕಮ್ಮ......ನಿನ್ನನ್ನು ಕಾಪಾಡಲಾಗದ ಕತ್ತಿಯನ್ನು ನಿನ್ನನ್ನು ನುಂಗಿದ ನೀರಿಗೇ ದಾನಮಾಡಿದ ನಾನು ಮತ್ತೆ ಕತ್ತಿ ಧರಿಸಬೇಕೇ?—ತಮ್ಮನ ತಲೆಗೆ ಶೂಲವಾದ ಮುಕುಟ ವನ್ನು ಮತ್ತೆ ನಾನು ಧಸಿಸಬೇಕೇ?....ಏಕೆ?....ಏಕೇ?—ನನ್ನದು ಶುಷ್ಕ ವೇದಾಂತವೇ....ಷಂಡತನವನ್ನು ಮರೆಸಲು ಮಾಡಿದ ಸೊಗೇ ನನ್ನ ಸನ್ಯಾಸ....ಹೇಳು....ಹೇಳು....ಚಿಕ್ಕಮ್ಮ....ನಾನೇನು ಮಾಡಲಿ ಹೇಳು?"

—ಯಾವ ನಿರ್ಧಾರಕ್ಕೂ ಬರದೆ, ಔಡುಕಚ್ಚಿ ನೋವು ತುಂಬಿದ ಕಣ್ಣುಗಳನ್ನು ಹೊರಳಿಸುತ್ತ ಅತ್ತಿಂದಿತ್ತ ಶತಪಥ ಹಾಕಿದ ನಾಯಕ.

ಭರಮಣ್ಣ, ಪರಶುರಾಮಪ್ಪನವರು ಹೇಳಿದ ಮಾತನ್ನು ಕೇಳಿ ಅವನ ಹೃದಯದೊಳಗೆ ಭಯಂಕರ ಬಿರುಗಾಳಿ ಕಡೆಯಲು ಆರಂಭ ವಾಗಿತ್ತು. ಚಿತ್ತದ ಹೊಯ್ದಾಟದಲ್ಲಿ ಬೋನಿನಲ್ಲಿ ಸಿಕ್ಕು ದಿಕ್ಕರಿಯದ ಪಶುವಿನಂತೆ ಅತ್ತಿಂದಿತ್ತ ಅಡ್ಡಾಡಿದ. ತನಗೆ ತಾನೇ ಆಡಿಕೊಳ್ಳುತ್ತಿರುವ ಮಾತೂ ಆ ಉದ್ವೇಗದಲ್ಲಿ, ಹತೋಟಿ ಮೀರಿ ಇತರರ ಕಿವಿಗೆ ಬೀಳು ವಷ್ಟು ಗಟ್ಟಿಯಾದುದನ್ನು ಅರಿಯದೆ ಹೇಳಿದ:

"ಏನು ಮಾಡಲಿ....ನಾನೀಗ ಏನುಮಾಡಲಿ .... ಸನ್ಯಾಸವೇ..... ಸೇಡೇ........"

"ಸೇಡು! ಅದೇ ನಿಮಗೆ ಉಳಿದಿರುವ ದಾರಿ"

ಇದ್ದಕ್ಕಿದ್ದ ಹಾಗೇ ಉಗ್ರ ನಿರ್ಧಾರದ ಬಿಗಿದ ಧ್ವನಿಯಲ್ಲಿ, ಪಕ್ಕ ದಲ್ಲೇ ನುಡಿದ ಹೆಣ್ಣಿನ ಧ್ವನಿಯನ್ನು ಕೇಳಿ ಬೆಚ್ಚಿಬಿದ್ದ ಲಿಂಗಣ್ಣನಾಯಕ ಧ್ವನಿ ಬಂದ ಕಡೆ ಭೀತಿಗೊಂಡ ನೇತ್ರಗಳಿಂದ ದಿಟ್ಟಿಸಿ ನೋಡಿ ಕೇಳಿದ–

"ಯಾರು?....ಯಾರು? ಈ ಮಾತು ಆಡಿದವರು ಯಾರು?"

"ನನ್ನ ಗುರುತು ನಿಮಗಿಲ್ಲವೇ ನಾಯಕರೇ? ನನ್ನ ಗುರುತೂ ನಿಮಗೆ ಮರೆತು ಹೋಯಿತೇ?"

–ವಿಷಣ್ಣತೆ ತುಂಬಿತುಳುಕುವ ಧ್ವನಿಯಲ್ಲಿ ಕೇಳಿತು ಸ್ತ್ರೀಕಂಠ. ಆ ಧ್ವನಿಯನ್ನೇ ಹಿಡಿದು ನೋಡುವವನಂತೆ ನೋಡಿದ ಲಿಂಗಣ್ಣನಾಯಕ.

ಬಿಚ್ಚಿ ಕೆದರಿದ ಕೂದಲು, ಅರೆಗತ್ತಲಿನಲ್ಲಿ ಅಸ್ಪಷ್ಟವಾಗಿ ಕಾಣುವ ಉಗ್ರ ಮುಖ, ಅಸ್ತವ್ಯಸ್ತವಾದ ಬಟ್ಟೆ, ಕಾತರತೆ ತುಂಬಿತುಳುಕುವ, ಸೋಕಿದೊಡನೆಯೇ ಭೀತಿಯನ್ನು ಕವಿಸುವ ಕರ್ಕಶ ಧ್ವನಿ ಅದನ್ನು ಕಂಡು ನರನರವೂ ಬಿಗಿದು, ಮಾತನಾಡದೆ ನೋಡಿದ ಲಿಂಗಣ್ಣನಾಯಕ. ಉಳಿದವರು ಅವನಷ್ಟೇ ಚಕಿತರಾಗಿ, ಚಕ್ಕನೆ ಎದ್ದು ಲಿಂಗಣ್ಣನಾಯಕರ ಬಳಿ ಸಾರಿದರು. ಭರಮಣ್ಣ ಭೀತಿ ಕವಿಸುವ ಆ ಉಗ್ರ ಸ್ತ್ರೀಮೂರ್ತಿಯನ್ನು ನೋಡಿ, ಲಿಂಗಣ್ಣನಾಯಕನಿಗೆ ಏನಾದರೂ ಅಪಾಯವಾಗಬಹುದೆಂದು ಹೆದರಿ, ಕತ್ತಿ ಹಿರಿದು ಆತನ ಬದಿಯಲ್ಲಿ ನಿಂತ. ಅದನ್ನು ನೋಡಿ ಆಕೆ ನಕ್ಕು ಹೇಳಿದಳು:

"ಹೆದರಬೇಡಿ ದಳವಾಯಿಗಳೇ, ನಾನು ನಾಯಕರಿಗೆ ಅಪಾಯ ಮಾಡಲು ಬಂದಿಲ್ಲ. ನಾನು ಬಂದುದೂ ನಿಮ್ಮ ಕೆಲಸಕ್ಕೇ. ನಿಮ್ಮಂತೆಯೇ ನಾನೂ ಹನ್ನೆರಡು ವರ್ಷಗಳಿಂದ ಕಾಯುತ್ತಿದ್ದೇನೆ."

"ನೀನು ಯಾರು?"

—ಆಕೆಯ ಮಾತನ್ನು ನಂಬದವನಂತೆ ಕೇಳಿದ ಭರಮಣ್ಣ.

"ನಿಮಗೆ ನನ್ನ ಪರಿಚಯವಿಲ್ಲ ದಳವಾಯಿಗಳೇ, ಆದರೆ ನಾಯಕರು ನನ್ನನ್ನು ಚೆನ್ನಾಗಿ ಬಲ್ಲರು. ನಿಮಗೆ ನನ್ನ ನೆನಪೇ ಮರೆತು ಹೋಯಿತೇ ನಾಯಕರೇ?"

"ಎಲ್ಲಿಯೋ.........ಎಲ್ಲಿಯೋ....ಈ ಧ್ವನಿಯನ್ನು ಕೇಳಿದಂತಿದೆ. ಆದರೆ ಏಕೋ....ಏಕೋ....ಗುರುತು ಸಿಗುತ್ತಿಲ್ಲ."

—ಲಿಂಗಣ್ಣನಾಯಕ ಚಂಚಲನಾಗಿ ಹೇಳಿದ.

"ನಿಜ..........ನಾನಿಂದು ನಿಮಗೆ ಗುರುತು ಸಿಗುವ ಸ್ಥಿತಿಯಲ್ಲಿಲ್ಲ ನಾಯಕರೇ. ಹೋಗಲಿ. ನನ್ನ ನೆನಪು ಮರೆತರೂ ಚಿಂತೆಯಿಲ್ಲ. ಆದರೆ ನಾಗತಿಯರನ್ನು, ಅವರ ಸಾವಿಗೆ ಕಾರಣರಾದವರನ್ನು ಮಾತ್ರ ಮರೆಯಬೇಡಿ. ಅದೊಂದು ನಿಮಗೆ ನೆನಪುಳಿದಿದ್ದರೆ ಸಾಕು."

"ಅದಿರಲಿ. ನೀನಾರು ಹೇಳು ತಾಯಿ?"

"ನಾನು....ನಾನು....ನಾಗತಿಯರ ಸೆಜ್ಜೆಯ ದಾಸಿ....ಗಿರಿಜವ್ವೆ"

"ಆ....ನೀನು....ಗಿರಿಜೆಯೇ ?"

ಆ ಮಾತನ್ನು ನಂಬಲಾಗದವನಂತೆ, ಆ ಮಾತು ಕೇಳಿ ದಿಗ್ಭ್ರಾಂತ ನಾಗಿ ಲಿಂಗಣ್ಣನಾಯಕ ಕೇಳಿದ.

"ನಿಜ. ನಾನೇ ಆ ನಿರ್ಭಾಗ್ಯೆ ಗಿರಿಜೆ. ನನ್ನ ನೆನಪಂತೂ ನಿಮಗೆ ಮರೆತು ಹೋಯಿತು. ನನ್ನ ಮಾತಿನಲ್ಲಿ ನಂಬಿಕೆಯೂ ತಪ್ಪಿತೇ?"

—ದುಃಖ ಕಾತರಳಾಗಿ ಕೇಳಿದಳು ಗಿರಿಜೆ.

"ಗಿರಿಜಾ! ನೀನು....ಹೀಗೆ!"

ಅವಳಾಡಿದ ಮಾತು ಕೇಳಿ ನೂರಾರು ನೆನಪುಗಳು ಒಮ್ಮೆಲೆ ಮೆದುಳಿನಲ್ಲಿ ನುಗ್ಗಿ ಬಂದು ಶೋಕವಿಹ್ವಲನಾಗಿ ಕೇಳಿದ ಲಿಂಗಣ್ಣ ನಾಯಕ.

"ಹೀಗೆ? ಹೀಗಲ್ಲದೆ ಬೇರೆ ಹೇಗಿರಲಿ?"

ತಟಕ್ಕನೆ ನಕ್ಕು ಕೇಳಿದಳು ಗಿರಿಜೆ. ಅವಳ ವಿಷಣ್ಣ ಧ್ವನಿಗಿಂತಲೂ ವಿದ್ರಾವಕವಾಗಿತ್ತು ಘೋರ ನಿರಾಶೆಯ ನಂಜುಸೂಸುವ ಅವಳ ಧ್ವನಿ.

"ಹೀಗೇ....ಹೀಗೇ ಅಲೆಯುತ್ತಿದ್ದೇನೆ ನಾಗತಿಯರು ನಮ್ಮನ್ನು ಬಿಟ್ಟು ಹೋದ ದಿನದಿಂದ. ಅವರ ಬಳಿಕ ನೀವಾದರೂ ನಾಯಕರಾಗಿ ನಮ್ಮನ್ನು ಕಾಪಾಡುತ್ತೀರ.....ನಾಗತಿಯರ ಸಾವಿಗೆ ಕಾರಣರಾದವರನ್ನು ಕೊಂದು, ಅವರ ಆತ್ಮಕ್ಕೆ ರಕ್ತತರ್ಪಣ ನೀಡುತ್ತೀರಾ ಎಂದು ಬಯಸಿ, ಬಯಸಿ, ನಿಮ್ಮ ನೆರಳಾಗಿ ಸುತ್ತುತ್ತಿದ್ದೇನೆ—ಈ ಹನ್ನೆರಡು ವರ್ಷಗ ಳಿಂದ. ನಾನು ಹೆಣ್ಣು; ನನ್ನ ಮೈಯ ರಕ್ತವೂ ಬೆಂಕಿಯ ಹೊಳೆಯಾಗಿ ಹರಿಯುತ್ತಿದೆ. ಆದರೆ ಗಂಡಸರಿಗೆ ಮಾತ್ರ ಕ್ರೋಧಕ್ಕಿಂದ ವಿರಕ್ತಿಯೇ ಸೊಗಸಿದಂತೆ ಕಾಣುತ್ತದೆ. ಇದು ಕೂಡದು ನಾಯಕರೇ, ನೀವೇ ಸೇಡಿನ ಕತ್ತಿ ಹಿರಿದು ನಿಲ್ಲಬೇಕು. ನಮ್ಮೆಲ್ಲರ ಹೃದಯದಲ್ಲಿ ದಹಿಸು ತ್ತಿರುವ ಪ್ರತೀಕಾರತೃಷೆ ಮುದ್ದಣ್ಣನ ರಕ್ತಜಲಸೇಚನೆಯಿಂದ ಶಾಂತ ವಾಗಬೇಕು. ಆ ಕಾರ್ಯಕ್ಕಾಗಿ ನಿಮಗೆ ಕೊಡಲೆಂದೇ ಈ ಕತ್ತಿಯನ್ನು ಕಾದಿಟ್ಟುಕೊಂಡು ತಿರುಗುತ್ತಿದ್ದೇನೆ. ತೆಗೆದುಕೊಳ್ಳಿ ಇದನ್ನು."

—ಎಂದು ಗಿರಿಜೆ ತನ್ನ ಉಡುಗೆಯಲ್ಲಿ ಮುಚ್ಚಿಟ್ಟುಕೊಂಡಿದ್ದ ಕತ್ತಿಯನ್ನು ತೆಗೆದು ಲಿಂಗಣ್ಣನಾಯಕರ ಎದುರು ಚಾಚಿದಳು.

"ಈ ಕತ್ತಿಯನ್ನೇ ಹಿಡಿದು ಅಲೆಯುತ್ತಿದ್ದೆಯಾ ಗಿರಿಜಾ? ಯಾರ ಕತ್ತಿ ಇದು?"

—ಲಿಂಗಣ್ಣನಾಯಕ ಕೇಳಿದ.

"ಇದು ಓಬಣ್ಣನಾಯಕರ ಕೊಲೆಯಾದಂದು, ಅವರ ಅಂಗರಕ್ಷಕ ರಾಗಿದ್ದ ಕಸ್ತೂರಿನಾಯಕರು ತಮ್ಮ ಪ್ರಾಣವನ್ನು ಒಪ್ಪಿಸಲು ಉಪಯೋಗಿಸಿದ ಕತ್ತಿ. ಸ್ವಾಮಿಯನ್ನು ಕಾಯಲಾಗದ ಅಂಗರಕ್ಷಕ, ತನ್ನ ಕತ್ತಿಗೆ ತನ್ನ ತಲೆಯನ್ನು ಬಲಿಯಾಗಿ ಒಪ್ಪಿಸಿದ. ಕಸ್ತೂರಿನಾಯಕರ ಜೀವ ಈ ಕತ್ತಿಯಲ್ಲಿ ವಾಸಿಸಿದೆ ನಾಯಕರೇ—ಪ್ರತೀಕಾರ ಬಯಸಿ. ಹೇಳಿ ಇದನ್ನು ಹಿಡಿದು ನಿಲ್ಲುತ್ತೀರಾ?"

"ಸೇಡು....ಸೇಡು....ನೀನೂ ಇದೇ ಮಾತು ಹೇಳುತ್ತೀಯಾ ಗಿರಿಜಾ. ಸೇಡು ತೀರಿಸಬೇಕೆಂದೇ ನಾನು ಸಿಂಹಾಸನಾರೋಹಣ ಮಾಡಬೇಕೇ?"

"ಅಹುದು ಪ್ರಭು."

"ಚಿಕ್ಕಮ್ಮ ಬದುಕಿದ್ದಾಗ ಒಂದು ಮಾತು ಹೇಳಿದ್ದರು ಗಿರಿಜಾ. ಹಿಂಸೆ ರಕ್ತಬೀಜಾಸುರನ ರಕ್ತವಿದ್ದಂತೆ. ಒಂದು ಹನಿ ಹಿಂಸೆ ಬಿದ್ದಲ್ಲಿ ಮತ್ತೆ ನೂರು ಹನಿ ಹಿಂಸೆ ಉದ್ಭವವಾಗುತ್ತದೆ ಎಂದು. ಅದನ್ನು ನೆನೆದು ಇದುವರೆಗೂ ಹಿಂಸೆಗೆ ಮನ ಮಾಡಲಿಲ್ಲ. ಈಗ ಹೇಗೋ ಶಾಂತವಾಗಿರುವ ಹಿಂಸೆ ಮತ್ತೆ ಮರುಕಳಿಸುವಂತೆ ಮಾಡಬೇಕೇ?"

—ಯಾವ ನಿರ್ಧಾರಕ್ಕೂ ಬರಲಾಗದೆ, ಅನಿಶ್ಚಯತೆಯ ಉಯ್ಯಾಲೆಯಲ್ಲಿ ತೂಗುತ್ತಾ ಕೇಳಿದ ಲಿಂಗಣ್ಣನಾಯಕ.

"ಇಂದು ಅದಲ್ಲದೆ ಬೇರೆ ದಾರಿಯೇ ಉಳಿದಿಲ್ಲ ನಾಯಕರೇ. ಕಾಡಿನ ಕಿಚ್ಚನ್ನು ಇದಿರು ಬೆಂಕಿಯಿಂದಲೇ ಶಾಂತಗೊಳಿಸುವಂತೆ, ಇಂದು ಹಿಂಸೆಯನ್ನು ಪ್ರತಿ ಹಿಂಸೆಯಿಂದಲೇ ಸೋಲಿಸಬೇಕು. ಇಲ್ಲವೇ ಹಿಂಸೆಗೆ ನಾವು ಬಲಿಯಾಗಬೇಕು. ದುರ್ಗದಲ್ಲಿ ಮುದ್ದಣ್ಣನ ಸ್ವಾರ್ಥ ಪಿಶಾಚಿ ತಾಂಡವ ವಾಡುತ್ತಿರುವವರೆಗೂ, ತಾವು ಶಾಂತಿ, ಸ್ನೇಹದ ಮಾತನಾಡುವುದು ಕಟುಕನ ಇದಿರು ಬಸವಪುರಾಣವನ್ನು ಓದಿದಂತಾಗುತ್ತದೆ. ನಿಮ್ಮ ಸೌಜನ್ಯವೂ ಯಾವ ಬೆಲೆಯೂ ಇಲ್ಲದ ದುರ್ಬಲತೆಯಾಗಿ, ದುರುಪಯೋಗಕ್ಕೆ ದಾರಿ ಕೊಡುತ್ತದೆ ಆದುದರಿಂದ ಅದು ಕೂಡದು. ಅಲ್ಲದೆ ಇದು ನಮ್ಮ ನಿಮ್ಮ ವೈಯುಕ್ತಿಕ ದ್ವೇಷ, ಸ್ನೇಹದ ಮಾತಲ್ಲ ನಾಯಕರೇ, ದುರ್ಗವೇ

ಇಂದು ನೀವು ಯಾವ ನಿರ್ಧಾರ ಮಾಡುವಿರೋ ಎಂದು ಕಾದು ನೋಡು ತ್ತಿದೆ. ಹೇಳಿ—ಸೌಜನ್ಯಕ್ಕೆ ಸೋತು, ಕರಾಳ ಸ್ವಾರ್ಥ ವಿಜೃಂಭಿಸಿ ದುರ್ಗವನ್ನೇ ಬಲಿತೆಗೆದುಕೊಳ್ಳಲು ಬಿಡುವಿರೋ ಅಥವಾ ಒಂದು ಗಳಿಗೆ ನಿಮ್ಮ ಧರ್ಮಸೂಕ್ಷ್ಮವನ್ನು ಬದಿಗೊತ್ತಿ ದುರ್ಗ ಬದುಕಿ ಬಾಳಲು ನೆರವಾಗು ವಿರೋ? ನಮಗಿನ್ನು ಹೆಚ್ಚು ವೇಳೆಯಿಲ್ಲ ನಾಯಕರೇ. ಈ ದಿನ ನೀವು ಏನು ಇತ್ಯರ್ಥ ಮಾಡುವಿರೆಂಬುದನ್ನು ಅರಿತುಕೊಂಡು ನಾವು ಮುಂದಿನ ಮಾರ್ಗವನ್ನು ನಿರ್ಧರಿಸಬೇಕು."

–ಪರಶುರಾಮಪ್ಪ ಅತ್ತಿತ್ತ ಹೊಯ್ದಾಡುತ್ತಿದ್ದ ಮಾತನ್ನು ಮುಕ್ತಾಯಕ್ಕೆ ಮುಟ್ಟಿಸಲು ನಿರ್ಧರಿಸಿ, ಆ ನಿರ್ಧಾರದ ಖಚಿತಸ್ವರದಲ್ಲಿ ಹೇಳಿದ—

"ಇವೆರಡಲ್ಲದೆ ಬೇರೆ ದಾರಿಯೇ ಇಲ್ಲವೇ?"

"ಇಲ್ಲ."

"ಯಾವ ನಿರ್ಧಾರವನ್ನೂ ಈಗಲೇ ತಿಳಿಸಬೇಕೇ?"

"ಅಹುದು."

ಆ ಮಾತು ಕೇಳಿ ಲಿಂಗಣ್ಣನಾಯಕ ತನ್ನ ಸುತ್ತ ನಿಂತವರ ಮೊಗವನ್ನು ನೋಡಿದ. ಅವನ ಮುಖದ ಮೇಲೆ ನಿರ್ಧಾರದ ವಜ್ರಲೇಪವಿತ್ತು. ಹಾಗೇ ತಿರುಗಿ ನಾಗತಿಯ ಸಮಾಧಿಯತ್ತ ನೋಡಿ ಮರುಗಳಿಗೆಯೇ ನಿರ್ಧಾರಕ್ಕೆ ಬಂದು, ಗಿರಿಜವ್ವೆಯ ಕೈಯಲ್ಲಿದ್ದ ಕತ್ತಿಯನ್ನು ಕಿತ್ತುಕೊಂಡು, ಅದನ್ನು ಮೇಲೆತ್ತಿ ಹೇಳಿದ—

"ದೈವ ಚಿತ್ತವಿದ್ದಂತಾಗಲಿ. ನಿಮ್ಮ ಮಾತು ನಡೆಯಲಿ. ಸೇಡಿನ ಕತ್ತಿಯನ್ನು ಹಿರಿದು ನಿಲ್ಲುವ ಭಾರ ನನ್ನದಾಗಲಿ. ಇನ್ನು ನೀನು ನಿಶ್ಚಿಂತಳಾಗಿರು ಗಿರಿಜಾ. ಭರಮಣ್ಣನವರೇ, ಮುಂದಿನ ಕಾರ್ಯಭಾರವನ್ನು ನೀವೂ, ಪರಶುರಾಮಪ್ಪನವರೂ ನಿಶ್ಚಯಿಸಿ. ನೀವು ತೋರಿದತ್ತ ನಡೆಯುತ್ತೇನೆ ನಾನು."

ಅವನ ಮಾತು ಕೇಳಿ ಅವರೆಲ್ಲರಿಗೂ ಹೃದಯ ಹಗುರವಾದಂತಾಯಿತು.

"ಅಬ್ಬಾ! ಅಂತೂ ನಿರ್ಧಾರ ಮಾಡಿದಿರಲ್ಲ. ನೀವು ಒಪ್ಪದಿದ್ದರೆ ಮುಂದೇನು ಮಾಡಬೇಕೆಂಬ ಚಿಂತೆ ಬೆನ್ನು ಹತ್ತಿದ ಭೇತಾಳನಂತೆ

ನಮ್ಮನ್ನು ಕಾಡುತ್ತಿತ್ತು. ನಿಮ್ಮ ಒಪ್ಪಿಗೆ ದೊರೆತು ನಮ್ಮ ಮನಸ್ಸಿನ ಭಾರ ಅರ್ಧ ಇಳಿದಂತಾಯಿತು. ಇನ್ನು ನಿಶ್ಚಿಂತವಾಗಿ ಕುಳಿತು ಮುಂದಿನ ಕೆಲಸ ಯೋಚಿಸಬಹುದು."

—ಎಂದ ಪರಶುರಾಮಪ್ಪ. ಉಳಿದವರ ಮೌನ ಅವನ ಮಾತಿಗೆ ಸಮ್ಮತಿಸೂಚಕವಾಗಿತ್ತು.

## ೨

ಕೊಂಚ ಹೊತ್ತಾದ ಬಳಿಕ ಪರಶುರಾಮಪ್ಪ, ಭರಮಣ್ಣ ಲಿಂಗಣ್ಣ ನಾಯಕನ ಅಪ್ಪಣೆ ಪಡೆದು ಹೊರಟರು. ಶೃಂಗಾರವನವನ್ನು ವ್ಯಾಪಿಸಿದ ಕತ್ತಲೆಯಲ್ಲಿ ಗಿರಿಜೆ, ಲಿಂಗಣ್ಣನಾಯಕರಿಬ್ಬರೇ ಉಳಿದರು. ಅಷ್ಟು ಹೊತ್ತು ಇಬ್ಬರೂ ಸುಮ್ಮನೆ ಕುಳಿತಿದ್ದರು. ಬಳಿಕ ಲಿಂಗಣ್ಣನಾಯಕನೇ ಮೌನವನ್ನು ಮುರಿದು ಕೇಳಿದ :

"ನೀನೂ ಮನೆಗೆ ಹೋಗುವುದಿಲ್ಲವೇ ಗಿರಿಜಾ ?"

"ಆಂ" ಲಿಂಗಣ್ಣನಾಯಕರ ಮಾತು ಕೇಳಿ ಬೆಚ್ಚಿಬಿದ್ದವಳಂತೆ ಹೇಳಿದಳು ಗಿರಿಜೆ "....ಮನೆ....ನಿಜ....ಇಂದು ಮನೆಗೆ ಹೋಗಬಹುದು."

"ಅಂದರೆ...."

ಅವಳ ಮಾತು ಕೇಳಿ ಚಕಿತನಾದ ಲಿಂಗಣ್ಣನಾಯಕ ಕೇಳಿದ.

"ಇಷ್ಟು ದಿನ ಮನೆಯ ನೆನಪಿರಲಿಲ್ಲ. ಹುಚ್ಚಿ ಎನಿಸಿಕೊಂಡು ಅಲ್ಲಲ್ಲಿ ಅಲೆದದ್ದಾಯಿತು. ಈಗ ಮತ್ತೆ ಮನೆಯ ಯೋಚನೆ ಮಾಡಬೇಕು."

"ನೀನು....ಹುಚ್ಚಿಯೋ ?"

"ಹೂ."

"ನಿನಗೆ ಹುಚ್ಚು ಹಿಡಿದಿತ್ತೇ ?"

"ಹಿಡಿದಿತ್ತು....ಬಿಟ್ಟುಹೋಯಿತು."

"ಅಂದರೆ...."

"ನಾಗತಿಯರು ಆತ್ಮಹತ್ಯ ಮಾಡಿಕೊಂಡರೆಂದು ಕೇಳಿದ ದಿನದಿಂದ, ನೀವು ಅವರ ಕೊಲೆಗೆ ಕಾರಣರಾದವರನ್ನು ಮರೆತು, ಏಕಾಂತ

ವಾಸಿಗಳಾದಂದಿನಿಂದ ನನ್ನ ಬುದ್ಧಿಗೆ ಗ್ರಹಣ ಹಿಡಿದಿತ್ತು ಪ್ರಭು. ನನ್ನ ಪಾಲಿನ ಜಗತ್ತೇ ಮುಳುಗಿಹೋದ ಹಾಗಾಗಿತ್ತು. ಈಗ ನೀವು ಮತ್ತೆ ಕಳೆದುಹೋದ ಆ ಎಲ್ಲವನ್ನೂ ದೊರಕಿಸಿಕೊಟ್ಟಿರಿ.

"ಹೇಗೆ?"

"ಪಾಪಿ ಮುದ್ದಣ್ಣ ನನ್ನ ಬಾಳಿಗೆ ಹಚ್ಚಿದ ಬೆಂಕಿ ಒಂದು ಬಗೆಯು ದಲ್ಲ ಪ್ರಭು. ನೀವು ಕಾಣಿರಿ—ನನ್ನ ಜಗತ್ತನ್ನೇ ಭಸ್ಮಮಾಡಿಬಿಟ್ಟ. ನಾನು ನೆಚ್ಚಿದ ನಾಗತಿಯವರು ಕೈಲಾಸ ಸೇರಿದರು. ಕಸ್ತೂರಣ್ಣ ಕತ್ತಿಗೆ ಜೀವ ಒಪ್ಪಿಸಿದ. ಅಲ್ಲದೆ....ಅಲ್ಲದೆ...."

ಯಾವುದೋ ಮರೆತುಹೋದ ದುಃಖ ಮರುಕಳಿಸಿ ಅವಳ ಗಂಟಲು ಬಿಗಿಯಿತು.

"ಅಲ್ಲದೆ....ಮತ್ತೇನು ಮಾಡಿದ ಗಿರಿಜಾ...."

"ನನ್ನವರನ್ನು ಹಿಡಿಸಿ ಚಿತ್ರಹಿಂಸೆ ಮಾಡಿ ಕೊಂದ...."

"ಏನು!....ಯಾರನ್ನು ?"

ಗಿರಿಜೆಯಾಡಿದ ಮಾತನ್ನು ಕೇಳಿ ಅಚ್ಚರಿಯಿಂದ ಸಿಡಿದು ಕೇಳಿದ ಲಿಂಗಣ್ಣನಾಯಕ.

"ಕಸ್ತೂರಿನಾಯಕರ ತಮ್ಮಂದಿರನ್ನು."

"ವೀರಣ್ಣನಾಯಕರನ್ನೇ....ಏಕೆ ?"

"ಅವನಿಗೆ ವಿರುದ್ಧವಾಗಿ ನಡೆದರೆಂದು."

"ವೀರಣ್ಣನಾಯಕ ಅವರ ಗುಂಪಿಗೇ ಸೇರಿರಲಿಲ್ಲವೇ ಗಿರಿಜಾ ?"

"ಊ ಹೂ—ಕಡೆಗಾಲಕ್ಕೆ ನನ್ನ ಭಾಗ್ಯ ಕಣ್ಣು ತೆರೆದು, ಅವರಿಗೆ ಬುದ್ಧಿ ಬಂದಿತ್ತು. ಆದರೆ ಅದೇ ಅವರಿಗೆ ಸಾವಾಯಿತು. ನನ್ನ ಮಾತು ಕೇಳಿ, ನನಗಾಗಿ ಅವರು ದಳವಾಯಿಗೆ ಎದುರುಬಿದ್ದರು. ಆದರೆ.... ಆದರೆ....ಅವರನ್ನು ಉಳಿಸಲು ನಾನೇನೂ ಮಾಡಲಾಗಲಿಲ್ಲ. ಸಿಟ್ಟಾಗಿ ಚೀರಿದೆ, ಕಂಬನಿಗರೆದೆ, ಸೇಡೆಂದು ಹಂಬಲಿಸಿದೆ. ಎಷ್ಟೋಬಾರಿ ನಾನೇ ಮುದ್ದಣ್ಣನ ಪ್ರಾಣ ಹೀರಬೇಕೆಂದು ಹೊಂಚು ಕಾದೆ, ಆದರೆ ಆಗಲಿಲ್ಲ. ನನಗಾಗಿ, ಆ ಕೆಲಸ ಮಾಡುವವರೂ ಇರಲಿಲ್ಲ. ಹೀಗಾಗಿ–ಹುಚ್ಚಾಗಿ ಅಲೆ ಯುದೆ ಬೇರಾವ ದಾರಿಯೂ ನನಗೆ ಉಳಿಯುಲಿಲ್ಲ. ಎದೆಯಲ್ಲಿ ದ್ವೇಷವನ್ನು ಹೊತ್ತು ಅಲೆಯುತ್ತಿದ್ದೆ. ಈ ದಿನ ಕೊಂಚ ಬೆಳಕು ಕಂಡಂತಾಯಿತು."

ಬಹು ದಿನಗಳ ಅನುಭವದಿಂದ ಕಾವಾರಿ ನಿರಾಶೆಯಾಗಿ ಹೆಪ್ಪು ಗಟ್ಟಿದ ವಿಷಯವನ್ನು ಗಿರಿಜೆ ಆದಷ್ಟು ಶಾಂತವಾಗಿಯೇ ಹೇಳಿದಳು. ಆದರೆ ಆ ಮಾತು ಕೇಳಿ, ಲಿಂಗಣ್ಣನಾಯಕನ ಹೃದಯದಲ್ಲಿ ಬಹು ದಿನ ದಿಂದ ಸುಪ್ತವಾಗಿದ್ದ ಕ್ರೋಧದ ಮದ್ದಿಗೆ ಕಿಡಿ ಸೋಕಿದಂತಾಯಿತು. ಕೆರಳಿ ಉಗ್ರವಾಗಿ ಹೇಳಿದ:

"ಚಿಂತಿಸಬೇಡ ಗಿರಿಜಾ. ಇಂದಿನಿಂದ ನಿನ್ನ ಸೇಡು ನನ್ನದು. ಆ ಕುನ್ನಿಯ ಕರಳು ಹೊಸಗಿ, ನಿನ್ನ ಕಂಬನಿಗೆ ಪ್ರತಿಮಾಡುತ್ತೇನೆ."

"ಸಿಟ್ಟು ಎಷ್ಟಿದ್ದರೂ, ಅಷ್ಟೇ ಎಚ್ಚರಿಕೆಯೂ ಇರಬೇಕು ಪ್ರಭು. ನಾವು ಸರಸವಾಡಹೊರಟಿರುವುದು ಘಟಸರ್ಪದೊಂದಿಗೆ. ನೀವು ಒಂದು ಗಳಿಗೆ ಎಚ್ಚರ ತಪ್ಪಿದರೂ, ಮುಗಿಲು ಹರಿದು ನೆತ್ತಿಯ ಮೇಲೆ ಬೀಳ ಬಹುದು."

ಎಚ್ಚರಿಕೆ.......ಎಚ್ಚರಿಕೆ....ಇಂದಿನಿಂದ ನಾನಲ್ಲ, ಅವನು ಎಚ್ಚರ ವಾಗಿರಬೇಕಾದ ದಿನ ಗಿರಿಜಾ. ಅವನ ಸಾವು ಸಮಿಾಪಿಸಿದೆ. ಇಷ್ಟು ದಿನ ಯಾವುದೋ ಭ್ರಾಂತಿಗೆ ಬಲಿಯಾಗಿ ಕರ್ತವ್ಯ ಮರೆತು ಕ್ಲೀಬನಾಗಿದ್ದೆ. ಇಂದು ನನ್ನ ಕೈಗೆ ಕತ್ತಿ ಇತ್ತು ದಾರಿ ತೋರಿಸಿದೆ ಗಿರಿಜಾ. ಇಂದಿನಿಂದ ಸೇಡುತೀರಿಸಲು ಬದುಕುತ್ತೇನೆ."

"ಆ ಮಾತು ಕೇಳಿ ಹಾಲು ಕುಡಿದಂತಾಯಿತು ಪ್ರಭು. ಆದರೂ ಹೆಜ್ಜೆ ಹೆಜ್ಜೆಗೂ ಎಚ್ಚರವಿರಲಿ. ಈ ಮಾತು ಹೊರಗೆಲ್ಲೂ ಆಡಬೇಡಿ. ನೀವು ಸಿಂಹಾಸನವೇರಿ ಭದ್ರವಾಗಿ ಕುಳಿತ ಬಳಿಕ ಈ ಮಾತು. ಅಲ್ಲಿಯ ವರೆಗೂ ಅವನದು ಮೇಲುಗೈ. ಇಂದು ಅಧಿಕಾರವಿರುವುದು ಅವನ ಕೈಯಲ್ಲಿ. ಸುಲಭಕ್ಕೆ ಅದನ್ನು ಅವನು ಬಿಟ್ಟು ಕೊಡಲಾರ. ಅದರಲ್ಲೂ ನೀವು ದ್ವೇಷ ತೀರಿಸಲೇ ಸಿಂಹಾಸನವೇರುತ್ತೀರಿ ಎಂದು ಅವನಿಗೆ ತಿಳಿ ದರೆ, ನೀವು ಸಿಂಹಾಸನವೇರುವುದೇ ಕನಸಿನ ಮಾತಾದೀತು. ನಿಮ್ಮ ಎಚ್ಚರಿಕೆಯಲ್ಲಿ ನೀವಿರಿ. ಅವನಮೇಲೆ ನಾನು ಕಾವಲಿರುತ್ತೇನೆ."

"ನೀನು! ಹೇಗೆ?"

"ಹೇಗೆಂದರೆ....ನಾನು ಹುಚ್ಚಿ. ನನ್ನನ್ನು ಕಂಡರೆ ಅವನಿಗೆ ಭಯವಿಲ್ಲ. ಎಲ್ಲಿ ಬೇಕಾದರೂ ನಾನು ಓಡಾಡಬಹುದು."

"ಗಿರಿಜಾ....ನಿನಗೆಲ್ಲಿಯ ಬವಣೆ ಇದು,"

—ಅವಳ ಮಾತು ಕೇಳಿ ನೊಂದು ನುಡಿದ ಲಿಂಗಣ್ಣನಾಯಕ.

"ನಾನೀಗ ಗಿರಿಜೆಯಲ್ಲ ಪ್ರಭು, ದುರ್ಗಿ. ಆ ದಳವಾಯಿ ಸತ್ತೆಂದು ನಾನು ಮತ್ತೆ ಗಿರಿಜೆಯಾಗುತ್ತೇನೆ."

"ನೀನು ಮತ್ತೆ ಹುಚ್ಚಿಯಾಗಿ ಅಲೆಯುವುದು ಬೇಡ ಗಿರಿಜಾ. ಹೇಗೂ ನಿನಗೆ ಯಾರೂ ಇಲ್ಲವೆಂದೆ. ನನಗೂ ಯಾರೂ ದಿಕ್ಕಿಲ್ಲ ಈ ಜಗತ್ತಿನಲ್ಲಿ. ಹೇಗೂ ನಿನ್ನ ಸೇಡು ತೀರಿಸುವ ಹೊಣೆ ನನ್ನದಾಯಿತು. ಹಾಯಾಗಿ, ನನ್ನ ತಂಗಿಯಾಗಿ ನನ್ನ ಮನೆಯಲ್ಲಿರು."

"ಆ ಕಾಲ ಬರಲಿ, ಅರಮನೆ ನಿಮ್ಮದೇ ಆಗಲಿ. ಆಗ ಬರುತ್ತೇನೆ. ಅದುವರೆಗೂ ನಾನು ಮಾಡಬೇಕಾದ ಕೆಲಸ ಎಷ್ಟೋ ಇದೆ."

–ಎಂದವಳೇ ಗಿರಿಜೆ ಲಿಂಗಣ್ಣನಾಯಕನ ಅಪ್ಪಣೆಯನ್ನು ಪಡೆಯದೆ ಅಲ್ಲಿಂದ ಹೊರಟು ಕತ್ತಲಲ್ಲಿ ಕರಗಿ ಹೋದಳು.

ವನದಲ್ಲಿ ಒಂಟಿಯಾಗಿ ಕುಳಿತ ಲಿಂಗಣ್ಣನಾಯಕನಿಗೆ, ಇದ್ದಕ್ಕಿದ್ದ ಹಾಗೇ ಕತ್ತಲು ಮತ್ತಷ್ಟು ದಟ್ಟವಾದಂತೆ ತೋರಿತು. ಲಿಂಗಣ್ಣನಾಯ ಕನ ನಿರ್ಧಾರದಿಂದ ಉಳಿದವರು ಹೃದಯ ಹಗುರವಾಗಿದ್ದರೂ, ಲಿಂಗಣ್ಣ ನಾಯಕನ ಹೃದಯ ಮಾತ್ರ ಆ ನಿರ್ಧಾರದಿಂದ ಮತ್ತಷ್ಟು ಭಾರವಾ ಗಿತ್ತು. ಹೃದಯ ಭಾರಕ್ಕೆ ಬಾಗಿದಂತೆ, ತಲೆಯೂ ನೆಲದತ್ತ ಬಾಗಿತು.

ಹಾಗೆಯೇ ಒಂಟಿಯಾಗಿ, ಕತ್ತಲನ್ನು ದಿಟ್ಟಿಸುತ್ತಾ ಕುಳಿತಿದ್ದ.

## ೩

ಲಿಂಗಣ್ಣನಾಯಕನೇನೋ ತನ್ನ ದುಃಖ, ನಿರಾಶೆ, ಬೇಸರಗಳ ನ್ನೆಲ್ಲಾ ಮರೆತು ಮತ್ತೆ ಸಿಂಹಾಸನ ಸ್ವೀಕಾರ ಮಾಡಲು ಒಪ್ಪಿದ್ದ. ಆದರೆ ಆತನನ್ನು ಸಿಂಹಾಸನಕ್ಕೆ ತರುವುದು, ಆತನಿಂದ ಒಪ್ಪಿಗೆ ಪಡೆದಷ್ಟು ಸುಲಭವಾಗಿರಲಿಲ್ಲ, ಪರಶುರಾಮಪ್ಪನ ಗುಂಪಿನವರಿಗೆ.

ಪ್ರಕಟವಾಗಿ ಯಾರೊಬ್ಬರೂ ಹಾಗೆಂದು ಹೇಳದಿದ್ದರೂ, ದಳವಾಯಿ ಮುದ್ದಣ್ಣನ ಗುಂಪಿಗೂ, ಈ ಗುಂಪಿನವರಿಗೂ ಹಗೆತನವಿತ್ತು. ದುರ್ಗದ ಸಿಂಹಾಸನದ ನಿಷ್ಠೆಯಿಂದ ಅವರು, ಚಿಕ್ಕಣ್ಣನಾಯಕರು ದೊರೆಯಾಗಿ ಇದ್ದಷ್ಟು ದಿನ ತಮ್ಮ ವೈರವನ್ನು ಹಿಂಬದಿಗೆ ತಳ್ಳಿ, ದುಡಿದಿದ್ದರು. ಚಿಕ್ಕಣ್ಣ

ಮುದ್ದಣ್ಣನ ಸೂತ್ರದ ಗೊಂಬೆಯಂತಿದ್ದರೂ, ತಾನಿರುವಷ್ಟು ದಿನ ಈ ದ್ವೇಷ ಪ್ರಬಲವಾಗಲು, ಬೆಳೆಯಲು ಅವಕಾಶ ಕೊಟ್ಟಿರಲಿಲ್ಲ. ಅವರು ತನ್ನ ಹಗೆಗಳಾಗಿದ್ದವರ ಮಕ್ಕಳೆಂಬುದನ್ನರಿತೂ, ಮುದ್ದಣ್ಣ ಪ್ರಜಾಭಿಪ್ರಾಯಕ್ಕೆ ಹೆದರಿ ಅವರನ್ನು ನಿರ್ನಾಮಮಾಡಲು ಯತ್ನಿಸಿರಲಿಲ್ಲ. ಜನರ ಕಣ್ಣಿಗೆ ಕಾಣುವಂತೆ, ಎಲ್ಲ ಹಗೆತನವನ್ನೂ ಮರೆತಿದ್ದವನಂತೆಯೇ ನಡೆದುಕೊಂಡಿದ್ದ. ಆದರೂ ಪರಶುರಾಮಪ್ಪನವರ ಗುಂಪಿಗೆ ಮುದ್ದಣ್ಣನ ಸ್ನೇಹಭಾವನೆಯಲ್ಲಿ ಅಷ್ಟು ನಂಬಿಕೆಯಿರಲಿಲ್ಲ. ಅದು ಬರಿಯ ಮುಖವಾಡವೆಂದೇ ತಿಳಿದಿದ್ದರು.

ಅಷ್ಟೇ ಅಲ್ಲ; ತನ್ನ ತಂದೆಯನ್ನು ಕೊಂದ ಮುದ್ದಣ್ಣನ ತಲೆಯನ್ನು ಕತ್ತರಿಸಿಯೇ ತೀರಬೇಕೆಂಬ ಸೇಡಿನ ಭಾವನೆಯೇ ಇತ್ತು ದೇಸಣ್ಣನ ಮಗನಾದ ಭರಮಣ್ಣನಿಗೆ. ಆತ ತನ್ನ ಹೃದಯದಲ್ಲಿ ಹೊಗೆಯಾಡುತ್ತಿದ್ದ ದ್ವೇಷವನ್ನು ಹೊರಗೆ ಕಾರದಿದ್ದರೂ, ಮುದ್ದಣ್ಣನ ಸ್ನೇಹದ ಮಾತಿಗೆ ಸೋಲದೆ, ಆದಷ್ಟು ದೂರವಾಗಿಯೇ ಇದ್ದ. ನಾಲ್ಕಾರು ಬಗೆಯಲ್ಲಿ ಭರಮಣ್ಣನ ಹೃದಯವನ್ನು ಕೈವಶಮಾಡಿಕೊಳ್ಳಲು ಯತ್ನಿಸಿ ವಿಫಲನಾದ ಮುದ್ದಣ್ಣನಿಗೂ ಇದರ ಅರಿವು ಇಲ್ಲದಿರಲಿಲ್ಲ. ಹೀಗಾಗಿ ತೋರಿಕೆಗೆ ಯಾವ ವೈಮನಸ್ಯವೂ ಕಾಣದಿದ್ದರೂ, ಅಂತರಂಗದಲ್ಲಿ, ಇಬ್ಬಣದ ಬಿರುಕು ಇದ್ದೇ ಇತ್ತು.

ಇದರಿಂದಾಗಿ, ತಮ್ಮ ಮಾತಿಗೆ ಮುದ್ದಣ್ಣನನ್ನು ಒಪ್ಪಿಸುವುದು ಸುಲಭವಲ್ಲವೆಂಬುದು ಅವರಿಬ್ಬರಿಗೂ ಅರಿವಿತ್ತು. ಅಷ್ಟೇ ಅಲ್ಲ—ತಾವೇ ಲಿಂಗಣ್ಣನಾಯಕನ ಹಕ್ಕು ಬಾಧ್ಯತೆಯನ್ನು ಎತ್ತಿ ಹಿಡಿಯುವುದರಿಂದ, ಕಾರ್ಯಸಾಧನೆಯಾಗುವುದಕ್ಕಿಂತ ಹೆಚ್ಚಾಗಿ, ಎಲ್ಲಿ ಕಾರ್ಯಭಂಗವಾಗುವುದೋ ಎಂಬ ಭೀತಿಯೂ ಇತ್ತು. ಆದರೂ ಮುದ್ದಣ್ಣನ ಒಪ್ಪಿಗೆ ಪಡೆಯದೆ, ಲಿಂಗಣ್ಣನಾಯಕ ಪಟ್ಟಕ್ಕೆ ಬರುವುದು ಅಸಾಧ್ಯವಾಗಿತ್ತು. ಚಿಕ್ಕಣ್ಣನಾಯಕನ ಕಾಲದಲ್ಲಿ ಮುದ್ದಣ್ಣ ತನ್ನ ಸ್ಥಾನವನ್ನು ಅಷ್ಟು ಬಲಗೊಳಿಸಿಕೊಂಡಿದ್ದ.

ಮುದ್ದಣ್ಣನ ಕಡೆಯವರಿಂದ ಓಬಣ್ಣನಾಯಕನ ಕೊಲೆಯಾದಾಗ, ಮುದ್ದಣ್ಣನೇ ಕೈಯಾರ ನಾಯಕರನ್ನು, ದಳವಾಯಿ ದೇಸಣ್ಣನನ್ನು

ಕತ್ತರಿಸಿದನೆಂಬುದರಿಂದಾಗಿ, ದುರ್ಗದ ಜನಕ್ಕೆ ಮುದ್ದಣ್ಣನಲ್ಲಿ ಅಸಮಾ ಧಾನವಿತ್ತು; ಹಲಕೆಲವರಿಗೆ ಮುನಿಸೂ ಇತ್ತು. ಮುದ್ದಣ್ಣ ಮನಸ್ಸು ಮಾಡಿದ್ದರೆ, ಅಂಥ ವಿರೋಧವನ್ನು ಕತ್ತಿಯಿಂದಲೇ ಮಟ್ಟಹಾಕಬಹು ದಾಗಿತ್ತಾದರೂ, ಹಾಗೆ ಮಾಡದೆ, ಚಾಕಚಕ್ಯತೆಯಿಂದ ವರ್ತಿಸಿ, ನ್ಯಾಯವಾದ ವಾರಸುದಾರರನ್ನು ಪಟ್ಟಕ್ಕೆ ತರುವುದಕ್ಕಾಗಿಯೇ ತಾನು ಮನಸ್ಸಿಲ್ಲದಿದ್ದರೂ ಕೊಲೆಗೆ ಕೈಯಿಕ್ಕಬೇಕಾಯಿತು ಎಂಬ ಭಾವನೆ ಜನಗಳಲ್ಲಿ ಮೂಡುವಂತೆ ಮಾಡಿದ್ದ. ಅಲ್ಲದೆ, ಅವನ ನಾಯಕತ್ವದಲ್ಲಿ, ಷಂಷೀರ್ ಖಾನನ ಮೇಲೆ, ರಾಯದುರ್ಗದವರ ಮೇಲೆ, ತರೀಕೆರೆಯವರ ಮೇಲೆ ನಡೆದ ಯುದ್ಧಗಳಲ್ಲಿ ದುರ್ಗಕ್ಕೆ ಗೆಲವು ದೊರೆತದ್ದು, ಎಷ್ಟೋ ಜನ ಅವನ ಕೊಲೆಗೆಲಸವನ್ನು ಮರೆತು ಅವನಲ್ಲಿ ಗೌರವ ತೋರಲು ಕಾರಣವಾಯಿತು. ಬರಬರುತ್ತಾ ಜನ ಅವನ ರಾಕ್ಷಸ ಕೃತ್ಯಗಳನ್ನು ಮರೆತು, ಅವನ ಗೆಲುವುಗಳನ್ನು ಮಾತ್ರವೇ ಮೆಚ್ಚಲಾರಂಭಿಸಿತು.

ಹೀಗೆ ಜನರ ಅಭಿಪ್ರಾಯದಲ್ಲಿ ತನ್ನ ಸ್ಥಾನವನ್ನು ಉಳಿಸಿಕೊಂಡು ಮುದ್ದಣ್ಣ, ಸೇನೆಯಲ್ಲಿ ತನ್ನ ಇಬ್ಬರು ತಮ್ಮಂದಿರನ್ನು ದಳವಾಯಿ ಗಳನ್ನಾಗಿಮಾಡಿ, ಸೇನೆಯ ಮುಖ್ಯ ಸ್ಥಾನಗಳಲ್ಲೆಲ್ಲಾ ತನ್ನ ಕಡೆಯ ವರನ್ನೇ ನೇಮಿಸಿ, ಸೇನೆಯನ್ನು ಸಂಪೂರ್ಣವಾಗಿ ತನ್ನ ಹತೋಟಿ ಯಲ್ಲಿಟ್ಟುಕೊಂಡಿದ್ದ.

ಸೇನೆಯಂತೆಯೇ ಅರಮನೆಯೂ ಮುದ್ದಣ್ಣದ ಹತೋಟಿಯಲ್ಲಿಯೇ ಇತ್ತು. ಚಿಕ್ಕಣ್ಣನಾಯಕನಂತೂ ಇದ್ದಷ್ಟು ದಿನ ಮುದ್ದಣ್ಣನ ಕೈಯ ಸೂತ್ರದ ಗೊಂಬೆಯಾಗಿದ್ದ. ಮುದ್ದಣ್ಣನ ಮಾತು ಮೀರಿ ಯಾವ ರಾಜ ಕಾರಣವೂ ನಡೆಯುತ್ತಿರಲಿಲ್ಲ. ಅದರ ಜೊತೆಗೆ ಅರಮನೆಯ ಮುಖ್ಯ ವಾದ ಊಳಿಗಗಳಿಗೂ ತನಗೆ ಬೇಕಾದವರನ್ನೇ ನೆಮುಕಮಾಡಿ, ತನಗೆ ತಿಳಿಯದೆ ಅರಮನೆಯಲ್ಲಿ ಹುಲ್ಲುಕಡ್ಡಿಯೂ ಚಲಿಸದಂತೆ ಎಚ್ಚರವಾಗಿದ್ದ ಮುದ್ದಣ್ಣ.

ಇಷ್ಟು ಪ್ರಬಲನಾಗಿದ್ದ ಮುದ್ದಣ್ಣನ ಒಪ್ಪಿಗೆಯಿಲ್ಲದೆ ಲಿಂಗಣ್ಣ ನಾಯಕ ಪಟ್ಟಕ್ಕೆ ಬರುವುದು ಅಸಾಧ್ಯವೇ ಆಗಿತ್ತು. ಆದರೆ ಲಿಂಗಣ್ಣ ನಾಯಕ ಪಟ್ಟಕ್ಕೆ ಬರುವುದೋ, ಬೇಡವೋ ಎಂಬ ಬಗ್ಗೆ, ಚಿಕ್ಕಣ್ಣನಾಯ

ಕರ ಮರಣದ ಬಳಿಕ ಮುದ್ದಣ್ಣ ಯಾವ ಮಾತನ್ನು ಆಡದೆ ಇದ್ದುದರಿಂದ ಅವನ ಮನಸ್ಸನ್ನು ಅರಿತುಕೊಂಡು ಇವರು ಮುಂದೆ ನಡೆಯಬೇಕಾಗಿತ್ತು. ಆದರೆ ಅವನ ಮನಸ್ಸನ್ನು ತಿಳಿದುಕೊಳ್ಳುವ ದಾರಿ? ಮುದ್ದಣ್ಣನೇ ನೇರವಾಗಿ ಆ ಮಾತು ಎತ್ತಿದ್ದರೆ, ಇವರು ತಮ್ಮ ಅಭಿಪ್ರಾಯ ಸೂಚಿಸಬಹುದಾಗಿತ್ತು. ಲಿಂಗಣ್ಣನಾಯಕ ಪಟ್ಟಕ್ಕೆ ಬರದೆ ಹೋದರೆ, ಮತ್ತಿಯ ವಂಶವೇ ಮುಕ್ತಾಯವಾಗುವುದೆಂದು ಹೇಳಿ, ತಮ್ಮ ಅಭಿಪ್ರಾಯಕ್ಕೆ ಅಷ್ಟು ಜನದ ಬೆಂಬಲವನ್ನೂ ದೊರಕಿಸಬಹುದಾಗಿತ್ತು. ಆದರೆ ಯಾವ ಕಾರಣಕ್ಕಾಗಿಯೋ ಚಿಕ್ಕಣ್ಣನಾಯಕ ಮೃತನಾಗಿ, ಅತನ ಮೃತ್ಯುಕ್ರಿಯೆಗಳೆಲ್ಲವೂ ಮುಗಿದು ಕೆಲದಿನ ಕಳೆದಿದ್ದರೂ ಮುದ್ದಣ್ಣ ಮುಂದೆ ಪಟ್ಟಾಧಿಕಾರಿ ಯಾರಾಗಬೇಕು ಎಂಬ ಮಾತನ್ನೇ ಎತ್ತಿರಲಿಲ್ಲ.

ಅವನನ್ನು ಬಿಟ್ಟರೆ, ಅರಮನೆಯುವರು ಈ ಸುದ್ದಿಯನ್ನು ಎತ್ತಬಹುದಾಗಿತ್ತು. ಆದರೆ ಚಿಕ್ಕಣ್ಣನಾಯಕನೊಂದಿಗೆ ಆತನ ಮುಖ್ಯ ರಾಣಿಯರೆಲ್ಲಾ ಸಹಗಮನ ಮಾಡಿದ್ದುದರಿಂದ, ಆ ವಿಚಾರವನ್ನು ಎತ್ತಬಲ್ಲವರು ಅರಮನೆಯಲ್ಲೂ ಇರಲಿಲ್ಲ. ಮಲ್ಲಮ್ಮ ನಾಗತಿಯೊಬ್ಬಳೇನೋ ಉಳಿದುಕೊಂಡಿದ್ದಳು ನಿಜ. ಆದರೆ ಆಕೆ ಚಿಕ್ಕಣ್ಣ ನಾಯಕರು ಇರುವಾಗಲೇ ಅರಮನೆಯಿಂದ ದೂರವಾಗಿದ್ದಳು.

ಚಂಚಲ ಚಿತ್ತನಾದ ಚಿಕ್ಕಣ್ಣನಾಯಕನಿಗೆ ಒಮ್ಮೆ, ದುರ್ಗಕ್ಕೆ ದಯ್ಯ ಮಾಡಿಸಿದ ಉಗ್ರಚನ್ನವೀರದೇವರೆಂಬ ವಿರಕ್ತ ಪಂಥದ ಜಂಗಮರಿಂದ ವಚನ ವ್ಯಾಖ್ಯಾನವನ್ನು ಕೇಳಿ, ಇದ್ದಕ್ಕಿದ್ದಹಾಗೆಯೇ ಅವರಿಂಡ ಲಿಂಗ ಕಟ್ಟಿಸಿಕೊಂಡು ವೀರಶೈವನಾಗಬೇಕೆಂಬ ಬಯಕೆಯಾಯಿತು. ಕೂಡಲೇ ಚನ್ನವೀರದೇವರಿಂದ ಶಿವದೀಕ್ಷೆ ಪಡೆದುಕೊಂಡ. ಆತನ ನಾಗತಿಯರೂ ಶಿವದೀಕ್ಷೆ ಪಡೆದರು. ಆದರೆ ಯಾವ ದೃಢವಾದ ಶ್ರದ್ಧೆಯ ಬಲವೂ ಇಲ್ಲದ ಈ ಮತಾಂತರ ಬಹುದಿನ ಬಾಳಲಿಲ್ಲ. ಶಿವದೀಕ್ಷೆ ಕಟ್ಟಿಸಿಕೊಂಡ ಕೆಲವೇ ತಿಂಗಳುಗಳಲ್ಲೇ ಚಿಕ್ಕಣ್ಣನಾಯಕ ಮತ್ತೆ ಅದನ್ನು ತ್ಯಜಿಸಿಯೂ ಬಿಟ್ಟ. ನಾಗತಿಯರೂ ಮತ್ತೊಮ್ಮೆ ನಾಯಕನನ್ನು ಹಿಂಬಾಲಿಸಿದರು. ಆದರೆ ಅವನ ನಾಗತಿಯರ ಪೈಕಿ ಹಟ್ಟಿ ಮಲ್ಲಮ್ಮ ನಾಗತಿ ಮಾತ್ರ ಶ್ರದ್ಧೆಯಿಂದ ಸ್ವೀಕರಿಸಿದ ಶಿವದೀಕ್ಷೆಯನ್ನು, ನಾಯಕನ ಚಪಲಚಿತ್ತಕ್ಕೆ ಬಲಿಗೊಡಲು

ಒಪ್ಪಲಿಲ್ಲ. ಇದರಿಂದಾಗಿ ಆಕೆ ನಾಯಕನ ಕೋಪಕ್ಕೆ ಪಾತ್ರಳಾಗಿ, ಅರ ಮನೆಯಿಂದ ದೂರವಾಗಿ ಬೇರೆ ಗೃಹದಲ್ಲಿ ವಾಸಮಾಡಬೇಕಾಗಿ ಬಂದಿತು.

ಈಗ ಚಕ್ಕಣ್ಣನಾಯಕ ಮೃತನಾದಮೇಲೆ ಆಕೆಯೊಬ್ಬಳು ಸಹ ಗಮನ ಮಾಡದೆ ಉಳಿದುಕೊಂಡಿದ್ದಳು. ಆಕೆ ನಾಗತಿ ನಿಜ; ಆಕೆ ಈ ಪ್ರಶ್ನೆಯನ್ನು ಎತ್ತಲೂ ಬಹುದು. ಆದರೆ ನಾಯಕನಿದ್ದಾಗಲೇ ಹೆಸರಿಗೆ ಮಾತ್ರ ನಾಗತಿಯಾಗಿದ್ದ ಆಕೆಯ ಮಾತಿಗೆ ಮುದ್ದಣ್ಣ ಬೆಲೆ ಕೊಡುವನೇ ಎಂಬ ಸಂಶಯ ಪರಶುರಾಮಪ್ಪನಿಗಿತ್ತು. ಆದರೂ ಈ ಪ್ರಶ್ನೆಯನ್ನು ಹೇಗಾದರೂ ಎತ್ತಲು ಅದೊಂದಲ್ಲದೆ ಬೇರಾವ ದಾರಿಯೂ ತೋರದೆ ಆಕೆಯನ್ನೇ ಕಂಡು, ಆಕೆಯ ಮುಖಾಂತರವೇ ಮುದ್ದಣ್ಣನ ಅಭಿಪ್ರಾಯ ಕೇಳುವುದು ಎಂದು ನಿಶ್ಚಯ ಮಾಡಿದ.

ಪರಶುರಾಮಪ್ಪನ ಸಲಹೆ ಉಳಿದವರಿಗೂ ಸರಿಯೆಂದು ತೋರಿ ಪರಶುರಾಮಪ್ಪನೇ ರಾಯಭಾರವನ್ನು ಹೊತ್ತು ಮಲ್ಲಮ್ಮ ನಾಗತಿಯನ್ನು ಕಾಣಲು ಹೊರಟ.

## ೪

ಮಲ್ಲಮ್ಮ ನಾಗತಿಯನ್ನು ಕಾಣಲೆಂದು ಆಕೆಯ ಮನೆಯತ್ತ ಹೋದ ಪರಶುರಾಮಪ್ಪನಿಗೆ, ಆಕೆ ಮನೆಯಲ್ಲಿಲ್ಲ, ಶಿವಪೂಜೆಗೆಂದು ಕಲ್ಲು ಮಠಕ್ಕೆ ಹೋಗಿದ್ದಾಳೆಂದು ತಿಳಿದು, ಬಂದಕೆಲಸ ಆಗುವುದೋ ಇಲ್ಲವೋ ಎಂದು ಅನುಮಾನವಾಯಿತು. ಆದರೂ ಮುಂದಿಟ್ಟ ಹೆಜ್ಜೆಯನ್ನು ಹಿಂದಿಡಲು ಮನಸ್ಸಾಗದೆ, ಏನಾದರಾಗಲಿ ಒಮ್ಮೆ ಆಕೆಯನ್ನು ಕಂಡು, ಆಕೆಯ ಮನಸ್ಸೇನಿರುವುದೆಂಬುದನ್ನು ಸೂಕ್ಷ್ಮವಾಗಿ ಅರಿತುಕೊಂಡು ಹೆಚ್ಚಿನ ಮಾತಿಗೆ ಮತ್ತೊಂದು ಸಮಯ ಗೊತ್ತುಮಾಡಿಕೊಂಡು ಬರು ವುದೆಂದು, ಮಠದತ್ತಲೇ ನಡೆದ.

ನಾಗತಿಯ ಮನೆಗೆ ಸಮೀಪವಾಗಿಯೇ ಇದ್ದ ಲಾಲ್ ಕೋಟೆಯ ಬಾಗಿಲಬಳಿಯಲ್ಲಿಯೇ ಇತ್ತು, ಚಿಕ್ಕಣ್ಣನಾಯಕ ಉಗ್ರಚನ್ನವೀರ ದೇವ ರಿಗೆ ಕಟ್ಟಿಸಿಕೊಟ್ಟ ಕಲ್ಲುಗೆಲಸದ ಮಠ.

ಆ ಮಠವನ್ನು ಪೂರ್ಣವಾಗಿ ಕಲ್ಲಿನಲ್ಲೇ ಕಟ್ಟಿಸಿದ್ದುದರಿಂದ ಆದಕ್ಕೆ

ಕಲ್ಲುಮಠವೆಂದೇ ಹೆಸರಾಗಿತ್ತು. ಕಲ್ಲುಮಠವೆಂದು ಕರೆದರೂ ಮಠ ರಾಜಗುರುಗಳಾಗಿದ್ದವರ ಗೌರವ, ಪ್ರತಿಷ್ಠೆಗಳಿಗೆ ಸಲ್ಲುವಂತೆ ಭವ್ಯ ವಾಗಿತ್ತು.

ನೆಲಮಟ್ಟದಿಂದ ನಾಲ್ಕು ಅಡಿ ಎತ್ತರವಾಗಿ, ವಿಸ್ತಾರವಾದ ಪೀಠ ವನ್ನು ಕಟ್ಟಿ ಅದರ ಮೇಲೆ ಮಠವನ್ನು ಕಟ್ಟಿದ್ದರು. ಮಠದ ತಲೆಬಾಗಿಲ ಇದಿರು ನೆಲಮಟ್ಟದಿಂದ ಎತ್ತರವಾದ ಬಾಗಿಲನ್ನು ಸೇರಲು ಕಟ್ಟಿದ ನಯವಾದ ಕಲ್ಲುಪಾವಟಿಗೆಗಳ ಇಬ್ಬದಿಯಲ್ಲೂ ಆ ಎತ್ತರಕ್ಕೂ ಎರಡು ಬಾಯ್ದೆರೆದು ನಿಂತ ಶಿಲಾಸಿಂಹಗಳು. ಪಾವಟಿಗೆಗಳನ್ನು ಏರಿದೊಡನೆಯೇ ಅರವತ್ತು ಕಂಭಗಳನ್ನುಳ್ಳ ಕೈಸಾಲೆ. ಅದರ ಮಧ್ಯಭಾಗದಲ್ಲಿ ಮಹಾ ದ್ವಾರ. ಮಹಾದ್ವಾರದ ಇಬ್ಬದಿಯಲ್ಲೂ ಎರಡು ವಿಸ್ತಾರವಾದ ಕಲ್ಲು ಜಗಲಿಗಳು. ಎರಡು ಜಗಲಿಗಳಮೇಲೂ ಒಂದೊಂದು ಭಾರಿ ನಗಾರಿ ಗಳನ್ನಿಟ್ಟಿದ್ದಾರೆ—ಪೂಜಾಕಾಲದಲ್ಲಿ ಅವನ್ನು ಬಾರಿಸಿ, ದುರ್ಗಕ್ಕೆಲ್ಲಾ ಇದು ಪೂಜಾಕಾಲವೆಂದು ತಿಳುವಳಿಕೆ ಕೊಡಲು. ಮಹಾದ್ವಾರವನ್ನು ದಾಟಿದಕೂಡಲೇ ಎತ್ತರವಾದ ಕಲ್ಲುಗೋಡೆಯೊಂದು ಅಡ್ಡವಾಗುತ್ತದೆ. ಆದರೆ ಎರಡೂ ಕಡೆಗಳಲ್ಲಿ, ಉತ್ತರ ದಕ್ಷಿಣಾಭಿಮುಖವಾದ ಎರಡು ಚಿತ್ರ ಗೆಲಸದ ಶಿಲಾದ್ವಾರಗಳು. ಉತ್ತರ ದಿಕ್ಕಿನ ದ್ವಾರದಿಂದ ಪ್ರವೇಶಮಾಡಿ ದರೆ ಅಡ್ಡಗೋಡೆಯ ಹಿಂಬದಿಯ ಬಯಲಂಕಣಕ್ಕೆ ಹೋಗಬಹುದು. ಬಯಲಂಕಣದ ಸುತ್ತಲೂ ಎಂಭತ್ತು ಕಲ್ಲುಕಂಭಗಳಿರುವ ಕೈಸಾಲೆ. ಕೈಸಾಲೆಯ ಬಲಬದಿಯಲ್ಲಿ ಇನ್ನೂರುಜನ ಕುಳಿತುಕೊಳ್ಳುವಷ್ಟು ವಿಶಾಲ ವಾದ ಸಭಾಗೃಹ. ಎಡಬದಿಗೆ ಐದುನೂರು ಜನ ಒಟ್ಟಿಗೆ ಕುಳಿತು ಕೊಳ್ಳಲು ಸಾಕಾಗುವಷ್ಟು ವಿಶಾಲವಾದ ಭೋಜನ ಶಾಲೆ. ದಕ್ಷಿಣಬದಿಯ ದ್ವಾರದಿಂದ ನೇರವಾಗಿ ಭೋಜನ ಶಾಲೆಯನ್ನೇ ಪ್ರವೇಶಿಸಬಹುದು. ಇವೆರಡರ ನಡುವೆ ಪೂರ್ವಾಭಿಮುಖವಾಗಿ ಶಿವಾಲಯ. ಅದರ ಇದುರಿನ ಅಂಗಳದಲ್ಲಿ ಪಕ್ಕದ ಬೆಟ್ಟದಿಂದ ಹರಿಯುವ ಒರತೆಯೊಂದನ್ನು ತಿರುಗಿಸಿ ಸದಾ ಕಾಲವೂ ಹೊಸನೀರು ಇರುವಂತೆ ನಿರ್ಮಿಸಿದ ಸಣ್ಣ ಪುಷ್ಕರಣಿ. ಪುಷ್ಕರಣಿಯ ಮಧ್ಯಭಾಗದಲ್ಲಿ ನಿಲ್ಲಿಸಿದ ಕಲ್ಲುಕಂಭದ ಮೇಲೆ ಸುಂದರ ವಾದ ಬಸವನವಿಗ್ರಹವಿದೆ. ಪುಷ್ಕರಣಿಯ ಬಳಿಯಲ್ಲೇ ಒಂದು ಬಿಲ್ವ

ಪತ್ರೆಯ ಮರವೂ ಬೆಳೆದಿದೆ. ಆದಕ್ಕೆ ಹಬ್ಬಿದ ಮಲ್ಲಿಗೆಯ ಬಳ್ಳಿ, ಹೂವರಳಿಸಿ ಮಂದಿರದಲ್ಲೆಲ್ಲಾ ಸವಿರಾದ ಪರಿಮಳವನ್ನು ಹರಡಿದೆ.

ಇಡೀ ಮಠವೇ ಕಲ್ಲಿನಿಂದ ನಿರ್ಮಿತವಾಗಿದ್ದರೂ, ಸುತ್ತ ನಿಂತ ಶಿಲಾ ಸ್ತಂಭಗಳಿಗೆ ಬಣ್ಣ ಬಳಿದು, ಅದರ ಮೇಲೆ ಬಳ್ಳಿ ಹೂವುಗಳ ಚಿತ್ರ ಗೆಲಸ ಮಾಡಿರುವುದರಿಂದ, ಶೋಭಾಯಮಾನವಾಗಿ ಕಾಣುತ್ತಿದೆ. ವಿಸ್ತಾರವಾದ ಸಭಾಗೃಹದ, ಮೂರುಬದಿಯ ನಯಗಾರೆಯ ಕೆಲಸ ಮಾಡಿದ ಭಿತ್ತಿಗಳ ಮೇಲೂ ಪರಶಿವನ ಲೀಲಾ ವಿನೋದವನ್ನು ಸಾರುವ ಚಿತ್ರಗಳು ರಚಿತವಾಗಿದ್ದು, ಅವನ್ನ ನೋಡನೋಡುತ್ತಾ, ನೋಡುವವರ ಮನಸ್ಸು ಶಿವಭಕ್ತಿಯಲ್ಲಿ ಕರಗಿ ಹೋಗುತ್ತದೆ. ಲೋಕವೇ ಮರೆತು ಹೋಗಿ ಬೇರಾವುದೋ ಪವಿತ್ರವಾದ ಕಾಂತಿಯುತವಾದ ಲೋಕವನ್ನು ಪ್ರವೇಶಿಸಿದಂತಾಗುತ್ತದೆ—ನೋಟಕರಿಗೆ.

ವಟುವನ್ನು ಹಿಂಬಾಲಿಸಿ, ನಾಗತಿಯರನ್ನು ಕಾಣಲೆಂದು ಬಂದ ಪರಶುರಾಮಪ್ಪನಿಗೂ ಹಾಗೇ ಆಯಿತು. ಗಟ್ಟಿಯಾಗಿ ಸಪ್ಪಳಾಗುವಂತೆ ಹೆಜ್ಜೆ ಹಾಕಿದರೆ, ಅಲ್ಲಿ ನೆಲಸಿದ ದಿವ್ಯಮೌನಕ್ಕೆ ಎಲ್ಲಿ ಭಂಗ ಬರುವುದೋ ಎಂದು ಹೆದರಿ ಮೃದುವಾಗಿ ಹೆಜ್ಜೆ ಇಟ್ಟು ನಡೆದು ಬಂದು ವ್ಯಾಘ್ರಾಜಿನದ ಮೇಲೆ ಮಂಡಿಸಿದ ಗುರುಗಳಿಗೆ ನಿಂಬೆಯ ಹಣ್ಣಿನ ಕಾಣಿಕೆಯನ್ನರ್ಪಿಸಿ ಸಾಷ್ಟಾಂಗ ಪ್ರಣಾಮಮಾಡಿದ.

"ಶಿವಮಸ್ತು" ಎಂದು ಆತನನ್ನು ಆಶೀರ್ವದಿಸಿ, "ಕುಳಿತುಕೊಳ್ಳಿ" ಎಂದು ಸ್ವಾಮಿಗಳು ತಮಗೆ ಸ್ವಲ್ಪದೂರದಲ್ಲಿದ್ದ ಮಣೆಯನ್ನು ತೋರಿದರು.

ಕುಳಿತುಕೊಳ್ಳಿ ಎಂದು ಸ್ವಾಮಿಗಳೇ ಹೇಳಿದರೂ, ಅಲ್ಲಿ ಕುಳಿತು ಕೊಳ್ಳಲು, ಎಲ್ಲಿ ಅಪಚಾರವಾಗುವುದೊ ಎಂದು ಹೆದರಿ ಹಿಂಜರಿಯಿತು ಪರಶುರಾಮಪ್ಪನ ಮನಸ್ಸು. ಆದರೂ ಅವರ ಅಪ್ಪಣೆಯನ್ನು ಮೀರ ಲಾರದೆ ಹೋಗಿ ಮಣೆಯಮೇಲೆ ಮುದುಡಿ ಕುಳಿತುಕೊಂಡ. ಏಕೋ ಅವರಿದುರು ಕುಳಿತಾಗ ಅವನಿಗೆ ಹಿಮಾಲಯದಿದಿರು ಕುಳಿತ ಕುಬ್ಜ ತಾನು ಎನಿಸಿತು. ಕಾವಿಯನ್ನುಟ್ಟ ಸ್ವಾಮಿಗಳ ವ್ಯಕ್ತಿತ್ವ ಸರಳವಾಗಿದ್ದರೂ ಅಷ್ಟು ಭವ್ಯವಾಗಿತ್ತು. ಜಪ ತಪ ಯೋಗಗಳಿಂದ ಪುಟವಿಕ್ಕಿದ್ದ ಚಿನ್ನ ದಂತೆ ಕಾಂತಿಯುಕ್ತವಾದ, ಶಾಂತಿಯ ಬೆಳುದಿಂಗಳು ಹರಡಿದ ಇವರ

ತ್ರಿಪುಂಡ್ರಭೂಷಿತವಾದ ಮುಖವನ್ನು ಕಂಡು ಅವನ ಹೃದಯದಲ್ಲಿದ್ದ ಎಲ್ಲ ಭಾವನೆಗಳೂ ಮಾಯವಾಗಿ, ಆವನ ಹೃದಯದಲ್ಲೂ ಶಾಂತಿ ನೆಲಸಿತು. ಮಾತು ಸೋತು, ಮೈಮರೆತು, ಭಕ್ತಿ ತುಂಬಿದ ಕಣ್ಣುಗಳಿಂದ ಅವರ ಮೊಗವನ್ನೇ ಈಕ್ಷಿಸುತ್ತಾ ಕುಳಿತುಕೊಂಡ ಪರಶುರಾಮಪ್ಪ.

ಅವನ ಮನದಲ್ಲಾದ ಪರಿವರ್ತನೆ ಸ್ವಾಮಿಗಳಿಗೂ ಅರಿವಾಗಿ, ಹಿಮಾಲಯದ ಮೇಲೆ ಚಂದ್ರೋದಯವಾದಂತೆ, ಅವರ ಮೊಗದ ಮೇಲೆ ಮಂದಹಾಸ ಮೂಡಿತು. ಆ ಪ್ರಸನ್ನತೆಯೇ ಧ್ವನಿರೂಪ ತಾಳಿದಂತಾಗಿ ಸ್ಪಷ್ಟವಾದ ಧ್ವನಿಯಲ್ಲಿ ಕೇಳಿದರು:

"ಗೃಹದಲ್ಲಿ ಎಲ್ಲರೂ ಕುಶಲವೇ?"

"ಗುರುಗಳ ಆಶೀರ್ವಾದ. ಎಲ್ಲರೂ ಕ್ಷೇಮ."

"ಏನು ಇಷ್ಟುದೂರ ಬಂದಿರಿ?"

"ನಾಗತಿಯರನ್ನು ಕಾಣಬೇಕೆಂದು ಹೋಗಿದ್ದೆ. ಇಲ್ಲಿದಾರೆಂದು ತಿಳಿಯಿತು. ಒಂದು ಭಾಗ್ಯ ಬಯಸಿಹೋದವನಿಗೆ ಅಲ್ಲಿ ಇಬ್ಬಗೆಯ ಭಾಗ್ಯ ಪ್ರಾಪ್ತವಾಗುವ ಯೋಗವಿತ್ತು. ಇಲ್ಲಿಯೇ ತಮ್ಮ ಆಶೀರ್ವಾದ ಪಡೆದು, ಅವರನ್ನೂ ಕಂಡು ಹೋಗೋಣವೆಂದು ಬಂದೆ."

"ಒಳಿತಾಯಿತು. ಕುಳಿತುಕೊಳ್ಳಿ. ಇನ್ನೇನು ಮಂಗಳಾರತಿಯ ಹೊತ್ತು. ನೀವು ಬಂದಿರುವ ಸುದ್ದಿಯನ್ನು ಅವರಿಗೆ ಹೇಳಿಕಳಿಸುತ್ತೇವೆ. ಮಂಗಳಾರತಿ ಮುಗಿಸಿಕೊಂಡು ಇಲ್ಲಿಗೇ ಬರುತ್ತಾರೆ. ಇಲ್ಲಿ ಯಾವ ಸಂಕೋಚವೂ ಇಲ್ಲದೆ ಮಾತನಾಡಬಹುದು. ಹಾಗೂ ರಹಸ್ಯವೇನ್ನಾವು ದಾದರೆ, ಯಾರನ್ನೂ ಇಲ್ಲಿಗೆ ಬಿಡಕೂಡದೆಂದು ಹೇಳುತ್ತೇವೆ. ಅಗತ್ಯ ವಾದರೆ, ನಾವೂ ಇಲ್ಲಿರುವುದು ಕೂಡದು ಎನಿಸಿದರೆ ಆ ಮಾತನ್ನು ಹೇಳಿ. ಯಾವುದಕ್ಕೂ ಸಂಕೋಚಪಟ್ಟುಕೊಳ್ಳಬೇಡಿ."

ಗುರುಗಳ ಮಾತನ್ನು ಕೇಳಿ ಒಂದು ಗಳಿಗೆ ಪರಶುರಾಮಪ್ಪನಿಗೆ ಬಾಯಿ ಕಟ್ಟಿದಂತಾಯಿತು. ದೊಡ್ಡವರಲ್ಲಿ ಏನು ಮಾತನಾಡಿದರೆ, ಯಾವ ಬಗೆಯ ಅಪಚಾರವಾಗುವುದೋ ಎಂದು ಚಿಂತಿಸಿ ಬಳಿಕ ಹೇಳಿದ—

"ತಮ್ಮ ಬಳಿ ಮುಚ್ಚುಮರೆ ಮಾಡುವಂಥ ಮಾತು ಯಾವುದೂ ಇಲ್ಲ. ಆದರೂ ಸರ್ವಸಂಗಪರಿತ್ಯಾಗಿಗಳಾಗಿ, ಲೋಕಾನುಗ್ರಹಕ್ಕಾಗಿ ಶಿವ

ಚಿಂತೆಯಲ್ಲೇ ನಿತ್ಯ ನಿರತರಾಗಿರುವ ತಮಗೆ ಈ ರಾಜಕಾರಣದ ಕ್ಷುಲ್ಲಕ ವಿಷಯದ ಲೇಪವಾಗುವುದಲ್ಲಾ ಎಂದಷ್ಟೇ ಸಂಕೋಚ...."

ಒಂದೊಂದು ಮಾತನ್ನೂ ತೂಗಿ ತೂಗಿ ಆಡಿದ ಪರಶುರಾಮಪ್ಪನ ಮಾತನ್ನು ಕೇಳಿ ಸ್ವಾಮಿಗಳು ಗಟ್ಟಿಯಾಗಿ ನಕ್ಕು ಹೇಳಿದರು:

"ಅಂದರೆ....ಈ ಮಾತು ನಡೆವಾಗ ನೀವು ಇರುವುದು ಅಗತ್ಯವಿಲ್ಲ ಎಂದೇ ನಮಗೆ ಹೇಳಿದ ಹಾಗಾಯಿತಲ್ಲ."

ಆ ಮಾತನ್ನು ಕೇಳಿ ಪರಶುರಾಮಪ್ಪನಿಗೆ ಎಲ್ಲಿ ಸ್ವಾಮಿಗಳು ತನ್ನ ಭಾವನೆಯನ್ನು ತಪ್ಪು ತಿಳಿದುಕೊಂಡರೋ ಎಂದು ಗಾಬರಿಯಾಗಿ, ಮುಖದಲ್ಲಿ ಆ ದಿಗಿಲು ತೋರಿತು.

"ಹಾ....ಹಾ....ಗಲ್ಲ ನನ್ನ ಅಭಿಪ್ರಾಯ" ಎಂದ.

"ನಮ್ಮ ಅಭಿಪ್ರಾಯವೂ ಹಾಗಲ್ಲ. ಯಾವ ಯಾವ ಮಾತನ್ನು ಯಾರು ಯಾರು ಆಡಿಕೊಳ್ಳಬೇಕೋ ಅವರೇ ಆಡಿಕೊಂಡರೆ ಒಳಿತು. ಮೂರನೆಯ ಕಿವಿ, ಮೂರನೆಯ ಬಾಯಿ ಅಪಾಯದ ತಾಯಿ. ಆದುದರಿಂದ ನಿಶ್ಚಿಂತರಾಗಿ ಮಾತನಾಡಿಕೊಳ್ಳಿ. ಆಗತ್ಯ ಬಿದ್ದರೆ ನಮ್ಮಿಂದಾದುದನ್ನು ಮಾಡಲು ನಾವೂ ಸಿದ್ಧವಾಗಿದ್ದೇವೆ."

ಸ್ವಾಮಿಗಳ ಮಾತನ್ನು ಕೇಳಿ ಪರಶುರಾಮಪ್ಪನಿಗೆ ಆಶ್ಚರ್ಯವಾಯಿತು. ತಾನು ಅವರಿಗೆ ಯಾವುದನ್ನೂ ಹೇಳಿಲ್ಲ. ಅವರು ಅವನನ್ನು ಏನೂ ಕೇಳಿಲ್ಲ. ಆದರೂ ಆದ ಸಹಾಯ ಮಾಡುತ್ತೇವೆ ಎಂದುದನ್ನು ಕೇಳಿ ಚಕಿತನಾದ. ಮರುಗಳಿಗೆಯೇ ಅವರು ಆಡಿದ ಆ ಒಂದು ಮಾತನ್ನೇ ನಂಬಿ ಅವರಿಗೆ ತಾನು ಬಂದ ಕಾರ್ಯಭಾರದ ವಿಷಯ ಹೇಳುವುದು ಸೂಕ್ತವಾದೀತೇ ಎಂದು ಚಿಂತಿಸಿ, ಕಡೆಗೆ ದೇವರ ಮೇಲೆ ಭಾರ ಹಾಕಿ, ಹೇಳಿದ:

"ತಾವು ನಮ್ಮ ಮೇಲೆ ಅನುಗ್ರಹಮಾಡಿದರೆ, ನಾನು ಬಂದ ಕೆಲಸ ಬಹಳ ಸುಲಭವಾಗುತ್ತದೆ."

"ಅದೇನು ಹೇಳಿ?"

"ನಾಗತಿಯವರಿಗೆ ತಮ್ಮ ಮಾತೆಂದರೆ ದೈವಾಜ್ಞೆಯಂತೆ. ಅವರು ನಮ್ಮ ಬೇಡಿಕೆ ನಡೆಸಿಕೊಡುವಂತೆ, ಅವರಿಗೆ ನಮ್ಮ ಪರವಾಗಿ ಒಂದು ಮಾತು ಅಪ್ಪಣೆಯಾಗಬೇಕು."

"ನಿಮ್ಮ ಮಾತು ಏನೆಂದು ತಿಳಿಯದೆಯೇ ಅವರಿಗೆ ನಿಮ್ಮ ಮಾತು ನಡೆಸಿಕೊಡಿ ಎಂದು ಹೇಳೋಣವೇ?"

"ಛೆ! ಎಲ್ಲಿಯಾದರೂ ಉಂಟೆ? ತಮ್ಮಲ್ಲಿ ನಂಬುಗೆಯಿಟ್ಟು ಎಲ್ಲ ವಿಷಯವನ್ನು ಬಿನ್ನವಿಸಿಕೊಳ್ಳುತ್ತೇನೆ. ತಮಗೆ ನಾನು ಹೇಳುವುದು ಸರಿ ಎಂದು ತೋಚಿದರೆ, ಆಮೇಲೆ ನಮ್ಮನ್ನು ಆಶೀರ್ವದಿಸಿ."

"ಹಾಗಾದರೆ ಆಗಬಹುದು."

—ಎಂದು ಹೇಳಿ ಸ್ವಾಮಿಗಳು, ಮರುಮಾತಾಡದೆ ಪರಶುರಾಮಪ್ಪ ಹೇಳುವುದನ್ನು ಕೇಳಲು ಸಿದ್ಧರಾಗಿ, ಕಣ್ಣು ಮುಚ್ಚಿ, ಬೆನ್ನ ಬದಿಯಲ್ಲಿದ್ದ ಬೆಳ್ಳಿಯ ಹೂವುಗಳಿಂದ ಅಲಂಕಾರ ಮಾಡಿದ್ದ ಮರದ ಪೀಠಕ್ಕೆ ಒರಗಿ ಕುಳಿತರು.

ಪರಶುರಾಮಪ್ಪ ಅವರಿಗೆ ಕಸ್ತೂರಿರಂಗಪ್ಪನಾಯಕನ ಮರಣದ ದಿನದಿಂದ ಆರಂಭವಾದ ದುರ್ಗದ ಸಿಂಹಾಸನಾಧಿಕಾರದ ಸಮಸ್ಯೆ, ಅದರ ದುರಂತಪರಿಣಾಮವನ್ನು ಸವಿವರವಾಗಿ ಹೇಳಿ—

"ಈಗ ನಾಗತಿಯವರೇ ಈಪಟ್ಟದ ಪ್ರಶ್ನೆಯನ್ನೆತ್ತಿದೆ, ಮುದ್ದಣ್ಣ ಈ ಬಗ್ಗೆ ಬಾಯಿಬಿಡುವುದಿಲ್ಲ. ಅವನು ಒಪ್ಪದೆ ನಾವೇನು ಮಾಡಿದರೂ ಅದರ ಪರಿಣಾಮ ದುರಂತವೇ ಆಗಬಹುದು. ಅದಕ್ಕಾಗಿಯೇ ನಾಗತಿಯವರನ್ನು ನೋಡೋಣವೆಂದು ಅರಮನೆಗೆ ಹೋದೆ. ಅವರು ಪೂಜೆಗೆ ಇಲ್ಲಿ ಬಂದಿದಾರೆ ಎಂದು ತಿಳಿಯಿತು. ಇಲ್ಲಿ ಬಂದು ಅವರಿಗೆ ತೊಂದರೆ ಕೊಡುವುದು ಅನೌಚಿತ್ಯವಾದರೂ, ಈ ಮಾತನಾಡಲು ಅರಮನೆಗಿಂತಲೂ ಇದೇ ಉತ್ತಮ ಸ್ಥಳವೆಂದು ಇಲ್ಲಿಗೆ ಬಂದೆ."

—ಎಂದ ಆತನ ಮಾತೆಲ್ಲವನ್ನು ಕೇಳಿ, ಭಾರವಾದ ನಿಟ್ಟುಸಿರಿಟ್ಟು ಹೇಳಿದರು ಸ್ವಾಮಿಗಳು:

"ಒಳಿತೇ ಆಯಿತು. ದುರ್ಗದ ರಾಜಕಾರಣ ನಮಗೆ ತಿಳಿದಿರಲಿಲ್ಲ. ಎಲ್ಲವೂ ಹಿತವಾಗಿಲ್ಲ ಎಂದಷ್ಟು ತಿಳಿದಿತ್ತೇ ವಿನಾ, ಅದು ಇಷ್ಟು ಭಯಂಕರವಾದ ತೊಡಕಾಗಿದೆ ಎಂದು ಗೊತ್ತಿರಲಿಲ್ಲ. ಸರಿಯೇ, ಶಿವಾನುಗ್ರಹದಿಂದ ಎಲ್ಲವೂ, ಎಲ್ಲರಿಗೂ ಹಿತವಾಗಿ ಬಗೆಹರಿಯಲಿ ಎಂದಷ್ಟೇ ನಮ್ಮ ಬಯಕೆ. ನೀವು ಹೇಳುವುದನ್ನು ನಾಗತಿಯರಿಗೆ ಹೇಳಿ. ಬಳಿಕ ಅಗತ್ಯವಾದರೆ ನಾವು ಹೇಳಬಹುದಾದುದನ್ನು ನಾವೂ ಹೇಳುತ್ತೇವೆ."

"ಅಷ್ಟಾದರೆ ನಾನು ಧನ್ಯನಾದೆ.'

ಪರಶುರಾಮಪ್ಪ ಈ ಮಾತು ಹೇಳುವ ವೇಳೆಗೆ ಶಿವಾಲಯದಲ್ಲಿ ಮಂಗಳಾರತಿಯ ಹೊತ್ತು ಸಮೀಪಿಸಿತೆಂದು, ಘಂಟಾನಾದ ಕೂಗಿ ಹೇಳಿತು. ಸ್ವಾಮಿಗಳು ಆ ಸದ್ದು ಕೇಳಿದ ಕೂಡಲೇ ಮೇಲೆದ್ದು "ನೀವೂ ಬನ್ನಿ" ಎಂದು ಪರಶುರಾಮಪ್ಪನನ್ನು ಕರೆದುಕೊಂಡು, ದೇವಾಲಯದತ್ತ ಸಾರಿದರು.

ಮಂಗಳಾರತಿ ಮುಗಿದ ಬಳಿಕ ಮಲ್ಲವ್ವನಾಗತಿ ಪ್ರಸಾದಕ್ಕೆಂದು ಸ್ವಾಮಿಗಳ ಬಳಿಸಾರಿದಾಗ, ಅವರೇ ಆಕೆಗೆ ಹೇಳಿದರು—

"ನಿಮ್ಮನ್ನು ನೋಡಬೇಕೆಂದು ಪರಶುರಾಮಪ್ಪನವರು ಬಂದಿದಾರೆ. ಏನೋ ಅವಸರದ ಮಾತನಾಡುವುದಿತ್ತಂತೆ."

"ಅವಸರದ ಮಾತೇ? ನಮ್ಮ ಬಳಿ?....ಅದೂ ಇಲ್ಲಿ?"

ಸ್ವಾಮಿಗಳು ಹೇಳಿದುದನ್ನು ಕೇಳಿ ಮಲ್ಲವ್ವನಾಗತಿಗೆ ಆಶ್ಚರ್ಯವಾದಂತೆಯೇ, ಏನೋ ಅಸಮಾಧಾನವಾದುದೂ ಆಕೆಯ ಧ್ವನಿಯಲ್ಲಿ ವ್ಯಕ್ತವಾಗಿತ್ತು.

"ಅದಕ್ಕೇನು—ಅರಮನೆಯ ಮಾತು ಗುರುಮನೆಯಲ್ಲಿ ನಡೆಯಬಾರದೇ?"

"ನಡೆದರೆ ತಪ್ಪೇನೂ ಇಲ್ಲ ಬುದ್ಧಿ. ಆದರೆ ಸ್ನಾನದ ಮನೆಯಲ್ಲೂ ಮೈ ಕೊಳೆಯಾಗಬೇಕೇ? ನಮ್ಮ ಮನೆಯಲ್ಲೇ ಕಂಡಿದ್ದರೂ ಆಗಬಹುದಿತ್ತು."

ವಿನಯದ ಧ್ವನಿಯಲ್ಲಿ ನಾಗತಿ ಆ ಮಾತನ್ನು ಹೇಳಿದರೂ, ಅದರ ಅಂತರಾಳದಲ್ಲಿ ಬೇರಾವುದೋ ಭಾವನೆ ಹೊಯ್ದಾಡುತ್ತಿದ್ದುದನ್ನು ಗಮನಿಸಿ ಸ್ವಾಮಿಗಳು ಹೇಳಿದರು :

"ನೀವು ಮನೆಯಲ್ಲಿರಲಿಲ್ಲವೆಂದು, ಇಲ್ಲಿಯೇ ಕಾಣಲು ಬಂದರು. ಕಾಣಬಹುದೇ ಎಂದು ನಮ್ಮನ್ನು ಕೇಳಿದರು. ಬೇಡವೆನ್ನಲು ನಮಗೇನೂ ಕಾರಣ ಕಾಣಲಿಲ್ಲ. ಆಗಬಹುದು ಎಂದೆವು. ನಿಮಗೆ ಅದೆಲ್ಲಾ ಇಲ್ಲೇಕೆ, ಬೇಡ ಎನಿಸಿದರೆ ಹಾಗೇ ಮಾಡಿ."

"ಛೆ, ಹಾಗುಂಟೇ! ತಾವು ಒಪ್ಪಿದ ಬಳಿಕ ಆಯಿತು."

—ಎಂದು ಅಷ್ಟಕ್ಕೇ ಮಾತು ಮುಗಿಸಿದಳು ನಾಗತಿ. ಅಂದಿನ ಆಕೆಯ ಮಾತಿನ ರೀತಿಯನ್ನು ಕಂಡು, ಬಹುದಿನಗಳಿಂದ ಆಕೆಯ ಪರಿಚಯ ಪಡೆದಿದ್ದ ಸ್ವಾಮಿಗಳಿಗೂ ಆಶ್ಚರ್ಯವಾಯಿತು. ಸ್ವಾಮಿಗಳ ಎದುರಿನಲ್ಲಿ ಆಕೆ ಎಂದೂ ಈ ಧ್ವನಿಯಲ್ಲಿ ಮಾತನಾಡಿರಲಿಲ್ಲ. ಆದರೆ ಸದ್ಯಕ್ಕೆ ಅದನ್ನು ಕೆದಕಿ ಕೇಳುವುದು ಸೂಕ್ತವಲ್ಲೆಂದು ಭಾವಿಸಿ, ಆ ಮಾತನ್ನು ಅಲ್ಲಿಗೇ ಬಿಟ್ಟು ಬಳಿಯಲ್ಲಿದ್ದ ವಟುವಿಗೆ 'ಪರಶುರಾಮಪ್ಪನವರನ್ನು ಕರೆದುಕೊಂಡು ಬಾ' ಎಂದು ಹೇಳಿ, ಬೇಗಬೇಗ, ಪೂಜೆಗೆ ಬಂದಿದ್ದ ಇತರರಿಗೆ ಪ್ರಸಾದ ಕೊಟ್ಟು ಕಳಿಸಿಕೊಟ್ಟರು; ತಾವು ಹೇಳುವವರೆಗೂ ಬೇರೆ ಯಾರನ್ನೂ ಅಲ್ಲಿಗೆ ಬಿಡಬಾರದೆಂದು ಅಪ್ಪಣೆ ಮಾಡಿ, ಬಳಿ ಸಾರಿದ ಪರಶುರಾಮಪ್ಪನಿಗೂ ವಿಭೂತಿ ಬಿಲ್ವಪತ್ರೆಯ ಪ್ರಸಾದವನ್ನಿತ್ತು—

"ನೀವು ಬಂದ ವಿಷಯವನ್ನು ನಾಗತಿಯವರಿಗೆ ಹೇಳಿದ್ದೇವೆ. ಮಾತನಾಡಿ"—ಎಂದರು.

ಪರಶುರಾಮಪ್ಪ ತಾನು ಬಂದ ವಿಷಯದಲ್ಲಿ ಮಾತನ್ನು ಆರಂಭಿಸಲು, ಅಷ್ಟುದೂರದಲ್ಲಿದ್ದ ಬೇರೆಯ ಪೀಠದ ಮೇಲೆ ಮಂಡಿಸಿದ್ದ ನಾಗತಿಯತ್ತ ನೋಡಿದ. ಆದರೆ ನಾಗತಿ ಅವನತ್ತ ನೋಡದೆ ಬೇರೆತ್ತಲೋ ನೋಡುತ್ತಿದ್ದಳು. ಅದನ್ನು ಕಂಡು ಪರಶುರಾಮಪ್ಪನಿಗೆ ತನ್ನ ಮಾತನ್ನಾರಂಭಿಸಲು ನಾಲಗೆಯನ್ನು ತಡೆದಂತಾಯಿತು. ಸ್ವಾಮಿಗಳತ್ತ ನೋಡಿ ಸುಮ್ಮನೆ ಕುಳಿತ.

"ಏಕೆ? ಸುಮ್ಮನೆ ಕುಳಿತಿರಲ್ಲಾ, ಹೇಳಬೇಕೆಂದು ಬಂದುದನ್ನು ಹೇಳಿ."

—ಎಂದು ಸ್ವಾಮಿಗಳೇ ನಿಂತ ಮಾತಿಗೆ ಚಾಲನೆ ಕೊಟ್ಟರು.

"ತಾಯಿಯವರಲ್ಲಿ ಒಂದು ಮಾತನ್ನು ಬಿನ್ನವಿಸಬೇಕೆಂದು ಬಂದೆ. ಚಿತ್ತಕ್ಕೆ ತೊಂದರೆಯಾಗದಿದ್ದರೆ—"

—ಎಂದು ಪರಶುರಾಮಪ್ಪ ಮಾತು ಆರಂಭಿಸಿದ.

ಪರಶುರಾಮಪ್ಪನ ಮಾತು ಕೇಳಿ ನಾಗತಿ ಆ ಮಾತಿನಲ್ಲಿ ಆಸಕ್ತಿಯನ್ನಾಗಲಿ ಅಭಿಮಾನವನ್ನಾಗಲಿ ತೋರ್ಪಡಿಸದೆ ಮುಖವನ್ನು ಮತ್ತಷ್ಟು ಬಿಗಿದುಕೊಂಡು ಹೇಳಿದಳು.—

"ನಮ್ಮನ್ನು ನೀವು ಹುಡುಕಿಕೊಂಡು ಬರಬೇಕಾಗಿತ್ತೇ? ಇಂಥ ಕೆಲಸ ನಿಮ್ಮಿಂದ ಆಗಬೇಕಾಗಿತ್ತು ಎಂದು ಹೇಳಿಕಳುಹಿಸಿದ್ದರೂ ನಮಗೆ ಸಾಕಾಗಿತ್ತು. ಅಲ್ಲವೇ? ಏನೋ—ಇಷ್ಟು ದಿನಕ್ಕಾದರೂ ನಮ್ಮ ನೆನಪು ಬಂದು, ನೋಡಬೇಕೆಂದು ಬಂದಿರಲ್ಲ. ಬಹಳ ಉಪಕಾರವಾಯಿತು."

ಆ ಮಾತುಗಳಲ್ಲಿ ತಾನೇತಾನಾಗಿ ವಿಜೃಂಭಿಸುತ್ತಿದ್ದ ಅಸಮಾಧಾನದ ಝಳ ಸೋಂಕಿ, ಪರಶುರಾಮಪ್ಪನ ಉತ್ಸಾಹ ಅರ್ಧ ಉಡುಗಿ ಹೋಯಿತು. ಯಾವ ಕಾರಣವೂ ಇಲ್ಲದೆ ತನ್ನಲ್ಲಿ ಇಷ್ಟು ಅಸಮಾಧಾನ ತೋರುತ್ತಿರುವ ಈಕೆಯಲ್ಲಿ ಮಾತನಾಡುವುದೇ ಬೇಡವೆಂದೂ ಒಂದು ಮನಸ್ಸು ಹೇಳಿತು. ಆದರೂ ತಾನು ಬಂದಿದ್ದ ಕಾರ್ಯದ ಮಹತ್ವವನ್ನು ನೆನಪು ಮಾಡಿಕೊಂಡು, ವಿನೀತನಾಗಿಯೇ ಹೇಳಿದ:

"ನನ್ನಿಂದ ಏನಾದರೂ ಅಪಚಾರವಾಗಿದ್ದರೆ ಕ್ಷಮಿಸಬೇಕು. ನಾನು ಕಾಯಾ ವಾಚಾ ಮನಸಾ ಎಂದೂ ತಮಗೆ ಅಸಮಾಧಾನವಾಗುವಂತೆ ನಡೆದುಕೊಂಡಿಲ್ಲ. ನನ್ನ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಂಡು, ಬಂದ ಕಾರ್ಯ ನಡಿಸಿಕೊಡಬೇಕು."

"ಆಯಿತು. ಅದೇನು ಹೇಳಿ."

"ತಾಯೀ—ಇಂದು ಸಿಂಹಾಸನಕ್ಕೆ ಪ್ರಾಪ್ತವಾಗಿರುವ ಸಂದಿಗ್ಧ ತಮಗೆ ತಿಳಿದಿದೆಯೆಂದೇ, ನಾನು ನಂಬಿಕೊಂಡಿದೇನೆ."

"ನಮಗೆ ಆ ರಾಜಕಾರಣವಾವುದೂ ತಿಳಿಯದು."

ಆ ಮಾತನ್ನು ಅಲ್ಲಿಗೇ ಕತ್ತರಿಸುವ ರೀತಿಯಲ್ಲಿ ಹೇಳಿದಳು ನಾಗತಿ.

"ಹಾಗೂ ಇರಬಹುದು ತಾಯಿ. ಒಂದುವೇಳೆ ತಮಗದು ಗೊತ್ತಿರದಿದ್ದರೆ, ನನಗೆ ತಿಳಿದಷ್ಟನ್ನು ಬಿನ್ನವಿಸಿಕೊಳ್ಳಲು ಸಿದ್ಧನಾಗಿದ್ದೇನೆ."

—ಯಾವ ಏರು ಇಳುವಿನ ವಿಕಾರವೂ ಇಲ್ಲದ ಧ್ವನಿಯಲ್ಲಿ ಹೇಳಿದ ಪರಶುರಾಮಪ್ಪ.

"ಆದರೆ ಅದನ್ನು ಕೇಳಿತಾನೇ ನಮಗೆ ಆಗಬೇಕಾದುದೇನು? ವೃಥಾ ನಿಮಗೆ ಹೇಳುವ ಶ್ರಮ. ನಮಗೆ ಯಾರ ಸಮಾಚಾರವೂ ತಿಳಿಯದು. ಯಾವುದು ತಿಳಿದೂ ಆಗಬೇಕಾದುದೇನೂ ಇಲ್ಲ. ಶಿವ ಎಷ್ಟು ದಿನ ಈ ಲೋಕದಲ್ಲಿರಬೇಕೆಂದು ಕಟ್ಟುಮಾಡಿರುವನೋ, ಅಷ್ಟು ದಿನ

ಇದ್ದು, ಇದ್ದಷ್ಟು ದಿನ ಶಿವಪೂಜೆ ಮಾಡಿ, ಕರೆಬಂದ ದಿನ ಹೋಗುವು ದೊಂದೇ ಇಂದು ನಮಗೆ ತಿಳಿದಿರುವುದು. ನಮಗೆ ಬೇಕಾಗಿರುವುದೂ ಅಷ್ಟೇ. ಅಷ್ಟಕ್ಕಿಂತ ಹೆಚ್ಚಿನದರಿಂದ ನಮಗೇನೂ ಕಾರ್ಯವಿಲ್ಲ."

ನಾಗತಿಯಾಡಿದ ಆ ಮಾತು, ಆ ಮಾತಿನ ಧೋರಣೆ ಪರಶು ರಾಮಪ್ಪನ ಸಹನೆಯನ್ನು ಒರಗೆ ಹಚ್ಚುತ್ತಿತ್ತು. ಆದರೂ ಅದು ಪೂರಾ ಸೋಲಲು ಬಿಡದೆ, ಸಡಿಲವಾಗುತ್ತಿದ್ದ ಸಹನೆಯನ್ನು ಬಿಗಿಮಾಡಿ ಕೊಳ್ಳುತ್ತಾ ಹೇಳಿದ—

"ತಾಯಿಯವರಿಗೇನೋ ಮಕ್ಕಳ ಮೇಲೆ ಮುನಿಸು ಬಂದಂತಿದೆ. ಅದು ನಮ್ಮ ದೌರ್ಭಾಗ್ಯ. ತಾಯಿ, ಮಕ್ಕಳನ್ನು ಬೇಡವೆಂದು ದೂರ ತಳ್ಳಬಹುದು. ಆದರೆ ಆ ಮಮತೆಯ ಆಶ್ರಯ ತಪ್ಪಿ ನಾವು ಬದುಕು ವುದು ಸಾಧ್ಯವಿದೆಯೇ? ನೀವಿಂದು ಮುನಿದರೆ, ನನ್ನಂಥ ಹುಲ್ಲು ಕಡ್ಡಿ ಇರಲಿ, ದುರ್ಗವೇ ದಹಿಸಿ ರುದ್ರಭೂಮಿಯಾಗುತ್ತದೆ. ಆದ್ದರಿಂದ ನಾನು ಬೇಡುವುದಿಷ್ಟೇ-ಈ ಸಿಟ್ಟಿನ ಬ್ರಹ್ಮಾಸ್ತ್ರ ನಮ್ಮಮೇಲೆ ಬಿಡಬೇಡಿ. ಮಮತೆ ತೋರಿ, ಮುಳುಗುತ್ತಿರುವ ದುರ್ಗದ ರಾಜ್ಯನೌಕೆಯನ್ನು ಉಳಿಸಿಕೊಳ್ಳಿ."

"ನಿಮ್ಮ ರಾಜ್ಯನೌಕೆ ಮುಳುಗುವುದೋ ತೇಲುವುದೋ ನಮ ಗೇನು ಗೊತ್ತು? ಅಲ್ಲದೆ ಅದು ಉಳಿದು ನಮಗಾಗುವ ಲಾಭವೂ ಇಲ್ಲ; ಮುಳುಗಿ ಆಗುವ ನಷ್ಟವೂ ಇಲ್ಲ. ಅದರಿಂದ ಯಾರಿಗೆ ಲಾಭ ನಷ್ಟವೋ ಅವರು ಅದಕ್ಕೆ ಹೊಡೆದಾಡಲಿ. ಅದಾವದೂ ಇಲ್ಲದ ನಮ್ಮ ಕೊರಳಿ ಗೇಕೆ ಈ ಪೀಡೆಯನ್ನು ಸುತ್ತುತ್ತೀರಿ? ನಾಯಕರು ಅರಮನೆಯಿಂದ ನಮ್ಮನ್ನು ಹೊರಗಿಟ್ಟಾಗಲೇ, ನಮಗೂ ಅದಕ್ಕೂ ಇದ್ದ ಸಂಬಂಧ ಉರಿದುಹೋಯಿತು. ಭೋಗಪಡುವ ಕಾಲಕ್ಕೆ ನಮಗಿಲ್ಲವಾದ ಅದನ್ನು ಈಗ ಕಷ್ಟಪಟ್ಟು ನರಳುವುದಕ್ಕಾಗಿ ಕತ್ತಿಗೆ ಕಟ್ಟಿಕೊಳ್ಳಲೇ? ಕಾಲಿನ ಗೆಜ್ಜೆಯನ್ನು ಕುಣಿಯುವವರು ಕಟ್ಟಿಕೊಳ್ಳಲಿ. ನಮಗದು ಬೇಡ."

"ತಾವು ಹಾಗೆ ಹೇಳಿದರೆ ಆಗದು ತಾಯಿ. ಆಪತ್ತಿನ ಹೊತ್ತಿನಲ್ಲಿ ತಮಗಾದ ನೋವನ್ನು ನುಂಗಿ ಮಕ್ಕಳನ್ನು ಕಾಪಾಡಬೇಕು. ಒಮ್ಮೆ ಓಬವ್ವ ನಾಗತಿಯರು ದುರ್ಗವನ್ನು ಕಾಪಾಡಲೆಂದು ತಮ್ಮ ಜೀವವನ್ನೇ ಕೊಟ್ಟರು........"

"ನಮಗೂ ಅದೇ ಮಾತು ತಾನೇ ನೀವು ಹೇಳುವುದು. ಹಾಯಾಗಿ ಇರುವುದೇಕೆ, ಹೊಂಡದಲ್ಲಿ ಬಿದ್ದೋ, ಕತ್ತಿಗೆ ಕತ್ತುಕೊಟ್ಟೋ ಸಾಯಿರಿ ಎಂದು—ಇಷ್ಟೇ ಅಲ್ಲವೇ ನೀವು ನಮಗೆ ಮಾಡಬಂದಿರುವ ಉಪಕಾರ! ಒಂದೇ ಸಲ ಹೇಳಿಬಿಡುತ್ತೇನೆ ಕೇಳಿ. ನನಗೆ ರಾಜ್ಯವೂ ಬೇಡ, ರಾಜ ಕಾರಣವೂ ಬೇಡ. ಶಿವನನ್ನು ನಂಬಿ ಅರಮನೆಗೆ ಹೊರಗಾದೆ. ಅವನ ಪೂಜೆ ಮಾಡುತ್ತಾ ಹಾಯಾಗಿ ಪ್ರಾಣಬಿಡುತ್ತೇನೆ. ನಿಮ್ಮ ರಾಜ್ಯ ರಾಜಕಾರಣ ನಿಮಗೇ ಇರಲಿ."

—ಕರ್ಕಶವಾದ ಸ್ವರದಲ್ಲಿ ತಾಳ್ಮೆಗೆಟ್ಟು ಹೇಳಿದಳು ಮಲ್ಲಮ್ಮ ನಾಗತಿ.

"ತಾವು ಹಾಗೆ ಹೇಳಬಾರದು ತಾಯಿ. ತಮಗೆ ಇಂದಿನ ಪರಿ ಸ್ಥಿತಿಯ ವಿಷಮತೆ ಅರಿವಾದಂತಿಲ್ಲ. ಅದಕ್ಕಾಗಿ ಹೀಗೆ ಹೇಳುತ್ತಿರುವಿರಿ. ದಯವಿಟ್ಟು....ದಯವಿಟ್ಟು....ನಾನು ಹೇಳುವಷ್ಟು ಮಾತುಗಳನ್ನಾದರೂ ತಾಳ್ಮೆಯಿಂದ ಕೇಳುವ ಉಪಕಾರ ಮಾಡಬೇಕು. ಬಳಿಕ ತಮ್ಮ ಚಿತ್ತಕ್ಕೆ ತೋರಿದಂತೆ ಮಾಡಬಹುದು."

—ಮುಳುಗುವವನು ಹುಲ್ಲುಕಡ್ಡಿಗೇ ಜೋತುಬೀಳುವ ರೀತಿಯಲ್ಲಿ ಹೇಳಿದ ಪರಶುರಾಮಪ್ಪ.

"ನನಗದು ಅಗತ್ಯವಿಲ್ಲ ಎಂದ ಮೇಲೆ ಕೇಳಿ ಕಿವಿ ಕಿಸಿರು ಮಾಡಿ ಕೊಳ್ಳುವುದೇಕೆ? ನಾಯಕರು ಮಕ್ಕಳಿಲ್ಲದೆ ಸತ್ತು, ಅವರು ಕೈಹಿಡಿದವ ರಲ್ಲಿ ಉಳಿದಿರುವವಳು ನಾನೊಬ್ಬಳು. ನಾನು ನಿಮ್ಮ ರಾಜಕಾರಣ ಯಾವು ದಕ್ಕಾದರೂ ಅಡ್ಡಿಬರಬಹುದೆಂಬ ಭೀತಿ ಇದೆಯೇನೋ ನಿಮಗೆ. ಆದರೆ ಶಿವನಾಣೆ, ಗುರುವಿನ ಪಾದದಾಣೆ ಹೇಳುತ್ತೇನೆ....ನನಗೆ ಯಾವ ಬಯ ಕೆಯೂ ಇಲ್ಲ; ನಾನು ಯಾವುದಕ್ಕೂ ಅಡ್ಡಿಬರುವುದಿಲ್ಲ; ನಿಮಗೆ ಹೇಗೆ ಬೇಕೋ ಹಾಗೆ ಮಾಡಿಕೊಳ್ಳಿ. ಈ ಜಗತ್ತಿನ ತಾಪತ್ರಯದಿಂದ ದೂರ ವಾಗಬೇಕೆಂದು ಶಿವಾಲಯಕ್ಕೆ ಬಂದರೆ, ಅಲ್ಲಿಗೂ ಬಂದು, ಪಾಪಿ ಸಮುದ್ರ ಹೊಕ್ಕರೂ ಮೊಳಕಾಲುದ್ದ ನೀರು ಎನ್ನುವಂತೆ ಮಾಡಬೇಡಿ."

"ನಾನು ಬಂದ ಕಾರ್ಯ ಆ ಬಗೆಯದಲ್ಲ. ನಾವಾರೂ ಮಾಡು ವಂತಹದಲ್ಲ. ತಮ್ಮಿಂದಲೇ ಆಗಬೇಕಾದುದು. ನನ್ನ ಮಾತಿನಲ್ಲಿ ತಮಗೆ ನಂಬಿಕೆ ಇಲ್ಲದೆ ಹೋದರೆ, ಗುರುಗಳನ್ನಾದರೂ ಕೇಳಿ ನೋಡಿ."

"ಗುರುಗಳು ಹೇಳಿದರೆಂದೇ ಇಷ್ಟು ಹೊತ್ತು ನಾನು ಈ ಎಲ್ಲ ಮಾತುಗಳನ್ನು ಕೇಳಿದ್ದು. ಸಿಟ್ಟು, ಅಸಮಾಧಾನ ನಮಗಿಲ್ಲ. ಆ ಕಾಲ ಮುಗಿದುಹೋಯಿತು. ಈಗ ನಾವು ಮುನಿದರೆ ಬೀದಿಯ ನಾಯಿಯೂ ಬೆದರುವುದಿಲ್ಲ. ಆದುದರಿಂದ ಆ ಮೋಹಗಳನ್ನೆಲ್ಲಾ ನಾವು ಎಂದೋ ಬಿಟ್ಟುಬಿಟ್ಟದ್ದೇವೆ. ನಮ್ಮಲ್ಲಿ ನಿಮಗೆ ವಿಶ್ವಾಸವಿದ್ದರೆ, ಯಾವ ಚಿಂತೆಯೂ ಇಲ್ಲದೆ ದೇವಪೂಜೆ ಮಾಡಿಕೊಂಡಿರಲು ಬಿಡಿ. ಈ ಬೇಡದ ಕಗ್ಗವನ್ನೆಲ್ಲಾ ತಂದು ನಮ್ಮ ಕತ್ತಿಗೆ ಬಿಗಿಯಬೇಡಿ. ಗುರುಗಳೇ, ಈ ದಿನ ತಮ್ಮ ಪ್ರವಚನವನ್ನು ಕೇಳುವಷ್ಟು ಶಾಂತಿಯೂ ನಮ್ಮ ಮನಸ್ಸಿಗೆ ಉಳಿದಿಲ್ಲ. ಈ ನಿರ್ಭಾಗ್ಯಳನ್ನು ಮನ್ನಿಸಬೇಕು."

—ಎಂದವಳೇ ನಾಗತಿ, ಗುರುಗಳ ಪಾದಕ್ಕೆರಗಿ, ಆ ಧೂಳಿಯನ್ನು ಕಣ್ಣಿಗೊತ್ತಿಕೊಂಡು ಎದ್ದು ವೇಗವಾಗಿ ಹೆಜ್ಜೆಹಾಕುತ್ತಾ ಹೊರಟು ಹೋದಳು.

೫

ಅದನ್ನು ಕಂಡು ಪರಶುರಾಮಪ್ಪ ಗರಬಡಿದಂತೆ ಸುಮ್ಮನೆ ಕುಳಿತು, ಛಾವಣಿಯನ್ನು ನೋಡಿದ. ಗುರುಗಳೂ ಯಾವ ಮಾತನ್ನೂ ಆಡಲಿಲ್ಲ. ಅವರೂ ಸುಮ್ಮನೆ ಕುಳಿತಿದ್ದರು. ಸ್ವಲ್ಪ ಹೊತ್ತಿನಲ್ಲಿಯೇ ನಾಗತಿಯ ಮೇನಾವನ್ನು ಹೊತ್ತ ಬೆಸ್ತರ 'ಹೋ' 'ಧೋ' ಎಂಬ ದನಿ ಕೇಳಿ ಬಂದು ನಾಗತಿ ಮಠದಿಂದ ಹೊರಟುಹೋದಳೆಂಬುದನ್ನು ಹೇಳಿತು. ಆ ಬಳಿಕ ಅಷ್ಟು ಹೊತ್ತು ಸುಮ್ಮನಿದ್ದ ಗುರುಗಳು ನಗುತ್ತಾ ಹೇಳಿದರು :

"ಒತ್ತೆಗೆ ಹಾಕಿದ ಕಸುಗಾಯಿ ಹಣ್ಣಾದರೂ ಹುಳಿಯೇ !"

"ಯಾರೇನು ಮಾಡಿಯಾರು, ನಮ್ಮ ದೌರ್ಭಾಗ್ಯ. ದುರ್ಗದ ಹಣೆಯಲ್ಲಿ ಏನೇನು ಘೋರವನ್ನು ಅನುಭವಿಸಬೇಕೆಂದು ವಿಧಿಲಿಖಿತ ವಿದೆಯೋ ಹಾಗಾಗಲಿ. ಅದನ್ನು ತಪ್ಪಿಸಲು ನಾನು ಯಾರು ? ನನ್ನಿಂದ ತಮಗೆ ವೃಥಾ ತೊಂದರೆಯಾಯಿತು. ಹಾಗೆಂದು ಚಿತ್ತಕ್ಕೆ ಆಯಾಸ ಮಾಡಿಕೊಳ್ಳಬಾರದು."

—ನುಂಗುತ್ತಿರುವ ಘೋರ ನಿರಾಶೆಯ ಆಳದೊಳಗೆ ಮುಳುಗಿ ಹೋಗುತ್ತಾ ಹೇಳಿದ ಪರಶುರಾಮಪ್ಪ.

"ಅಷ್ಟು ನಿರಾಶರಾಗಬೇಡಿ ಪರಶುರಾಮಪ್ಪ. ಶಿವಕೃಪೆಯ ಸೂರ್ಯರಶ್ಮಿಯಿಂದ ಕರಗದ ದುಃಖದ ಕಾರ್ಮೋಡವೊಂದೂ ಇಲ್ಲ."

—ನಿರಾಶನಾಗಿದ್ದ ಪರಶುರಾಮಪ್ಪನ ಹೃದಯದಲ್ಲಿ ಆಸೆಯ ಬೆಳಕನ್ನು ಚೆಲ್ಲುತ್ತಾ ಹೇಳಿದರು ಗುರುಗಳು.

"ನನ್ನ ವಿಷಯವೇ ಆಗಿದ್ದರೆ ನಾನು ಇಷ್ಟು ಹೆಚ್ಚಿಕೊಳ್ಳುತ್ತಲೂ ಇರಲಿಲ್ಲ, ನಿರಾಶನೂ ಆಗುತ್ತಿರಲಿಲ್ಲ. ಆದದ್ದಾಗಲಿ ಎಂದು ದೇವರ ಮೇಲೆ ಭಾರ ಹಾಕಿ ನಿಶ್ಚಿಂತನಾಗಿರುತ್ತಿದ್ದೆ. ಆದರೆ ದುರ್ಗದ ವಿಷಯವೆಂದರೆ...."

"ಎಷ್ಟು ಬೇಗ ಎಡಹುತ್ತೀರಿ ಪರಶುರಾಮಪ್ಪ. ನಿಮ್ಮ ಹೊರೆಯನ್ನು ಹೊರಬಲ್ಲ ಪರಮೇಶ್ವರನಿಗೆ, ನಿಮ್ಮೊಂದಿಗೆ ಈ ದುರ್ಗದ ಹೊರೆಯನ್ನು ಹೊರುವ ಶಕ್ತಿಯೂ ಇಲ್ಲವೇ? ನಮ್ಮ ಶಕ್ತಿಯ ಪ್ರಮಾಣ, ನಮ್ಮ ನೋಟದ ಪರಿಮಿತಿಯನ್ನು ಲೆಕ್ಕದಲ್ಲಿಟ್ಟುಕೊಂಡು, ನಾವು, ಕರಟದಿಂದ ಕಡಲ ನೀರನ್ನು ಅಳೆಯಲು ಹೊರಟವನ ಹಾಗೆ, ಭಗವಂತನ ಶಕ್ತಿಯನ್ನು ಅಳೆಯಲು ಹೊರಡುತ್ತೇವೆ. ತಪ್ಪಲ್ಲವೇ ಇದು? ನೋಡಿ ನಾನೊಂದು ಮಾತು ಕೇಳಿದ್ದೇನೆ. ಈ ಖಂಡದಲ್ಲಿ ಕತ್ತಲಾವರಿಸಿದಾಗ ಇನ್ನೊಂದು ಖಂಡದಲ್ಲಿ ಬೆಳಕು ಬೆಳಗುತ್ತಿರುತ್ತದೆಯಂತೆ. ಹಾಗೇ ಅಲ್ಲಿ ಕತ್ತಲು ಕವಿದಾಗ, ಇಲ್ಲಿ ಬೆಳಕು. ಈ ಮಾತು ಬರೀ ಭೌತಿಕ ಸತ್ಯವಷ್ಟೇ ಅಲ್ಲ, ಎಲ್ಲ ವಿಷಯಕ್ಕೂ ಸತ್ಯ. ಈಗ ಯಾರ ಹೃದಯದಲ್ಲಿ ಯಾವ ಆಸೆಯೋ ಬೆಳಗಲೆಂದು ನಿಮ್ಮ ಹೃದಯದಲ್ಲಿ ನಿರಾಶೆಯ ಕತ್ತಲು ಆವರಿಸಿದೆ. ಎರಡು ದಿನ ಈ ಕತ್ತಲಾಟ ನಡೆಯಲು ಬಿಡಿ. ಬಳಿಕ ಇಲ್ಲೂ ಬೆಳಕು ಥಳಥಳಿಸುತ್ತದೆ. ಈ ಮಾತು ತಿಳಿದಿರಲಿ. ಶಿವಕೃಪೆಯಲ್ಲಿ ನಂಬಿಕೆ ಇರಲಿ."

ಗುರುಗಳು ಯಾವ ಚಿತ್ತವಿಕಾರದಿಂದಲೂ ಕದಡದ ಶಾಂತವಾದ ಧ್ವನಿಯಲ್ಲಿ ಹೇಳಿದ ಮಾತುಗಳನ್ನು ಕೇಳಿ, ಪರಶುರಾಮಪ್ಪನ ಚಿತ್ತದಲ್ಲಿ ಕವಿದ ಅಂಧಕಾರದಲ್ಲಿ ಅಲ್ಲಲ್ಲಿ ನಾಲ್ಕಾರು ಹಣತೆಗಳ ಕುಡಿ ಬೆಳಕು

ಹೊಳೆದಂತಾಯಿತು. ಮತ್ತೆ ಆಸೆ ಪಲ್ಲವಿಸುತ್ತಿರುವ ಧ್ವನಿಯಲ್ಲಿ ಹೇಳಿದ—

"ನಿಜ. ಒಂದು ಗಳಿಗೆ ನನಗೂ ಲೋಕವೇ ಮುಳುಗುವಂತೆ ಭಯವಾಗಿತ್ತು."

"ಈಗ......?"

"ನಿಮ್ಮಂಥ ತಪಸ್ವಿಗಳ ಹರಕೆಯ ಕೋಟೆ ಇರುವವರೆಗೂ ಈ ದುರ್ಗಕ್ಕೆ ಭಯವಿಲ್ಲ ಎನಿಸುತ್ತಿದೆ."

"ನಮ್ಮಂಥವರು ಇದ್ದೂ ದುರ್ಗಕ್ಕೆ ಭಯ ಬಂದರೆ?....ಆಗ?......

—ಒಗಟು ನುಡಿಯುವವರಂತೆ ಹೇಳಿದರು ಗುರುಗಳು. ಅವರ ಪ್ರಶ್ನೆಯನ್ನು ಕೇಳಿ ಒಂದು ಗಳಿಗೆ ಚಿಂತಿಸಿ ಹೇಳಿದ ಪರಶುರಾಮಪ್ಪ—

"ನಮ್ಮ ಅದೃಷ್ಟ ಅಷ್ಟೆ ಎಂದುಕೊಳ್ಳುತ್ತೇವೆ. ಕಡಲಿಗೇ ಹೋದರೂ ನಾವು ತರುವ ನೀರು, ನಮ್ಮ ಪಾತ್ರೆ ಹಿಡಿಯುವಷ್ಟನ್ನೇ ತಾನೇ."

"ಅದು ಸರಿಯಾದ ಮಾತು. ಏನೇ ಬರಲಿ, ಹೋಗಲಿ, ನಮ್ಮ ಮನಸ್ಸು ಗಾಳಿಗೊಡ್ಡಿದ ಸೊಡರಾಗಬಾರದು. ತಂಗಾಳಿಯೇ ಬರಲಿ, ಬಿರುಗಾಳಿಯೇ ಬರಲಿ, ಅದನ್ನು ಕಳಿಸಿದವನು ಶಿವನೇ ಎಂಬ ನಂಬಿಕೆಯೊಂದಿರಲಿ. ತಂಗಾಳಿ ಬಂದರೆ ನಮ್ಮ ಮೈ ತಂಪು ಮಾಡಲು ಬರುತ್ತದೆ. ಬಿರುಗಾಳಿ ಬಂದರೆ ನಮ್ಮ ಮೈಯ ಕಸುವನ್ನು ಒರೆಗೆ ಹಚ್ಚಲು ಬರುತ್ತದೆ. ಬಿರುಗಾಳಿ ಎನ್ನುವುದು ಯಾವುದು? ಅದೇನು ಪ್ರತ್ಯೇಕವಾದ ವಸ್ತುವೇ? ಅದೂ ನಾವು ಉಸಿರಾಡುವ, ನಮ್ಮ ಬದುಕಿಗೆ ಅಗತ್ಯವಾದ ಪ್ರಾಣದೇವನೇ ಅಲ್ಲವೇ? ಅದೇ—ಆದರೆ ಅದರ ಉಗ್ರರೂಪ. ಬಲವಾದ ಆಹಾರ ತಿನ್ನುವ ಸಂದರ್ಭ ಬಂದಾಗ, ಕೊಂಚ ವ್ಯಾಯಾಮ ಮಾಡಿ, ನಮ್ಮ ದೇಹದ ಪಚನಶಕ್ತಿಯನ್ನು ಹೆಚ್ಚಿಸಿಕೊಳ್ಳುವಂತೆ, ಬಿರುಗಾಳಿ ಬೀಸಿದಾಗ, ಅದನ್ನು ತಡೆಯಲು ಬೇಕಾದಷ್ಟು ಶಕ್ತಿಯನ್ನು ಮೈಯಲ್ಲಿ ತಂದುಕೊಳ್ಳೋಣ. ಬಿರುಗಾಳಿಯಲ್ಲಿ ಮೈಮುರಿದು ಬಿದ್ದರೆ ಅದಕ್ಕೆ ಕಾರಣ ಗಾಳಿಯ ಬಿರುಸೇ ಅಲ್ಲ, ಅದಕ್ಕಿಂತ ಹೆಚ್ಚಾಗಿ ಮೈಯ ದುರ್ಬಲತೆ. ಸಣ್ಣ ಮರವನ್ನು ಮುರಿದ ಬಿರುಗಾಳಿ, ಕೋಡುಗಲ್ಲನ್ನು ನೇವರಿಸಿ ಹೋಗುತ್ತದೆ. ಅಲ್ಲವೇ? ಹಾಗೇ ನಾವು ಬಿರುಗಾಳಿಯಲ್ಲಿ

ಮುರಿಯದಿರಬೇಕು ಎಂದರೆ, ಗಾಳಿಯನ್ನು ದೂಷಿಸಿ ಫಲವಿಲ್ಲ, ಕೋಡುಗಲ್ಲಾಗಬೇಕು. ಈಗ ದುರ್ಗಕ್ಕೇನೋ ಘೋರ ವಿಪತ್ತಿನ ಬಿರುಗಾಳಿ ಬೀಸಲಿದೆ ಎಂದು ನಿಮಗೆ ಭಯವಾಗಿದೆಯಲ್ಲವೇ? ಬರಲಿ ಬಿಡಿ. ಅದೆಂಥ ಬಿರುಗಾಳಿ ಬರಬೇಕೆಂದು ಶಿವನಿಚ್ಛೆಯಿದೆಯೋ ಬರಲಿ. ನೀವು ಕೋಡುಗಲ್ಲಾಗಿ ನಿಲ್ಲಿ."

ಗುರುಗಳಾಡಿದ ಮಾತನ್ನು ಕೇಳಿ, ನಾಗತಿಯ ನಡೆತೆಯಿಂದಾದ ನಿರಾಶೆಯಿಂದಾಗಿ ದುರ್ಬಲನಾಗಿದ್ದ ಪರಶುರಾಮಪ್ಪನ ನರಗಳಲ್ಲಿ ಮತ್ತೆ ಶಕ್ತಿ ಸಂಚಾರಮಾಡಿತು. ಹಾಗೇ ಯಾವಕಾರಣಕ್ಕಾಗಿ ಇವರು ತನಗೆ ಇಷ್ಟು ಉಪದೇಶಮಾಡುತ್ತಿದ್ದಾರೆ ಎಂದು ಚಿಂತೆಯೂ ಆಯಿತು. ಹೊತ್ತು ಕಳೆಯಲು, ಇಲ್ಲದ ಆಸೆ ತುಂಬಲು ಅವರು ಈ ಮಾತುಗಳನ್ನಾಡುತ್ತಿದ್ದಾರೆ ಎಂದುಕೊಳ್ಳಲು ಅವನು ಸಿದ್ಧನಾಗಿರಲಿಲ್ಲ. ಅವರ ಮಾತಿನ ರೀತಿ, ಹೊತ್ತು ಹೋಗದೆ ನೆಲಕೆದಕುವವನಂತಿರದೆ, ಬೆಳೆ ಬೆಳೆಯಲು ನೆಲವನ್ನು ಉಳುತ್ತಿರುವ ರೈತನಂತಿತ್ತು. ಆದುದರಿಂದ ಆ ಬಗ್ಗೆ ಹೆಚ್ಚು ಚಿಂತೆ ಮಾಡದೆ ಹೇಳಿದ ಪರಶುರಾಮಪ್ಪ:

"ನಾನು ಬೇಡುವುದಿಷ್ಟೆ: ತಮ್ಮ ಅನುಗ್ರಹದಿಂದ ನನ್ನ ಮೈ ಮನ ಸಿಗಷ್ಟು ಬಲ ಬರಲಿ."

"ಆ ಬಲವಿದೆ ನಿಮ್ಮಲ್ಲಿ. ನಾಗತಿಯವರು ವಿನಾಕಾರಣ, ನಿಮ್ಮ ನೆತ್ತಿಯಮೇಲೆ, ತಮ್ಮ ಅಸಮಾಧಾನದ ಮಳೆಗರೆದಾಗ, ನೀವು ಏನು ಮಾಡುವಿರೋ ನೋಡಬೇಕು ಎಂತಲೇ ಸುಮ್ಮನಿದ್ದೆ. ಚಿಂತೆಯಿಲ್ಲ; ಒಳ್ಳೆಯ ತಂದೆಯ ಮಕ್ಕಳು ನೀವು. ನಿಮ್ಮತಂದೆಯವರ ಪರಿಚಯ ಪಡೆಯುವ ಯೋಗ ನಮಗಿಲ್ಲದಿದ್ದರೂ ಅವರ ವಿಷಯ ಸಾಕಷ್ಟು ಕೇಳಿದ್ದೇವೆ. ಭುವನಪ್ಪನವರ ಮಕ್ಕಳು ಈ ಹೊತ್ತಿನಲ್ಲಿ ಹೇಗೆ ನಡೆಯುವರೋ ಎಂದು ಚಿಂತೆಯಾಗಿತ್ತು. ಜಾತಿ ಕುದುರೆ ಮರಿಯಾದರೂ ಜಾತಿಕುದುರೆಯ ಮರಿಯೇ. ದುರ್ಗದ ಸಂಪಿಗೆ ಮೊಗ್ಗಾದರೂ ಕಂಪು ಇರುತ್ತದೆ. ಈಗಾದದ್ದು ಒಳ್ಳೆಯದೇ ಆಯಿತು. ದೇವರು ಒಳ್ಳೆಯದನ್ನು ಮಾಡುತ್ತಾನೆ. ನಾಗತಿಯರು ಅನ್ನ ಬೇಡಿ ಬಂದವರಿಗೆ ವಿಷವಿಕ್ಕಿದರು ಎಂದು ನೊಂದುಕೊಳ್ಳಬೇಡಿ. ಈಗ ಹೀಗಾದದ್ದೇ ಒಳ್ಳೆಯದಾಯಿತು."

"ಕ್ಷಮಿಸಬೇಕು, ತಮ್ಮಷ್ಟು ದೂರ ನೋಡುವ ಶಕ್ತಿ ನನಗಿಲ್ಲ...."

"ಇದರಲ್ಲಿ ಅಷ್ಟು ತೊಡಕಾದುದೇನೂ ಇಲ್ಲ. ನಾಯಕರು ತಮ್ಮನ್ನು ದೂರಮಾಡಿದರು ಎಂದು ನಾಗತಿಯವರಲ್ಲಿ ಬಹುದಿನಗಳಿಂದ ಅಸಮಾಧಾನ ಮನೆಮಾಡಿಕೊಂಡಿತ್ತು. ಅದು ಹೀಗೆ ತೊಡೆದುಹೋಗಿ, ಮುಂದೆ ಬೇರೆ ರೀತಿಯಲ್ಲಿ ಕೆಡಕಾಗುವುದು ತಪ್ಪಿತು."

"ಅಂದರೆ........"

"ನೋಡಿ, ಹೊಟ್ಟೆಯಲ್ಲಿಟ್ಟುಕೊಂಡ ಮುನಿಸು, ಸೆರಗಿನಲ್ಲಿ ಕಟ್ಟಿಕೊಂಡ ಕೆಂಡವಿದ್ದ ಹಾಗೆ. ಅದು ಅಷ್ಟು ಬಟ್ಟೆಯನ್ನು ಮಾತ್ರವೇ ಸುಟ್ಟು ಶಾಂತವಾದರೆ, ಭಗವಂತನ ದಯೆ, ಪೀಡೆ ಮೈಯನ್ನೇ ಸುಡದೆ, ಬಟ್ಟೆಯಷ್ಟನ್ನೇ ಸುಟ್ಟು ಪರಿಹಾರವಾಯಿತು ಎಂದುಕೊಳ್ಳಬೇಕು. ಹಾಗೆ ನಮಗೆ ಸೆರಗಿನಲ್ಲಿ ಕೆಂಡವಿರುವುದು ತಿಳಿಯುವುದು ಯಾವಾಗ—ಬಟ್ಟೆ ಸುಟ್ಟಾಗ ತಾನೇ. ಅದು ತಿಳಿದಕೂಡಲೇ ಅದನ್ನು ಆರಿಸುವ ದಾರಿಯೂ ಕಾಣುತ್ತದೆ. ಹಾಗೇ ಈ ದಿನ ಅದು ನಿಮ್ಮ ಉತ್ಸಾಹದ ಸೆರಗನ್ನು ಸುಟ್ಟು, ನಾಗತಿಯರ ಅಸಮಾಧಾನ ಪ್ರಕಟವಾಗಿದೆ. ಇನ್ನು ಅದನ್ನು ಶಾಂತಗೊಳಿಸುವ ಯತ್ನಮಾಡೋಣ. ಅದು ಹೀಗೆ ಪ್ರಕಟವಾಗಿ, ಒಳ್ಳೆಯದಾಯಿತು. ಹಾಗಲ್ಲದೆ ಒಳಗೇ ಹೊತ್ತಿದ್ದರೆ ಎಂಥ ವಿದ್ರೋಹದ ಕಿಚ್ಚಾಗುತ್ತಿತ್ತೋ ಬಲ್ಲವರು ಯಾರು? ಇರಲಿ ಬಿಡಿ. ಅದು ಏನೆಂದು ತಿಳಿಯಿತಲ್ಲ. ಇನ್ನು ಅದನ್ನು ಆರಿಸೋಣ. ಚಿಂತೆಮಾಡಬೇಡಿ."

"ಆದರೆ ಆ ಮುಳಿಸಿನ ಕಿಡಿಯನ್ನು ಆರಿಸುವ ಬಗೆ........?"

"ಆ ಚಿಂತೆ ನಮಗಿರಲಿ. ಹೊತ್ತು ನೋಡಿ ನಾವೇ ನಾಗತಿಯವರಿಗೆ ಎರಡು ಮಾತು ಹೇಳುತ್ತೇವೆ."

"ತಾವು....ತಮಗೂ ಈ ಮಾಲೆ ತೊಡಿಸಲೇ ?"

—ಗುರುಗಳ ಮಾತು ಕೇಳಿ ಹರ್ಷವಾದರೂ, ಅದಕ್ಕಿಂತ ತನ್ನಿಂದಾಗಿ ಅವರೂ ಈ ರಂಗಕ್ಕೆ ಇಳಿಯಬೇಕಾಗಿ ಬಂತಲ್ಲ ಎಂಬ ವ್ಯಥೆಯಿಂದ ನೊಂದು ಹೇಳಿದ ಪರಶುರಾಮಪ್ಪ. ಅವನ ವ್ಯಥೆಯನ್ನು ಕಂಡು ಗುರುಗಳು ದೊಡ್ಡ ನಗು ನಕ್ಕು ಹೇಳಿದರು.—

"ನಿಮ್ಮದು ಎಂಥ ಕೋಮಲಾಂತಃಕರಣ ಪರಶುರಾಮಪ್ಪ, ರಾಜ

ಕಾರಿಣಿ ಹೀಗಿರಬಾರದು."

"ಮತ್ತೆ ಹೇಗಿರಬೇಕು."

"ಅಕ್ಕಸಾಲಿಗನ ಹಾಗೆ!"

"ಅಂದರೆ........"

"ಸರ್ವಜ್ಞನ ವಚನ ಕೇಳಿಲ್ಲವೇ ನೀವು? 'ತ್ರಿನಯನನ ಮಕುಟ ವಾದರೂ ಅಕ್ಕಸಾಲೆ ಟೊಣೆಯದೇ ಬಿಡನು' ಎಂದ ಹಾಗೆ, ರಾಜಕಾರಣಿ ಗಳು ಏಣಾಂಕಧರ ಧರೆಗಿಳಿದು ಬಂದರೂ ಅವನಿಗೂ ಈ ಮೂಟೆಕೊಟ್ಟು ಒಂದುಗಳಿಗೆ ಹೊತ್ತುಕೋ ಎಂದು ಹೇಳಬೇಕು. ಆದರೆ ನೀವು ಸನ್ಯಾಸಿಯ ಕತ್ತಿಗೆ ಇದನ್ನು ಹಾಕಲು ಹೆದರುತ್ತಿದ್ದೀರ. ತಪ್ಪಲ್ಲವೇ?"

"ತಪ್ಪೇನೋ ಎನಿಸುತ್ತದೆ. ಎಷ್ಟಾದರೂ ಇದು ಸಾಂಸಾರಿಕರ ಗೊಂದಲ."

"ನಾನೂ ಸಂಸಾರಿಯೇ ಅಲ್ಲವೇ? ನೀವು ಒಂದು ಸಂಸಾರ ಕಟ್ಟಿ ಕೊಂಡವರು, ನಾನು ವಿಶ್ವಸಂಸಾರಿ. ದುರ್ಗದ ನೀರು, ಈ ಮೈಯನ್ನೂ ಬೆಳೆಸಿದೆ. ನಾಲ್ಕು ಮಾತಿನಿಂದಲೇ ಅದರ ಋಣ ತೀರುವುದಾದರೆ ನಾನೇಕೆ ಬೇಡ ಎನ್ನಲಿ ? ನೀವು ತಾನೆ ಏಕೆ ಸಂಕೋಚಪಟ್ಟುಕೊಳ್ಳು ತ್ತೀರ. ಈ ಪಂಚಭೂತಗಳ ಆಟ ನೀವು ಕಾಣಿರಿ. ಕೊಡುವಾಗ ದಾನ ಎಂದು ಕೊಟ್ಟು, ತೆಗೆದುಕೊಳ್ಳುವಾಗ ಸಾಲ ಎಂದು ವಸೂಲು ಮಾಡಿ ಕೊಳ್ಳುತ್ತವೆ. ಅದು ಒಂದು ತರಹದ ಆಟ, ಇದೂ ಒಂದು ತರಹದ ಆಟ. ಎಲ್ಲಾ ಆಟ ಎಂದುಕೊಂಡೇ ಬಿಟ್ಟರೆ, ನಮಗೂ ಆನಂದವಾಗು ತ್ತದೆ. ಶಿವಲೀಲೆ ನಡೆಯಲಿ. ನಾಗತಿಯವರ ಮಾತನ್ನು ಹೆಚ್ಚು ಹಚ್ಚಿ ಕೊಳ್ಳಬೇಡಿ. ಎಷ್ಟಾದರೂ ಅದೂ ಹೆಣ್ಣು ಜೀವವೇ. ಅದಕ್ಕೂ ನೋವಾ ಗಿದೆ. ಹುರುಪಿನ ಕುದುರೆಯನ್ನು ಓಡಿಸುವುದು ಶ್ರಮವಾಗುವುದಿಲ್ಲ. ಆದರೆ ಇದು ದಣಿದ ಕುದುರೆ. ಹೇಗೆ ಬೆನ್ನು ಚಪ್ಪರಿಸಬೇಕೋ ಹಾಗೆ ಚಪ್ಪರಿಸಿದರೆ ಇದೂ ಓಡುತ್ತದೆ."

—ಗುರುಗಳ ಮಾತನ್ನು ಕೇಳಿ ಮತ್ತೆ ಪರಶುರಾಮಪ್ಪನ ಹೃದಯ ದಲ್ಲಿ ಆಶೆಯ ಉತ್ಸಾಹ ತುಂಬಿ ಬಂದಿತು. ಆ ಉತ್ಸಾಹದಲ್ಲೇ ಹೇಳಿದ—

"ಬಂದಕೆಲಸ ಕೆಟ್ಟುಹೋಯಿತೇನೋ ಎಂದು ಹೆದರಿದ್ದೆ. ಆ

ಭಯ ತಪ್ಪಿಸಿದಿರಿ. ನನ್ನ ಹೆಗಲಿನ ಭಾರ ಈಗ ನಿಮ್ಮ ನೆತ್ತಿಗಾಯಿತು. ಮನ್ನಿಸಿ; ಆಶೀರ್ವಾದ ಮಾಡಬೇಕು."

ಎಂದು ಅವರ ಚರಣಗಳಿಗೆ ಎರಗಿದ.

'ಶಿವಮಸ್ತು"

—ಎಂದು ಅವನನ್ನು ಆಶೀರ್ವದಿಸಿ, ಅವನ ತೆರೆದ ಬೊಗಸೆಗಳಿಗೆ ಬಿಲ್ವ ವಿಭೂತಿಯ ಪ್ರಸಾದವನ್ನು ಹಾಕಿ—

"ಇನ್ನೆರಡು ದಿನ ಬಿಟ್ಟುಬನ್ನಿ. ಅಷ್ಟರೊಳಗೆ ನಾವು ನಾಗತಿಯರಲ್ಲಿ ಮಾತಾಡಿರುತ್ತೇವೆ."

ಎಂದು ಪರಶುರಾಮಪ್ಪನನ್ನು ಸ್ವಾಮಿಗಳು ಬೀಳ್ಕೊಟ್ಟರು. ಅವರ ಆಶ್ವಾಸನದಿಂದ ಬೆಳೆದ ಉತ್ಸಾಹದಿಂದ ಪರಶುರಾಮಪ್ಪ ಮಠದಿಂದ ಹೊರಬಿದ್ದ.

ಆದರೆ ಅವನಲ್ಲಿ ಉತ್ಸಾಹ ತುಂಬಿದ ಗುರುಗಳು, ಬಳಲಿದಂತೆ ಹಾಗೇ ಪೀಠಕ್ಕೆ ಒರಗಿ ಕಣ್ಣು ಮುಚ್ಚಿದರು. ಒಂದು ಕ್ಷಣ ಅವರ ಮುಖದ ಮೇಲೆ ಏನೋ ನೆರಳು ಸುಳಿದು ಹೋಗಿ, ಮರುಗಳಿಗೆಯೇ ಮತ್ತೆ ಶಾಂತಿ ನೆಲೆಸಿತು. ಕಣ್ಣು ತೆರೆದು, ಕಣ್ಣ ಎದುರಿಗಿದ್ದ ಮಾರ್ಕಂಡೆಯ ರಕ್ಷಿತನಾದ ಸದಾಶಿವನ ಚಿತ್ರವನ್ನು ನೋಡಿ—

"ಶಂಭೋ, ನಿನ್ನ ಚಿತ್ತವಿದ್ದಂತಾಗಲಿ, ಕೃಪಾನಿಧೇ"

—ಎಂದು ಕೈ ಮುಗಿದರು.

೬

ಬಹು ದಿನಗಳಿಂದ ತನ್ನ ಹೃದಯದಲ್ಲಿ ಹುದುಗಿ, ಹೊರಗೆ ಬರಲು ಅವಕಾಶವಿಲ್ಲದೆ ಹೊಗೆಯಾಡುತ್ತಿದ್ದ ಅಸಮಾಧಾನವನ್ನು ಗಳಿಗೆಯ ಉದ್ರೇಕಕ್ಕೆ ವಶಳಾಗಿ, ಕಿಚ್ಚಿನಂತೆ ಅದನ್ನು ಕಾರಿ ಹೊರಟು ಬಂದ ನಾಗತಿಯ ಚಿತ್ತಕ್ಕೂ ಸಮಾಧಾನವಿರಲಿಲ್ಲ. ಒಂದು ಮನಸ್ಸು 'ತಕ್ಕದ್ದು ಮಾಡಿದೆ. ಇಷ್ಟು ದಿನ ನಿನ್ನನ್ನು ಮರೆತ ಅವನ ಮರೆವಿನ ಅಪಚಾರಕ್ಕೆ ತಕ್ಕ ಪ್ರಾಯಶ್ಚಿತ್ತವಾಯಿತು. ಹಾಗೇ ಆಗಬೇಕಾಗಿತ್ತು ನೋಡಿದೆಯಾ? ಅವನು ನಿನ್ನ ಮಾತಿನ ಚಾಟಿಯೇಟಿಕೆ ಹೇಗೆ ಹೊಯ್ದಾಡಿದ ಎಂದು'

ಅವಳ ಬೆನ್ನು ತಟ್ಟಿದರೆ 'ಛೆ? ಎಂಥ ಕೆಲಸ ಮಾಡಿದೆ ಹೆಣ್ಣೆ. ಯಾರ ಮೇಲಿನ ಸಿಟ್ಟನ್ನು ಯಾರ ಮೇಲೆಯೋ ತೀರಿಸುವುದೇ? ಪರಶುರಾಮಪ್ಪ ನಿನಗೇನು ದ್ರೋಹ ಬಗೆದಿದ್ದ? ನಿನ್ನನ್ನು ದೂರಮಾಡಿದ್ದವನು ನಾಯಕ. ಹಾಗಿರುವಾಗ ಎತ್ತಿನ ರೋಗಕ್ಕೆ ಎಮ್ಮೆಗೆ ಬರೆ ಎಳೆಯುವುದೇ? ಯಾವ ಲೋಕದ ನ್ಯಾಯ ಇದು. ತಾಯಿ ಎಂದು ಕೈಮುಗಿದು ಬೇಡಿದರೆ, ಅದು ಏನು ಎಂದು ಕೇಳುವ ತಾಳ್ಮೆಯೂ ಇಲ್ಲದೆ, ಕಿಡಿ ಸೋಕಿದ ಬೆಕ್ಕಿನ ಹಾಗೆ ಎಗರಾಡಿದೆಯಲ್ಲಾ, ಇದು ಮರ್ಯಾದೆಯೇ?" ಎಂದು ಕೆನ್ನೆ ಹಿಂಡುತ್ತಿತ್ತು. ಎಲ್ಲಕ್ಕಿಂತ ಹೆಚ್ಚಾಗಿ, ಎಲ್ಲಿ ವಿನಯವಿರಬೇಕೋ, ಭಕ್ತಿ ಇರಬೇಕೋ ಅಂತಹ ಕಡೆ ಉದ್ಧಟತನ, ಅವಿನಯವನ್ನು ಮೆರೆದು ಬಂದು ಅಪಚಾರ ಮಾಡಿದ ಭಾವನೆ ಉಳಿದೆಲ್ಲ ಭಾವನೆಗಳಿಗಿಂತ ಹೆಚ್ಚಾಗಿ ಆಕೆಯ ಹೃದಯವನ್ನು ಹಿಂಡುತ್ತಿತ್ತು. "ಗುರುಗಳೆಂದರೆ ದೇವರು, ಪರಶಿವನ ಅವತಾರ ಎನ್ನುತ್ತಿದ್ದೆಯಲ್ಲಾ, ಅಂಥವರಿಗೆ ನೀನು ಕೊಡುವ ಬೆಲೆ ಇಷ್ಟೇನೇ? ಇಷ್ಟೇನೇ ನಿನ್ನ ಭಕ್ತಿ? ಗುರುಗಳೇ ಕರೆದು 'ಆತನ ಮಾತು ಕೇಳು' ಎಂದಾಗ, ಆತನ ಮೇಲೆ ಏನೇ ಅಸಮಾಧಾನವಿದ್ದರೂ, ಗುರುವಾಕ್ಯಕ್ಕೆ ಬೆಲೆ ಕೊಟ್ಟು, ಆತ ಹೇಳುತ್ತಿದ್ದುದನು ಕೇಳಿ ಬರಬಾರದಾಗಿತ್ತೇ? ನಿನ್ನ ನಡತೆಯಿಂದ ಅವರ ಮನಸ್ಸಿಗೆ ಎಷ್ಟು ನೋವಾಗಿರಬಹುದು. ಅದನ್ನಾದರೂ ಯೋಚಿಸಬಾರದಾಗಿತ್ತೇ ಮೂರ್ಖೆ' ಎಂದು ಅವಳೆದೆಯನ್ನು, ಹೊರಗೆಳೆಯಲು ಬಾರದಂತೆ ಕಾಲಲ್ಲಿ ಹುದುಗಿದ ಮುಳ್ಳಿನಂತೆ ಇರಿಯುತ್ತಿತ್ತು. ಈ ಹಲಬಗೆಯ ಭಾವಗಳ ಹೊಯ್ದಾಟದಲ್ಲಿ ಸಿಲುಕಿ ಬಳಲಿದ ಮನಸ್ಸು 'ಹೋಗಲಿ. ಈಗೇನಾಯಿತು, ತಪ್ಪುಮಾಡಿದೆ. ಹೋಗಿ ಗುರುಗಳ ಕಾಲಿಗೆ ಬಿದ್ದು ಅಪರಾಧವಾಯಿತು, ಕ್ಷಮಿಸು ತಂದೆ ಎಂದು ಬೇಡಿಕೊ" ಎಂದು ಬುದ್ಧಿ ಹೇಳಿತು. ಆ ಭಾವನೆ ಬಂದ ಕೂಡಲೇ ಹಾಸಿನಲ್ಲಿ ಮಲಗಿದ ಆಕೆಗೆ ಕೂಡಲೇ ಎದ್ದು ಮಠದತ್ತ ಓಡಬೇಕು ಎನಿಸಿತು. ಆದರೆ ಮರುಗಳಿಗೆಯೇ ಅದು ಗುರುಗಳ ವಿಶ್ರಾಂತಿಯ ಹೊತ್ತೆಂಬುದು ಅರಿವಾಗಿ, ಸಂಜೆ ಅವರನ್ನು ಕಂಡು ಕ್ಷಮಿಸಿರೆಂದು ಬೇಡಿಕೊಳ್ಳುವುದೆಂದು ನಿಶ್ಚಯಿಸಿದಳು. ಆ ನಿರ್ಧಾರಕ್ಕೆ ಬಂದ ಮೇಲೆ, ಆಕೆಯ ಮನಸ್ಸಿನ ಹೊಯ್ದಾಟ ಅಷ್ಟು ಕಡಮೆಯಾ

ಯಿತು. ಎಷ್ಟು ಬೇಗ ಸಂಜೆಯಾಗುವುದೋ ಎಂದು ಕಾಯುತ್ತಾ ಮಲಗಿದ್ದಳು. ಹಾಗೆಯೇ ನಿದ್ದೆ ಬಂದು, ಮಲಗಿದ ಮೈಗೆ ಮಾಯೆಯ ಹೊದಿಕೆ ಹೊದಿಸಿತು.........

ಸಂಜೆಯ ಮಬ್ಬುಗತ್ತಲು. ಮಲ್ಲವ್ವನಾಗತಿ ಅಕ್ಕತಂಗಿಯರ ಹೊಂಡದ ಬಳಿಯ ಬಾಗಿಲನ್ನು ದಾಟಿ, ಗೋಪಾಲಸ್ವಾಮಿ ದೇವಾಲಯ ದತ್ತ ಹೋಗುತ್ತಿದ್ದಾಳೆ—ಒಂಟಿಯಾಗಿ. ಎಂದಿನಂತೆ ಕೋಟೆಯ ಬಾಗಿಲು ದಾಟುವಾಗ, ಬಾಗಿಲಲ್ಲಿ ಒಡಮೂಡಿದ ಆಂಜನೇಯನಿಗೆ ನಮಸ್ಕರಿಸಿ ಮುಂದೆ ಹೋಗಲು ಹೆಜ್ಜೆ ಇಟ್ಟಾಗ ಅದುವರೆಗೂ ಶಿಲಾಮೂರ್ತಿಯಾಗಿದ್ದ ಆಂಜನೇಯ ಕಣ್ಣು ಬಿಟ್ಟು ಅವಳನ್ನು ನೋಡಿ 'ಮುಂದೆ ಹೋಗಬೇಡ' ಎಂದು ಹೇಳಿ ಕೈಚಾಚಿ ತಡೆಯುತ್ತಿದ್ದಾನೆ. 'ಏಕೋ ಬೇಡವೆಂದ' ಎಂದುಕೊಂಡು ಹಿಂದರುಗಬೇಕು ಎಂದುಕೊಳ್ಳುವುದರೊಳಗೆ "ಅಷ್ಟಕ್ಕೇ ಹೆದರಿಬಿಟ್ಟೆಯಾ, ಬಾ" ಎಂದು ಕರೆದಂತಾಯಿತು. ಯಾರೊ ಎಂದು ಧ್ವನಿ ಬಂದ ಕಡೆ ದಿಟ್ಟಿಸಿ ನೋಡಿದಳು. ಯಾವುದೋ, ಯಾರೆಂದು ತಿಳಿಯದಂಥಾ ಅಸ್ಪಷ್ಟವಾದ ನೆರಳು, ಅವಳ ಕಡೆಗೆ ಕೈಬೀಸಿ ಕರೆಯುತ್ತಿದೆ. ಅದರತ್ತ ಹೋಗುವುದು ಬೇಡ ಬೇಡ ಎಂದು ಎದೆ ಜಗ್ಗುತ್ತಿದ್ದರೂ, ನಿಲ್ಲಲಾರದೆ ಮುಂದೆ ನಡೆದು ಅದರಬಳಿ ಸಾರಿದಳು. ಆವಳು ತನ್ನಬಳಿ ಬರುವವರೆಗೂ, ಹೊಂಡದ ಗೋಡೆಯ ಮೇಲೆ ಆಕೆ ಸಮೀಪಕ್ಕೆ ಬರುತ್ತಿದ್ದ ಹಾಗೆಯೇ ನಿಂತಿದ್ದ ನೆರಳು, ಸುಮ್ಮನೆ "ಬಂದೆಯಾ, ಬಂದೆಯಾ" ಎಂದು ಕಿಲಕಿಲನೆ ನಕ್ಕು ನೀರಿಗೆ ಹಾರಿತು. "ಅಯ್ಯೋ, ನೀರಿಗೆ ಬಿದ್ದಳು" ಎನ್ನುತ್ತಾ ನೀರಿನತ್ತ ನೋಡಿದಳು ಮಲ್ಲವ್ವ. ನೀರಿನಲ್ಲಿ ಎರಡು ರುಂಡ ಕಮಲಗಳಂತೆ ತೇಲುತ್ತಿವೆ. ಒಂದು ಓಬಣ್ಣನಾಯಕನದು, ಮತ್ತೊಂದು ಓಬವ್ವ ನಾಗತಿಯದು. ಮಲ್ಲವ್ವ ನೋಡುತ್ತಿದ್ದ ಹಾಗೇ ಬರಿಯ ರುಂಡವಾಗಿ ತೇಲುತ್ತಿದ್ದ ಓಬವ್ವನಾಗತಿ ಕೈಗಳನ್ನು ಚಾಚಿ "ಬಾ....ನೀನೂ ಬಾ....ನಾನೊಬ್ಬಳೇ ಈ ನೀರಿನಲ್ಲಿರಲಾರೆ" ಎಂದು ಕರೆಯುತ್ತಿದ್ದಾಳೆ. ಅದನ್ನು ಕಂಡು ಮಲ್ಲವ್ವ ಗಾಬರಿಯಾಗಿ ಹಿಂದಿರುಗಿ ಓಡುತ್ತಿದ್ದಾಳೆ. ಯಾವುದೋ ವಿಕಾರವಾದ ನಗು ಅವಳನ್ನು ಹಿಡಿಯಬೇಕೆಂಬಂತೆ ಅವಳನ್ನು ಹಿಂಬಾಲಿಸಿ ಬರುತ್ತಿದೆ. 'ಇಲ್ಲ....ಇಲ್ಲ....ನಾನು ಬರುವುದಿಲ್ಲ....'

ಎಂದು ಚೀರುತ್ತಿದ್ದಾಳೆ ಮಲ್ಲವ್ವ. ಸಣ್ಣದಾಗಿದ್ದ ನಗು ಇದ್ದಕ್ಕಿದ್ದ ಹಾಗೇ ಬೆಳೆದು ಸುತ್ತಲ ಬೆಟ್ಟಗಳು ಕಂಪಿಸುವಂತೆ ಮಾಡುವ ಪಿಶಾಚ ವಿಕಟಾಟ್ಟ ಹಾಸವಾಗಿ ಗಹಗಹಿಸುತ್ತಿದೆ. ಅದರ ನಡುವೆ ಯಾರದೋ ಅಳು. ಆ ಅಳು, ನಗುವುಗಳು ದಟ್ಟವಾದ ಮೋಡದಂತೆ ಅವಳ ಸುತ್ತಲೂ ಕವಿದು, ಆ ಮೋಡದೊಳಗಿನಿಂದ ವಿಶಾಲವಾದ ಕಣ್ಣುಗಳೆರಡು ಮೂಡಿ ಬಂದು ಕಂಬನಿಗರೆಯುತ್ತಿವೆ. ಹನಿ ಹನಿಯಾಗಿ ಕಣ್ಣೀರು ಅವಳ ಮುಖದ ಮೇಲೆ ಬೀಳುತ್ತಿದೆ............"

ಮುಖದ ಮೇಲೆ ನೀರುಬಿದ್ದು ಮಲ್ಲವ್ವ ನಾಗತಿಗೆ ಎಚ್ಚರವಾಯಿತು. ಕನಸಿನಲ್ಲಾದ ಗಾಬರಿಗೆ ಅವಳ ಮೈ ಸಣ್ಣಗೆ ಬೆವರಿತ್ತು. ಕಣ್ಣು ತೆರೆದು ನೋಡಿದಳು. ನೀರು ತುಂಬಿದ ಬೆಳ್ಳಿಯ ಗಿಂಡಿಯನ್ನು ಹಿಡಿದ ಸಜ್ಜೆಯದಾಸಿ, ಆಕೆಯತ್ತ ಭೀತಿಯ ನೇತ್ರಗಳಿಂದ ನೋಡುತ್ತಾ ನಿಂತಿದ್ದಳು. ನಾಗತಿ ಕಣ್ಣು ತೆರೆದುದನ್ನು ಕಂಡು, ಭಯದಿಂದ ಬಿಳುಪೇರಿದ ದಾಸಿಯ ಮೊಗದಲ್ಲಿ ಮತ್ತೆ ಬಣ್ಣ ಸುಳಿಯಿತು.

"ಮುಖದ ಮೇಲೆ ನೀನು ನೀರು ಹಾಕಿದೆಯಾ ಕೆಂಪವ್ವ?"

—ಎಂದು ನಾಗತಿ ದಾಸಿಯನ್ನು ಕೇಳಿದಳು.

"ಹೂ. ಏಕೆ ತಾಯಿ, ಮಲಗಿದ್ದವರು ಹಾಗೆ ಚೀರಿದಿರಿ?"

—ಎಂದಳು ದಾಸಿ, ಇನ್ನೂ ಪೂರ್ಣವಾಗಿ ತೊಲಗದ ಭೀತಿಯಿಂದ ನಸುಕಂಪಿಸುತ್ತಿರುವ ಸ್ವರದಲ್ಲಿ.

"ಏನೋ ಕೆಟ್ಟ ಕನಸುಕಂಡೆ. ಆ ಭಯದಲ್ಲಿ ಚೀರಿರಬೇಕು. ಹೊತ್ತು ಎಷ್ಟಾಯಿತು?"

"ಸೂರ್ಯ ಇನ್ನು ಅರ್ಧಮಾರು ಕೆಳಗಿಳಿದರೆ ಹೊತ್ತು ಮುಳುಗುತ್ತದೆ. ಮಿಾಯುವುದಕ್ಕೆ ಸಿದ್ಧಮಾಡಲೇ?"

"ಹೂ. ಸ್ನಾನಕ್ಕೆ ಸಿದ್ಧತೆಮಾಡಿ, ಹಾಗೇ ಮೇನೆಯನ್ನು ತರುವಂತೆ ಹೇಳು"

—ಎಂದಳು ನಾಗತಿ. ಆಕೆಯ ಅಪ್ಪಣೆಯನ್ನು ನೆರವೇರಿಸಲು ದಾಸಿ ಸ್ನಾನಗೃಹದತ್ತ ತೆರಳಿದಳು. ನಾಗತಿ ತಲೆದಿಂಬನ್ನು ಬೆನ್ನಿಗೆ ಸರಿಮಾಡಿಕೊಂಡು ಒರಗಿದಳು. ಮತ್ತೆ ಕನಸಿನ ನೆನಪು ಮೆದುಳಿನಲ್ಲಿ

ಮೂಡಿಬಂದು ಮೈನಡುಗಿತು. "ಶಿವಶಿವಾ......ಶುಭಮಸ್ತು.... ಶಾಂತಿರಸ್ತು" ಎಂದುಕೊಂಡರೂ ಕನಸು ತೊಲಗಿಹೋಗದೆ, ಮನಸ್ಸಿಗೆ ಸಣ್ಣ ಭೀತಿಯ ತೆರೆಯನ್ನು ಎಳೆಯಿತು.



ಅದೇ ಭಾವನೆಯಲ್ಲೇ ಎದ್ದುಹೋಗಿ, ಮಿಂದು, ಬಟ್ಟೆ ಬದಲಿಸಿ, ಬಾಗಿಲಬಳಿ ಸಿದ್ಧವಾಗಿದ್ದ ಮೇನಾದಲ್ಲಿ ಕುಳಿತು "ಮಠದತ್ತಕೊಂಡೊಯ್ಯಲು ಹೇಳು" ಎಂದು ದಾಸಿಗೆ ಅಪ್ಪಣೆ ಮಾಡಿದಳು. ಮೇನಾ ಮಠದ ಬಳಿ ತಲುಪಿದಾಗ, ಬಾಗಿಲ ಆಳಿನಿಂದ ಗುರುಗಳು ಬಿಲ್ವವನದಲ್ಲಿದ್ದಾರೆಂದು ತಿಳಿದು, ಮಠದ ಬಾಗಿಲಿನಲ್ಲಿಯೇ ಮೇನಾದಿಂದ ಇಳಿದು, ಅದು ಅಲ್ಲಿಯೇ ಇರಲೆಂದು ಹೇಳಿ ಗುರುಗಳಿಗೆ ತಾವು ಬಂದ ಸುದ್ದಿ ಮುಟ್ಟಿಸುತ್ತೇವೆ ಎಂದ ಆಳಿಗೂ "ಬೇಡ. ನಾವೇ ಅಲ್ಲಿಗೆ ಹೋಗುತ್ತೇವೆ" ಎಂದು ಹೇಳಿ, ದಾಸಿಯೊಡನೆ ಬಿಲ್ವವನದತ್ತ ಹೆಜ್ಜೆ ಹಾಕಿದಳು.

ಗುರುಗಳು ಬಿಲ್ವವನದ ನಡುವೆ ಬಂಡೆಯೊಂದರ ಮೇಲೆ, ಅದರ ಬೆಂಬದಿಗೆ ಚಾಚಿದ ಮತ್ತೊಂದು ಕಲ್ಲುಬಂಡೆಗೆ ಬೆನ್ನನ್ನು ಒರಗಿಸಿ ಕುಳಿತಿದ್ದರು. ಸಂಜೆಯ ಸೂರ್ಯನ ಕಾವಾರಿದ ಹೊಂಬೆಳಕಿನಲ್ಲಿ ಕಾವಿಯನ್ನುಟ್ಟ ಗುರುಗಳ ಮೂರ್ತಿ ಏನೋ ದೈವೀ ಪ್ರಕಾಶದಿಂದ ಹೊಳೆಯುತ್ತಿರುವಂತೆ ತೋರಿತು, ಅವರ ಬಗ್ಗೆ ಭಕ್ತಿತುಂಬಿದ ನಾಗತಿಯ ಕಣ್ಣುಗಳಿಗೆ. ಹಾಗೆ ಹೋಗಿ ಅವರ ಚರಣಗಳಿಗೆರಗಿದಳು. ಏನೋ ಯೋಚನೆಯಿಲ್ಲದ್ದ ಗುರುಗಳು, ಸುದ್ದಿ ಕೊಡದೆ ಬಂದ ನಾಗತಿಯನ್ನು ಕಂಡು ಚಕಿತರಾಗಿ—



"ಇದೇನು ಸುದ್ದಿ ಕಳಿಸದೆಯೇ ಬಂದಿರಲ್ಲಾ?"

—ಎಂದು ಕೇಳಿದರು.

"ಏಕೋ ಈ ದಿನ ಬೆಳಗ್ಗೆ ನಾನು ತಮ್ಮ ಸನ್ನಿಧಿಯಲ್ಲಿ ನಡೆದುಕೊಂಡ ರೀತಿಯಿಂದ ಮನಸ್ಸಿಗೆ ಹಿಂಸೆಯಾಗಿತ್ತು. ತಮ್ಮನ್ನು ಕಂಡು ಕ್ಷಮಾಪಣೆ ಕೇಳುವವರೆಗೂ ಮನಸಿಗೆ ಸಮಾಧಾನವಾಗುವಂತಿರಲಿಲ್ಲ. ಅದಕ್ಕಾಗಿ ಹೊರಟುಬಂದೆ, ನನ್ನ ಬೆಳಗಿನ ಅವಿನಯವನ್ನು ಕ್ಷಮಿಸಬೇಕು."

—ಎಂದು ಮತ್ತೊಮ್ಮೆ ಅವರ ಪಾದಗಳಿಗೆ ನಮಸ್ಕರಿಸಿದಳು. ಆಕೆಯ ಮಾತನ್ನು ಕೇಳಿ, ಹಾಗೇ ಒಂದು ಚಣ ಆಕೆಯ ಮೊಗವನ್ನು ದಿಟ್ಟಿಸಿ ನೋಡಿ ಗುರುಗಳು ಹೇಳಿದರು—

"ನಿಮಗೆ ಅಸಮಾಧಾನವಾಗದಿದ್ದರೆ—ಒಂದು ಮಾತು ಹೇಳಲೇ?"

"ತಾವು....ನನ್ನಲ್ಲಿ ಆ ರೀತಿ....ಕೇಳುವುದೇ....ಪ್ರಭು ಅಪ್ಪಣೆಯಾಗಲಿ."

"ನೋಡಿ—ಈ ಬೆಳಗ್ಗೆ ಅಪಚಾರವಾಯಿತು, ಕ್ಷಮಾಪಣೆ ಬೇಡಬೇಕು ಎಂದು ಹೇಳಿದಿರಿ. ಮುಖೋಪಚಾರಕ್ಕೆ ಬೇಕಾದರೆ ಹಾಗೇನೂ ಆಗಲಿಲ್ಲ ಎಂದು ಹೇಳಬಹುದು. ನಾವು ಹಾಗೆ ಹೇಳುವುದರಿಂದ ನಿಮ್ಮ ಮನಸ್ಸಿಗೆ ಸಂತೋಷವಾಗುತ್ತದೆ, ಆದರೆ ಸತ್ಯಕ್ಕೆ ಅಪಚಾರವಾಗುತ್ತದೆ. ಹಾಗಾಗಬಾರದು, ನಿಜವನ್ನೇ ನುಡಿಯಬೇಕು ಎಂದರೆ, ನೀವು ಹೇಳಿದುದು ಸರಿ; ಅಪಚಾರವಾಗಿದೆ, ಕ್ಷಮಾಪಣೆ ಬೇಡಬೇಕು, ಆದರೆ ನಮ್ಮಲ್ಲಿ ಅಲ್ಲ."

"ಯಾರಲ್ಲಿ ಬೇಡಬೇಕು?"

"ಯಾರಿಗೆ ನಿಮ್ಮಿಂದ ಅಪಚಾರವಾಯಿತೋ ಅವರಲ್ಲಿ."

"ಅಂದರೆ........"

"ಪರಶುರಾಮಪ್ಪನವರಲ್ಲಿ"

ಸ್ವಾಮಿಗಳು ಹೇಳಿದ ಮಾತನ್ನು ಕೇಳಿ ನಾಗತಿಯ ಮುಖ ತನಗೆ ತಾನೇ ಕೆಂಪೇರಿತು. ಧ್ವನಿ ಬೇಡವೆಂದರೂ ಬಿರುಸಾಯಿತು.

"ನಾವು....ಪರಶುರಾಮಪ್ಪನವರಲ್ಲಿ....ಕ್ಷಮೆ ಕೇಳಬೇಕೇ?"

"ಏಕೆ—ಕೇಳಿದರೆ ತಪ್ಪೆ?"

—ನಾಗತಿಯ ಹೃದಯವನ್ನು ಚುಚ್ಚಿ ಕೇಳಿದರು ಸ್ವಾಮಿಗಳು. ಅವರ ಮಾತಿಗೆ ಏನು ಉತ್ತರಕೊಡಬೇಕೆಂಬುದು ನಾಗತಿಗೆ ಕೂಡಲೇ ತೋಚಲಿಲ್ಲ. ಅದನ್ನು ಕಂಡು ಸ್ವಾಮಿಗಳೇ ತಮ್ಮ ಮಾತನ್ನು ಮುಂದುವರಿಸಿ ಹೇಳಿದರು—

"ಈಗ ತಾನೇ ನಮ್ಮಿಂದ ಅಪಚಾರವಾದುದಕ್ಕಾಗಿ ಪಶ್ಚಾತ್ತಾಪವಾಯಿತು ಎಂದಿರಿ. ಶಿವ ಮೆಚ್ಚುವ ಮಾತು ಅದು. ನಮ್ಮ ನಡತೆಯಲ್ಲಿನ ದೋಷವನ್ನು ಇತರರು ತೋರಿಸಿಕೊಡುವ ಮೊದಲು ನಾವೇ ಎಚ್ಚರವಾಗಿ ನಮ್ಮಿಂದ ತಪ್ಪಾಗಿದೆ ಎಂದು ಕಂಡುಕೊಳ್ಳುವುದು ದೊಡ್ಡತನ. ಆದರೆ ಅದು ಸಂಪೂರ್ಣವಾಗಬೇಕಾದರೆ, ಎಲ್ಲಿ ತಪ್ಪುನಡೆಯಿತೋ ಅಲ್ಲಿ ಕ್ಷಮೆ

ಕೇಳಿಕೊಳ್ಳುವ ನಿಸ್ಸಂಕೋಚವೂ ಬೇಕು. ಹಾಗಲ್ಲದೆ, ಹಾಗೆ ಮಾಡಲು ಅಹಂಕಾರ ಅಡ್ಡಿಯಾದರೆ, ಮತ್ತೊಂದು ಅಪರಾಧವಾಗುತ್ತದೆ. ಅಹಂಕಾರದ ಮಾಯೆಗೆ ಸೋಲುವುದು ಶಿವಭಕ್ತರಲ್ಲಿ ಸಲ್ಲದ ನಡತೆ. ನೀವೀಗ ಆ ತಪ್ಪುದಾರಿಯಲ್ಲಿ ನಡೆಯುತ್ತಿದ್ದೀರ. ನೀವು ನಾಗತಿಯರು; ಪರಶುರಾಮಪ್ಪ ಕೇವಲ ಪ್ರಧಾನಿಯ ಮಗ; ಆತನಲ್ಲಿ ನಾನು, ನಾಗತಿ ಕ್ಷಮಾಪಣೆ ಕೇಳುವುದೇ ಎಂದು ನಿಮ್ಮ ಮನಸ್ಸು ಅಳುಕುತ್ತಿದೆ ಅಲ್ಲವೇ? ಅದೇ ಅಹಂಕಾರ. ಈ ಅಹಂಕಾರ ಮಮಕಾರಗಳನ್ನು ಮುರಿಯದೆ, ಎಲ್ಲರ ದೇಹವೂ ಶಿವನಿರುವ ದೇವಾಲಯ ಎಂಬ ಅರಿವು ಮೂಡದೆ ನೀವು ಶರಣರಾಗುವುದೆಂತು? ಕಲ್ಯಾಣದ ಪ್ರಧಾನಿಗಳಾಗಿದ್ದ ಬಸವಣ್ಣನವರು ತಪ್ಪಾದಾಗ ಕಿನ್ನರಿ ಬೊಮ್ಮಯ್ಯನ ಪಾದಕ್ಕೆ ಬಿದ್ದು 'ಪ್ರಭೋ ಕ್ಷಮೆ' ಎಂದು ಬೇಡಿದ ದೃಷ್ಟಾಂತ ಮರೆತು ಹೋಯಿತೇ? ಅಣ್ಣನವರು ಮಾಡಿದ ಹಾಗೆ ಮಾಡಲು ನಮಗೆ ನಾಚಿಕೆಯಾಗಬೇಕೇ? ಭಕ್ತಿ ಭಂಡಾರಿ ಅಣ್ಣನವರಿಗಿಂತ ನಾವು ದೊಡ್ಡವರೇ?"

ಅವರ ಮಾತನ್ನು ಕೇಳಕೇಳುತ್ತಾ ನಾಗತಿಗೆ ನಾಚಿಕೆಯಾಗಿ ತನ್ನ ತಪ್ಪು ಮನವರಿಕೆಯಾಯಿತು.

"ಕ್ಷಮಿಸಬೇಕು. ತಮ್ಮ ಅಪ್ಪಣೆಯಂತೆ ಮಾಡುತ್ತೇನೆ. ಏನು ಮಾಡಲಿ" ಎಂದಳು.

"ಅದು ಸರಿಯಾದ ಮಾತು; ಶಿವ ತೃಪ್ತನಾಗುವ ಮಾತು. ಹಾಗೆಂದು ನೀವು ಈಗಲೇ ಹೋಗಿ ಅವರನ್ನು ಕಂಡು ಕಾಲಿಗೆ ಬೀಳಬೇಕು ಎಂದೂ ನಾವು ಹೇಳುವುದಿಲ್ಲ. ಹಾಗೆ ಮಾಡುವುದೇ ಸರಿಯಾದರೂ, ಈಗ ಅದು ಅಗತ್ಯವಿಲ್ಲ. ನಿಜವಾಗಿಯೂ ನಿಮಗೆ ಪಶ್ಚಾತ್ತಾಪವಾಗಿದ್ದರೆ, ಅವರು ನಿಮ್ಮಲ್ಲಿ ಏನನ್ನು ಬೇಡಿ ಬಂದಿದ್ದರೋ ಅದನ್ನು ನಡೆಸಿಕೊಡಿ."

"ಅವರು ಬಂದಾಗ ಏಕೆ ಬಂದರೆಂಬುದನ್ನು ಕೇಳುವಷ್ಟು ತಾಳ್ಮೆಯೂ ಇರಲಿಲ್ಲ. ಈಗ ಅದು ಏನೆಂದು ತಿಳಿಯದೆಯೇ ಹೇಗೆ ನಡೆಸಿಕೊಡಲಿ? ನೀವೇ ತಪ್ಪುತ್ತಿದ್ದ ನನಗೆ ಕಣ್ಣು ಕೊಟ್ಟಿರಿ. ದಾರಿಯನ್ನೂ ನೀವೇ ತೋರಿಸಿ."

"ದಾರಿಯನ್ನೇನೋ ನಾವು ತೋರಿಸಬಲ್ಲೆವು. ಆದರೆ ಆ ದಾರಿ

ಯಲ್ಲಿ ನಡೆಯುವಷ್ಟು ಚಿತ್ತಸ್ಥೈರ್ಯ ನಿಮಗಿದೆಯೇ ಯೋಚಿಸಿ."

"ಶಿವ ಶಿವಾ, ತಮ್ಮ ಮಾತು ಮೀರಿ ನಾನು ನಡೆಯುತ್ತೇನೆಂದು ಅನುಮಾನವೇ?"

"ಅನುಮಾನಕ್ಕೆ ಕಾರಣವಿಲ್ಲವೆಂದರೆ ತುಂಬಾ ಸಂತೋಷ."

"ಅಪ್ಪಣೆ ಕೊಡಿಸಿ ಬುದ್ಧಿ."

"ನೋಡಿ. ಪರಶುರಾಮಪ್ಪನವರು ನಿಮ್ಮ ಬಳಿಗೆ ಬಂದದ್ದು ಸ್ವಾರ್ಥಸಾಧನೆಗಾಗಿಯಲ್ಲ. ತಮ್ಮ ಸುಖಕ್ಕಾಗಿ ಏನನ್ನೂ ಬೇಡಲುಬಯಸಿ ಅವರು ನಿಮ್ಮ ಬಳಿ ಬರಲಿಲ್ಲ. ಅವರು ಬಂದುದು ಯಾವುದರ ಬಗ್ಗೆ ಅವರಿಗಿಂತ ಹೆಚ್ಚಾಗಿ ನೀವು ಆಸಕ್ತಿ ವಹಿಸಬೇಕಾಗಿತ್ತೋ ಅದರ ವಿಷಯದಲ್ಲಿ ಮಾತನಾಡಲು. ಆ ಮಾತಿನಲ್ಲಿ ಅವರಿಗೆ ಸುಖಕ್ಕಿಂತ ಅಪಾಯವೇ ಹೆಚ್ಚು."

"ಏನು ಮಾತು ಅದು?"

"ದುರ್ಗದ ಸಿಂಹಾಸನಕ್ಕೆ ಮುಂದೆ ಯಾರು ಅಧಿಕಾರಿಗಳಾಗ ಬೇಕೆಂಬುದು."

"ಅದಕ್ಕೂ ನನಗೂ ಏನು ಸಂಬಂಧ ಬುದ್ಧಿ?"

"ಏಕೆ? ಸಂಬಂಧವಿಲ್ಲವೇ?"

"ಒಂದು ಕಾಲಕ್ಕೆ ಇತ್ತು. ಅದೆಲ್ಲವೂ ಎಂದೋ ತಪ್ಪಿಹೋಯಿ ತಲ್ಲ."

"ಅದೇ ತಪ್ಪುದಾರಿ ಎನ್ನುವುದು. ಈ ಸಂಬಂಧವೆಂದರೇನು ಎರಡು ಕಟ್ಟಿಗೆ ಜೋಡಿಸಿ, ಬೇಡವಾದಾಗ ಅವೆರಡನ್ನೂ ಬೇರೆ ಮಾಡಿ ಒಗೆಯು ವಂತಹುದೆ? ಯೋಚಿಸಿ. ಸಿಟ್ಟಿಗೆ, ಅಸಮಾಧಾನದ ಕೈಗೆ ಬುದ್ಧಿ ಕೊಡುವುದು ಬಹು ಸುಲಭ. ಇಳಿಜಾರಿನಲ್ಲಿ ನೀರು ಹರಿಯಬಿಟ್ಟಂತೆ."

"ನಿನಗೆ ಸಿಟ್ಟೂ ಇಲ್ಲ, ಅಸಮಾಧಾನವೂ ಇಲ್ಲ."

"ಇಲ್ಲ ಎನ್ನುತ್ತೀರ. ಆ ಮಾತಾಡುವಲ್ಲೇ ಅದು ನಾನು ಇದ್ದೇನೆ ಎಂದು ಹೇಳುತ್ತಿದೆ. ನಿಮ್ಮ ವಿಷಯದಲ್ಲಿ ನಾಯಕರು ಹೇಗೆ ನಡೆದು ಕೊಳ್ಳಬೇಕಾಗಿತ್ತೋ ಹಾಗೆ ನಡೆದುಕೊಳ್ಳಲಿಲ್ಲ. ಅವರ ತಾಳಕ್ಕೆ ನೀವು ಹೆಜ್ಜೆ ಹಾಕಲಿಲ್ಲ ಎಂದು ನಿಮ್ಮನ್ನು ದೂರಮಾಡಿದರು. ಬೇಕಾದರೆ

ಅದು ತಪ್ಪು ಎಂದೇ ಎನ್ನಿ. ಹಾಗೆಂದು, ನೀವೂ ಅವರ ಹಾಗೇ ನಡೆದು, ತಪ್ಪು ಮಾಡಿದರೆ, ಆಗಾದ ತಪ್ಪನ್ನು ಸರಿಪಡಿಸಿದಂತಾಯಿತೇ ? ತಪ್ಪಿಗೆ ಪ್ರತಿ ತಪ್ಪು ಔಷಧವಲ್ಲ. ಆ ಬುದ್ಧಿ ಸರಿಯಲ್ಲ. ಅವಿನಯುನದ ಇದಿರು ವಿನಯು, ಕೋಪದ ಇದಿರು ಪ್ರೀತಿ, ದ್ವೇಷದ ಇದಿರು ಸ್ನೇಹ, ತಪ್ಪಿನ ಇದಿರು ನ್ಯಾಯ—ಇರಬೇಕಾದುದು ನೀನಲ್ಲ, ನಾನು ಎಂದು ಹೇಳಿ ತಲೆ ಎತ್ತಿ ನಿಲ್ಲಬೇಕು. ಹಾಗಾದಾಗ ಎಲ್ಲಾ ಸರಿಹೋಗುತ್ತದೆ. ಇಲ್ಲದೆ, ಇಬ್ಬರೂ ಒಂದೇ ರೀತಿ ನಡೆದಲ್ಲಿ ಇಬ್ಬರಿಗೂ ಬೆಲೆ ಹೋಗುತ್ತದೆ. ಹಾಗಾಗಬಾರದೆಂದೇ ನಾನು ಹೇಳುತ್ತಿರುವುದು. ನಾಯಕರಿಗೆ ನೀವು ಬೇಕಾಗಲಿಲ್ಲ—ಹಾಗೆನ್ನುವುದೂ ಸರಿಯಲ್ಲ–ಆದರೂ, ಹಾಗಿತ್ತು ಎಂದೇ ಅಂದುಕೊಂಡರೂ, ನೀವು ನಾಗತಿಯುರಾದುದನ್ನು ಮರೆತು ನಡೆಯು ಬಾರದು. ಒಂದುವೇಳೆ ಈಗ ಸಿಂಹಾಸನದ ವಿಷಯದಲ್ಲಿ ಏನಾದರೂ ರಾದ್ಧಾಂತವಾದರೆ; ಆ ಅಪಕೀರ್ತಿ ಬರುವುದು ನಿಮಗೆ; ಕೈಲಾಸವಾಸಿ ಗಳಾದ ನಾಯಕರಿಗಲ್ಲ. ಅದುದರಿಂದ ನೀವು ಮಾಡಬೇಕಾದ ಕರ್ತವ್ಯ ಮಾಡಬೇಕು. ಅದನ್ನು ಹೇಳಲೆಂದೇ ಪರಶುರಾಮುಪ್ಪನವರು ಬಂದದ್ದು."

ಏನು ಮಾಡಬೇಕು ಅಪ್ಪಣೆ ಕೊಡಿಸಿ ಬುದ್ದಿ"

"ಇಷ್ಟೆ" ಎಂದು ಗುರುಗಳು, ಪರಶುರಾಮುಪ್ಪನವರು ತಮಗೆ ತಿಳಿ ಸಿದ್ದ ರಾಜಕೀಯುವನ್ನೆಲ್ಲಾ ನಾಗತಿಗೆ ವಿವರಿಸಿ—"ಈಗ ನೀವು ಪ್ರಧಾನಿ ಪಟ್ಟದ ಅಧಿಕಾರ ನಡೆಸುತ್ತಿರುವ ದಳವಾಯಿ ಮುದ್ದಣ್ಣನವರನ್ನು ಕರೆಸಿ 'ಬೇಗ ಈ ಸಿಂಹಾಸನಾಧಿಕಾರದ ಪ್ರಶ್ನೆ ಇತ್ಯರ್ಥಮಾಡಿ. ನಾಯಕರ ಬಳಿಕ ಇಂಥವರು ಪಟ್ಟಕ್ಕೆ ಬರುವುದು ಒಳಿತು' ಎಂದು ಹೇಳಬೇಕು."

"ಏನು? ನಾನು....ದಳವಾಯಿ ಮುದ್ದಣ್ಣನಿಗೆ ಹೇಳುವುದೇ?"

—ಆ ಮಾತು ಕೇಳಿಯೇ ಗಾಬರಿಯಾಗಿ ಕೇಳಿದಳು ನಾಗತಿ.

"ಏಕೆ? ನೀವೇ ಹೇಳಲು ಏನು ಅಡ್ಡಿ ?"

"ಯಾರಿಗಾದರೂ ಹೇಳಬಹುದು. ಆದರೆ ದಳವಾಯಿ ಮುದ್ದಣ್ಣ ನಿಗೆ ಹೇಳುವುದು ಮಾತ್ರ ನನ್ನಿಂದ ಆಗದು."

"ಏಕೆ ?"

"ಮುದ್ದಣ್ಣ ಎಂಥವನೆಂದು ನೀವು ಕಾಣಿರಿ ಬುದ್ದಿ. ಆತ

ಮನುಷ್ಯನಲ್ಲ, ಪಿಶಾಚಿ. ಬೇಕೆಂದರೆ ಯಾರ ತಲೆ ತೆಗೆಯಲೂ ಹೇಸುವವನಲ್ಲ. ಹಿಂದಾದದ್ದು ನೀವು ಕೇಳಿಲ್ಲವೇ? ತುಂಬಿದೋಲಗದಲ್ಲೇ ಓಬಣ್ಣ ನಾಯಕರ ತಲೆ ಕತ್ತರಿಸಿದ ನರರಾಕ್ಷಸ ಆತ.'

"ಅಂದರೆ........"

—ನಾಗತಿಯ ಮಾತು ಅರ್ಥವಾಗದವರಂತೆ ಕೇಳಿದರು ಗುರುಗಳು.

"ಇಷ್ಟೇ. ಇಷ್ಟುದಿನ ಸುಮ್ಮನಿರುವುದರಲ್ಲಿ ಆತನಿಗೆ ಏನು ಉದ್ದೇಶವಿದೆಯೋ? ನಾವೇ ಏಕೆ ಅವನನ್ನು ಮಾತನಾಡಿಸಿ ಹುತ್ತದಲ್ಲಿರುವ ಹಾವನ್ನು ಕೆಣಕಬೇಕು."

"ಮುದ್ದಣ್ಣ ಅಂದರೆ ಅಷ್ಟು ಹೆದರಿಕೆಯೋ ನಿಮಗೆ?"

—ಆ ಪ್ರಶ್ನೆಯ ಹಿಂದಿನ ಮನೋಭಾವನೆ ಅರ್ಥವಾಗದ ಧ್ವನಿಯಲ್ಲಿ ಕೇಳಿದರು ಸ್ವಾಮಿಗಳು.

"ನಿಜ."

"ಈ ಮಾತು ನಿಮ್ಮ ಬಾಯಿಂದ ಬರಬಹುದು ಎಂದು ನಮಗೆಂದೂ ಅನಿಸಿರಲಿಲ್ಲ. ಇದು ನೀವು ಆಡುವಂಥ ಮಾತಲ್ಲ."

"ಹುಲಿಯನ್ನು ಕಂಡರೆ ಹೆದರಿಕೆ ಎನ್ನುವುದೂ ತಪ್ಪೇ?"

"ಕೆಲಸಂದರ್ಭಗಳಲ್ಲಿ ತಪ್ಪಾಗಲಾಗದು. ಆದರೆ ಈಗ........"

"ಈ ಸಂದರ್ಭದಲ್ಲಿ ತಪ್ಪೇ?"

"ತಪ್ಪು. ದುಷ್ಟನನ್ನು ಕಂಡರೆ ದೂರ ಇರು ಎನ್ನುವ ಗಾದೆ ಎಲ್ಲ ಕಾಲದಲ್ಲೂ ಸತ್ಯವಲ್ಲ."

"ಹೇಗೆ?"

"ಕೊಳೆಯನ್ನು ತೆಗೆಯಲು ಬಂದಕೈ 'ಅಯ್ಯೋ, ಕೊಳೆ ಸೋಕುತ್ತದೆಯಲ್ಲಾ' ಎಂದು ಹೆದರಿ ನಿಂತರೆ ಕೊಳೆ ದೂರ ತೆಗೆಯಲು ಸಾಧ್ಯವೇ? ಹಾಗೇ ದುಷ್ಟರನ್ನು ದಾರಿಗೆ ತರಬೇಕು ಎಂದಾಗ ದುಷ್ಟರ ಬಳಿಸಾರಬೇಕು. ಅವರನ್ನು ಋಜುಮಾರ್ಗಕ್ಕೆ ತರಬೇಕು, ಇಲ್ಲವೇ ಅವರು ಪ್ರಬಲಿಸಿ, ಲೋಕಕಂಟಕರಾಗುವುದನ್ನು ತಲೆಯೊಪ್ಪಿಸಿಯಾದರೂ ತಡೆಯಬೇಕಾದುದು ಶರಣನ ಕರ್ತವ್ಯ. ಕಲ್ಯಾಣದ ಕ್ರಾಂತಿಯ ಕಥೆ ನಿಮಗೆ ಮರೆತು ಹೋಯಿತೇ? ಏಳಿ. ಈ ಹೆದರಿಕೆಯನ್ನು ಬಿಡಿ. ಶಿವಾರ್ಪಣವೆಂದು

ಕೊಂಡ ಜೀವಕ್ಕೆ ಹೆದರಿಕೆ ಶೋಭಿಸುವುದಿಲ್ಲ. ಹೇಡಿತನ, ಜಡತೆ ನಾವು ಒಪ್ಪಿದ ಧರ್ಮದ ಬಿರುದುಗಳಲ್ಲ. "ಛಲವಿರಬೇಕು ಶರಣಂಗೆ" ಎಂದ ಅಣ್ಣನವರ ಮಾತನ್ನು ಜ್ಞಾಪಿಸಿಕೊಳ್ಳಿ. ಮುದ್ದಣ್ಣನವರನ್ನು ಕರೆಸಿ, ಹೀಗಾಗಬೇಕು. ಎಂದು ಹೇಳಿ."

"ಒಂದು ವೇಳೆ ಆತ ಇದಕ್ಕೆ ಒಪ್ಪದೆ ಹೋದರೆ...."

"ಒಪ್ಪದೆ ಹೋದರೆ,- ಆಮೇಲೆ ಮುಂದಿನ ಮಾತು. ಈಗಲೇ ಹೀಗಾಗಬಹುದು ಎಂದು ಊಹಿಸಿ ನೆರಳಿನೊಂದಿಗೆ ಕುಸ್ತಿಮಾಡುವುದೇಕೆ?

"ನೀವು ಏನೇ ಹೇಳಿ ನನಗಂತೂ ಭಯವೇ. ಆದರೂ ನಿಮ್ಮ ಮಾತಿಗೆ ಇಲ್ಲವೆನ್ನಲಾರೆ. ತಾವು ಆತನಿಗೆ ಹೇಳಬೇಕು ಎಂಬುದನ್ನು ಹೇಳಲು ಸಿದ್ಧನಿದ್ದೇನೆ. ಆದರೆ ಆ ಮಾತುಕತೆ ತಮ್ಮ ಸನ್ನಿಧಾನದಲ್ಲೇ ನಡೆದರೆ ಒಳಿತು."

—ನಿರ್ಧಾರ ಅನಿರ್ಧಾರಗಳ ನಡುವೆ ತೂಗುಯ್ಯಾಲೆಯಾಡುತ್ತಾ ಹೇಳಿದಳು ನಾಗತಿ.

ಆಕೆಯ ಮಾತನ್ನು ಕೇಳಿ ಗುರುಗಳು ಒಂದುಗಳಿಗೆ ಸುಮ್ಮನಿದ್ದು, ಏನೋ ಯೋಚಿಸಿ ಬಳಿಕ ಹೇಳಿದರು.

"ಆಯಿತು. ಶಿವನ ಶಿಚ್ಛೆ ಇದ್ದಂತಾಗಲಿ."

"ಇಷ್ಟಾದರೂ....ನನಗೇನೋ ಇನ್ನೂ ಗಾಬರಿಯೇ. ಈ ಕರ್ಮ ನಮ್ಮನ್ನು ಸುತ್ತಿಕೊಳ್ಳದಿದ್ದರೇ ಚೆನ್ನಾಗಿತ್ತೇನೋ ಎನಿಸುತ್ತದೆ."

"ಏಕೆ?"

ಒಮ್ಮೆ ಒಂದು ಬಗೆಯ ನಿರ್ಧಾರಕ್ಕೆ ಬಂದಮೇಲೂ ಇನ್ನು ಆಕೆ ತುಯ್ದಾಡುತ್ತಿರುವುದನ್ನು ನೋಡಿ, ಕೇಳಿದರು ಗುರುಗಳು.

"ಇವತ್ತು ಮಧ್ಯಾಹ್ನ ಒಂದು ಕನಸು ಬಿದ್ದಿತ್ತು."

—ಎಂದು ನಾಗತಿ ತನಗಾದ ಭಯಂಕರ ಕನಸನ್ನು ವಿವರಿಸಿ—

"ಈಗಲೂ ಅದನ್ನು ನೆನೆದುಕೊಂಡರೆ ನನಗೆ ದಿಗಿಲಾಗುತ್ತದೆ. ಅದು ಮುಂದೆ ಆಗಬಹುದಾದುವಕ್ಕೆ ಸೂಚನೆಯೋ ಏನೋ ಎಂದು."

ನಾಗತಿ ಹೇಳಿದ ಮಾತನ್ನು ಗುರುಗಳು ಕಣ್ಣುಮುಚ್ಚಿ ಕೇಳಿದರು.

ಅವರು ತನ್ನ ಮಾತು ಕೇಳಿ ಸುಮ್ಮನೆ ಕುಳಿತುದನ್ನು ಕಂಡು ನಾಗತಿಯೂ ಅವರ ಮೊಗವನ್ನೇ ನೋಡುತ್ತಾ ಮುಂದೆ ಮಾತನಾಡದೆ ಕುಳಿತಳು. ಕೊಂಚಹೊತ್ತು ಬಿಟ್ಟುಕೊಂಡು ಬಳಿಕ, ಅಸ್ತಮಯ ಸೂರ್ಯನ ಕೆಂಬೆಳಕು ಚೆಲ್ಲಿದ ಮುಗಿಲನ್ನು ನೋಡುತ್ತಾ ಹೇಳಿದರು—

"ಏನಾಗಬೇಕೆಂದು ವಿಧಿಲಿಖಿತವೋ ಅದನ್ನು ತಪ್ಪಿಸಲು ಸಾಧ್ಯವೇ? ನೀರಿನಲ್ಲಿ ಬಿದ್ದ ಸಕ್ಕರೆಯ ಗೊಂಬೆ ಕರಗುವುದಿಲ್ಲ ಎಂದರೆ ಕೇಳುವರು ಯಾರು? ಆಗುವುದಾಗಲಿ—ಬಂದದ್ದೆಲ್ಲಾ ಶಿವಾನುಗ್ರಹ ಎಂದು ಕೊಳ್ಳೋಣ."

ಎಂದರು, ಗಂಭೀರ ಸ್ವರದಲ್ಲಿ.

ಆ ವೇಳೆಗೆ ಪ್ರದೋಷಕಾಲದ ಪೂಜಾವೇಳೆಯಾಯಿತೆಂದು ಸೂಚಿಸುವ ಭೇರಿಯ ಧ್ವನಿ ಮೊಳಗಿದುದನ್ನು ಕೇಳಿ, ಗುರುಗಳು ಮೇಲೆದ್ದು, ಮಾತನ್ನು ಮುಗಿಸುತ್ತಾ—

"ಆಯಿತು, ಮುದ್ದಣ್ಣನವರಿಗೂ ಪರಶುರಾಮಪ್ಪನವರಿಗೂ ಹೇಳಿ ಕಳಿಸಿ, ಇರುವ ಮಾತನ್ನು ಹೇಳೋಣ. ಮುಂದಿನದು ಶಿವಚಿತ್ತ."

—ಎಂದು ಕಾಲಿಗೆರಗಿದ ನಾಗತಿಯನ್ನು ಆಶೀರ್ವದಿಸಿ, ನಿಧಾನವಾಗಿ ಹೆಜ್ಜೆಹಾಕುತ್ತಾ ಮಠದತ್ತ ನಡೆದರು. ನಡೆಯುವಾಗ ಬಾಗಿದ ಅವರ ಬೆನ್ನಿನಮೇಲೆ, ಲೋಕದ ಭಾರವೇ ಕುಳಿತಿದ್ದಂತೆ ಭಾಸವಾಯಿತು, ಅವರು ಹೋಗುವುದನ್ನೇ ದಿಟ್ಟಿಸಿ ನೋಡುತ್ತಾ ನಿಂತಿದ್ದ ನಾಗತಿಗೆ.

## ೭

ಮಠದ ಸಭಾಗೃಹದ ವಿಶಾಲವಾದ ಮಂದಿರದಲ್ಲಿ ಸ್ವಾಮಿಗಳ ಸಲಹೆಯಂತೆ ಆಲೋಚನಾ ಸಭೆ ನೆರದಿತ್ತು. ಸ್ವಾಮಿಗಳ ಪೀಠದ ಬಲಬದಿಯಲ್ಲಿ ಕೊಂಚ ದೂರವಾಗಿ ಇರಿಸಿದ ಪೀಠದ ಮೇಲೆ ನಾಗತಿ ಅವಗುಂಠನವತಿಯಾಗಿ ಕುಳಿತಿದ್ದಳು. ಎಡಭಾಗದ ಗೋಡೆಗೆ ಹೊಂದಿದಂತೆ ಇರಿಸಿದ ಮೂರು ಪೀಠಗಳಲ್ಲಿ ಎರಡರ ಮೇಲೆ, ಪರಶುರಾಮಪ್ಪ, ದಳವಾಯಿ ಭರಮಣ್ಣ ಕುಳಿತು, ದಳವಾಯಿ ಮುದ್ದಣ್ಣ ಬರುವುದನ್ನೇ

ಕಾಯುತ್ತಿದ್ದರು. ಸ್ವಾಮಿಗಳು ಇನ್ನೂ ಸಭಾಗೃಹಕ್ಕೆ ಬರದೆ, ಅವರಿಬ್ಬರೂ ಬರುವುದನ್ನು ಕಾಯುತ್ತಾ, ಮಾತನಾಡದೆ ಕುಳಿತ ಮೂವರ ಮೊಗದಲ್ಲೂ ಮೂರು ಬಗೆಯ ಚಿಂತೆ ಮನೆ ಮಾಡಿಕೊಂಡಿತ್ತು. ಅವರು ಒಮ್ಮೆ ಸ್ವಾಮಿಗಳ ಏಕಾಂತ ಗೃಹದ ಬಾಗಿಲಿನತ್ತ, ಮತ್ತೊಮ್ಮೆ ಸಭಾ ಗೃಹದ ಹೊರಬಾಗಿಲಿನತ್ತ ಕಣ್ಣು ಹೊರಳಿಸುತ್ತಾ ಕುಳಿತಿದ್ದರು. ಬದಿಯ ಬಯಲಂಕಣದಿಂದ ಹರಿದ ಬಿಸಿಲಿನಿಂದ ಸಭಾಗೃಹದಲ್ಲಿ ಸಾಕಷ್ಟು ಬೆಳಕು ತುಂಬಿದ್ದರೂ, ಚಿಂತೆ ಕವಿದ ಅವರ ಕಣ್ಣುಗಳು ಮಾತ್ರ ಸುತ್ತಲೂ ಏನೋ ಒಂದು ಬಗೆಯ ಮಂಕು ಕವಿದಂತೆಯೇ ಇತ್ತು. ತಾವು ಬಹು ದಿನದಿಂದ ಬಯಸಿದ ಕೆಲಸ ಬೇಗ ಮುಗಿದು ಹೋಗಲೆಂಬ ಆತುರದಿಂದ, ಪರಶುರಾಪುಪ್ಪ, ಭರಮಣ್ಣ, ಗೊತ್ತುಮಾಡಿದ ಹೊತ್ತಿಗಿಂತ ಕೊಂಚ ಮುಂಚಿತವಾಗಿಯೇ ಬಂದಿದ್ದರು. ಎಲ್ಲರೂ ಕಲೆತು ಮಾತನಾಡಿ, ಒಂದು ಇತ್ಯರ್ಥಕ್ಕೆ ಬರುವ ಹೊತ್ತು ಎಷ್ಟು ಬೇಗ ಬರುವುದೋ ಎಂಬ ಆತುರ ಅವರಲ್ಲಿ ಕುದಿಯುತ್ತಿತ್ತು. ಮನದ ಮಾತನ್ನು ಹೊರಗೆಡಹಲು ಅವರ ನಾಲಗೆ ತವಕಗೊಂಡಿತ್ತಾದರೂ, ಅದಕ್ಕೆ ಅವಕಾಶವಿಲ್ಲದೆ, ಆ ಮಾತಲ್ಲದೆ ಬೇರೆ ಮಾತನಾಡಲು ತೋಚದೆ, ಸುಮ್ಮನೆ ಒಬ್ಬರ ಮೊಗವನ್ನೊಬ್ಬರು ನೋಡುತ್ತಾ, ಮುದ್ದಣ್ಣ ಬರುವುದನ್ನೇ ಕಾಯುತ್ತಿದ್ದರು. ಕಾಯುವಿಕೆಯ ಕಾತುರದಿಂದ ಬಿಗಿದ ಮೌನ ತುಂಬಿದ ವಾತಾವರಣ, ಬೇಟೆಗೆ ಬಲಿಯಾಗಲು ಬರುವ ಕಾಡು ಪಶುವನ್ನು ಕಾಯುತ್ತಾ ಬೇಟೆಗಾರರು ಸದ್ದು ಮಾಡದೆ ಉಸಿರು ಬಿಗಿಹಿಡಿದು ಕುಳಿತ ಮರಸಿನ ವಾತಾವರಣದಂತಿತ್ತು.

ಅವರು ಹೀಗೆ ಕಾಯುತ್ತಾ ಕುಳಿತಿದ್ದಾಗಲೆ, ಗೊತ್ತುಮಾಡಿದ ಹೊತ್ತಿಗೆ ಸರಿಯಾಗಿ ಸ್ವಾಮಿಗಳು ಏಕಾಂತ ಗೃಹದಿಂದ ಹೊರಬಂದು, ಕುಳಿತಲ್ಲಿಯೇ ಸಾಷ್ಟಾಂಗ ಪ್ರಣಾಮ ಮಾಡಿದ ಮೂವರನ್ನೂ ಹರಸಿ, ಪೀಠದ ಮೇಲೆ ಮಂಡಿಸಿ:

"ದಳವಾಯಿ ಮುದ್ದಣ್ಣನವರೊಬ್ಬರು ಬಂದರೆ, ಅಲ್ಲಿಗೆ ಬರಬೇಕಾದವರೆಲ್ಲರೂ ಬಂದಹಾಗಾಗುತ್ತದೆ" ಎಂದರು.

"ಇಷ್ಟುಹೊತ್ತಿಗೆ ಅವರೂ ಬರಬೇಕಾಗಿತ್ತು. ಏಕೋ ತಡವಾಗಿದೆ."

—ಎಂದ ಪರಶುರಾಮಪ್ಪ.

ತಡವೆಲ್ಲಿ ಬಂತು? ಈಗ ಬರಬೇಕಾದ ಹೊತ್ತು. ನಿಮ್ಮ ಆತುರದಲ್ಲಿ ಹೊತ್ತೂ ಬೇಗ ಓಡುವಂತೆ ಕಾಣುತ್ತದೆಯಲ್ಲವೇ?"

ತಮ್ಮ ಮಾತು ಕೇಳಿ ಹೊರಬಾಗಿಲ ಕಡೆಯೇ ದಿಟ್ಟಿಸುತ್ತಿದ್ದ ಭರಮಣ್ಣನತ್ತ ಮಂದಹಾಸ ತುಂಬಿದ ಮೊಗದಿಂದ ನೋಡುತ್ತಾ ಕೇಳಿದರು ಸ್ವಾಮಿಗಳು.

"ನಿಜ ಬುದ್ಧಿ. ತಮ್ಮ ಮಾತು ಅಲ್ಲವೆನ್ನುವುದಿಲ್ಲ. ಆದಷ್ಟು ಬೇಗ, ಇದು ಶುಭವಾಗಿ ಮುಗಿದು ಹೋದರೆ ಸಾಕು ಎಂಬ ಆತುರ ನಮಗಿದೆ." ಎಂದ ಭರಮಣ್ಣ.

ಅಷ್ಟು ಆತುರ ಪಡಬಾರದು ದಳವಾಯಿಗಳೇ. ಯಾವ ಕೆಲಸ ಯಾವ ಹೊತ್ತಿನಲ್ಲಿ ಆಗಬೇಕೆಂದು ಶಿವನಿಷ್ಟ ಇರುವುದೋ ಆಗ ಆಗಿಯೇ ಆಗುತ್ತದೆ. ಆತುರ ಪಟ್ಟರೆ ಆಗುವುದು ಅರೆವಾಸಿ ಕೆಲಸ."

ಗುರುಗಳು ಈ ಮಾತು ಹೇಳುತ್ತಿರುವಾಗಲೇ, ಹೊರ ಬಾಗಿಲಿನಿಂದ ಮಠದ ಶಿಷ್ಯನೊಬ್ಬ ಒಳಬಂದು ಗುರುಗಳಿಗೆ ನಮಸ್ಕರಿಸಿ,—

ದಳವಾಯಿಗಳು ಬರುತ್ತಿದ್ದಾರೆ."

ಎಂದು ಹೇಳಿದ. ಆ ಮಾತು ಕೇಳುತ್ತಿದ್ದ ಹಾಗೆ, ಗುರುಗಳ ಮಾತಿಗೆ ಉತ್ತರವಾಗಿ ಹೇಳಲೆಂದು ಭರಮಣ್ಣನ ನಾಲಗೆಯ ತುದಿಯವರೆಗೂ ಬಂದ ಮಾತು ಅಲ್ಲಿಯೇ ನಿಂತು, ಕಣ್ಣು ಹೊರಬಾಗಿಲ ಕಡೆ ಹೊರಳಿ ನಿಂತಿತು. ಉಳಿದವರೂ ಅತ್ತ ಕಡೆಯೇ ನೋಡುತ್ತಿದ್ದರು.

ಎಲ್ಲರ ಕಣ್ಣೂ ಹೊರಬಾಗಿಲತ್ತ ಕೀಲಿಸಿರುವಾಗಲೇ, ಎದೆಯ ಮೇಲೆ ದಳವಾಯಿಗಳ ಲಾಂಛನದ ಹೊಳೆವ ಹಿತ್ತಾಳೆಯ ಬಿಲ್ಲೆ, ಕೆಂಪು ಬಟ್ಟೆಯ ಅಂಗಿ, ಬಿಳಿಯ ರುಮಾಲು, ಕೈಯಲ್ಲಿ ಬೆಳ್ಳಿಯ ಕಟ್ಟಿಗೆಗಳನ್ನು ಧರಿಸದ ಇಬ್ಬರು ಸೈನಿಕರು ಒಳ ಬಂದು ಬಾಗಿಲ ಇಬ್ಬದಿಯಲ್ಲಿ ನಿಂತರು. ಅವರ ಹಿಂದೆ ಮತ್ತಿಬ್ಬರು ಒಂದೇ ಬಗೆಯ ಉಡುಗೆಯನ್ನುಟ್ಟ ದಾಸಿಯರು ಪ್ರವೇಶಿಸಿ, ಕಲಾಪತ್ತಿನ ಬಟ್ಟೆ ಹೊದಿಸಿದ ಎರಡು ದೊಡ್ಡ ಬೆಳ್ಳಿಯ ಹರಿವಾಣಗಳನ್ನು ಗುರುಗಳ ಮುಂದೆ ಇಟ್ಟು ನಮಸ್ಕರಿಸಿ ಹಿಂದು ಹಿಂದಾಗಿಯೇ, ಗುರುಗಳಿಗೆ ಬೆನ್ನು ತೋರಿಸದಂತೆ ನಡೆದು, ಬಾಗಿಲನ್ನು

ದಾಟ ಮರೆಯಾದರು; ಅವರ ಹಿಂದೆ ಫಲಪುಷ್ಪಗಳ ತಟ್ಟೆಗಳನ್ನು ತಂದ ಮತ್ತಿಬ್ಬರು ದಾಸಿಯರು ಬಂದು ಮರಳಿದರು.

ಅವರು ಕಣ್ಣು ಮರೆಯಾಗುತ್ತಿದ್ದ ಹಾಗೆಯೇ, ಹೊರಬಾಗಿಲಿ ನಾಚೆಯಿಂದ 'ಚಂಡಪ್ರಚಂಡ ರಣ ಮಾರ್ತಾಂಡ, ಮನ್ನೆಯರ ಗಂಡ, ಮುಕ್ಕಣ್ಣ ಭಲ್ಲೆಯಂದ ಮೊದೆಗಾರ, ಖಾನ ಖಾನರ ಗಂಡ ಗಂಡುಗಲಿ ವೀರ ದಳವಾಯಿ ಮುದ್ದಣ್ಣ ಅರಿ ಹೃದಯ ದಲ್ಲಣ ಪರಾಕ್' ಎಂಬ ಭಟರಾಜಗಳ ಪರಾಕು ಹೇಳುವ ಧ್ವನಿ ಕೇಳಿ ಬಂದು ಮುದ್ದಣ್ಣ ಹತ್ತಿರ ಬಂದನೆಂಬುದನ್ನು ಸೂಚಿಸಿತು. ಆ ಧ್ವನಿಯನ್ನೇ ಬೆನ್ನಟ್ಟ ಬಂದವನಂತೆ ಮುದ್ದಣ್ಣ ಒಳಗೆ ಪ್ರವೇಶಿಸಿದ.

ತನ್ನ ಬರವನ್ನೇ ಕಾದು ಕುಳಿತವರ ಕಣ್ಣನ್ನು ಕೋರೈಸಲೆಂದೇ ತೊಟ್ಟಂತ್ತಿತ್ತು ಮುದ್ದಣ್ಣನ ಉಡುಪಿನ ವೈಖರಿ. ಜರತಾರಿಯ ಹೊ ಗೆಲಸದ ಅಂಗರೇಖಿನ ಮೇಲೆ ಇಳಿಬಿದ್ದ ಅಂಗೈ ಅಗಲದ ಪಚ್ಚೆಯ ಪದ ಕದ ಆರು ಎಳೆಯ ಮುತ್ತಿನ ಹಾರ, ಮುಂಗೈಯ ರತ್ನ ಕಂಕಣ, ವಜ್ರ ಖಚಿತವಾದ ತೋಳಬಂದಿ, ಸೊಂಟಕ್ಕೆ ಬಿಗಿದ ಮಣಿ ಮೌಕ್ತಿಕ ಮಯ ವಾದ ಸೊಂಟಪಟ್ಟಿ, ಎಡಗೈಯ ಬಳಿ ಜೋತುಬಿದ್ದ ಚಿನ್ನದ ಮೆರುಗಿನ ಒರೆಯಲ್ಲಿಟ್ಟ ವಜ್ರಗೆಲಸದ ಹಿಡಿಯ ಕತ್ತಿ, ಬಲಬದಿಯಲ್ಲಿ ಸಿಕ್ಕಿಸಿ, ಥಳಥಳಿಸುವ ಕರ್ನಾಟಕ ಬಾಕು, ತಲೆಯ ಮೇಲಿನ ಬೂಟಾದಾರಿ ಕೆಲಸ ಮಾಡಿದ ರೇಶಿಮೆಯ ತುರಾಯಿ ಸಿಕ್ಕಿಸಿದ ಪಾಗು, ತೀಡಿ ನಿಲ್ಲಿಸಿದ ಗಲ್ಲಿ ಮೀಸೆ, ಹಣೆಯ ಮೇಲಿನ ಅಗಲವಾದ ಕುಂಕುಮ—ಇವು ಎಲ್ಲರ ಕಣ್ಣನ್ನು ತಮ್ಮತ್ತಲೇ ಸೆಳೆದವು

ಒಳಗೆ ಕಾಲಿಡುತ್ತಿದ್ದ ಹಾಗೇ ಮುದ್ದಣ್ಣ ಹುಬ್ಬು ಗಂಟು ಹಾಕಿ, ಕಿಗ್ಗಣ್ಣುಗಳನ್ನು ಅರಳಿಸಿ, ಒಂದು ನೋಟದಲ್ಲಿ ಎಲ್ಲರನ್ನೂ ನೋಡಿ, ಜಗ್ಗು ಹಾಕುತ್ತಾ ಠೀವಿಯಿಂದ ನಡೆದು ಬಂದು, ಮಂಡಿಯೂರಿ ಗುರುಗಳಿಗೆ ನಮಸ್ಕರಿಸಿ, ಅವರು ಆಶೀರ್ವದಿಸಿದ ಬಳಿಕ ಎದ್ದು ನಿಂತು, ತಾನು ಕುಳಿತು ಕೊಳ್ಳಲು ಗುರುಗಳು ತೋರಿದ ಪೀಠದತ್ತ 'ಅದು ತನಗೆ ಯೋಗ್ಯವಾದು ದಲ್ಲ' ಎಂಬುದನ್ನು ಮುಖಮುದ್ರೆಯಿಂದಲೇ ಸೂಚಿಸಿ, ಮಡಿಯುಟ್ಟ ವರು ಬರಿ ನೆಲದ ಮೇಲೆ ಕುಳಿತುಕೊಳ್ಳಲೇಬೇಕಾಗಿ ಬಂದಾಗ ಕುಳಿತು

ಕೊಳ್ಳುವಂತೆ ಏನೋ ಒಂದು ಬಗೆಯ ಸಂಕೋಚದಿಂದ ಕುಳಿತುಕೊಂಡು-

"ಪಾದಕಾಣಿಕೆಯನ್ನು ಒಪ್ಪಿಸಿಕೊಳ್ಳಬೇಕು"

—ಎಂದ, ಅಸಮಾಧಾನದಿಂದ ಬಿಗಿದ ಧ್ವನಿಯಲ್ಲಿ, ಕುಳಿತಿದ್ದ ಹಾಗೆಯೇ ಬೆರಳತುದಿಯಿಂದ ದಾಸಿಯರು ತಂದಿಟ್ಟ ಹರಿವಾಣದ ಮೇಲಿನ ಮುಸುಕನ್ನು ಸರಿಸಿ.

ಮುದ್ದಣ್ಣ ಸಭಾಭವನದಲ್ಲಿ ಕಾಲಿಟ್ಟಗಳಿಗೆಯಿಂದಲೇ, ಮೊಗದ ಮೇಲೆ ಯಾವ ಭಾವವಿಕಾರವನ್ನೂ ತೋರಿಸದೆ, ಅವನ ನಡತೆಯನ್ನು ಚುರುಕಾದ ಕಣ್ಣುಗಳಿಂದ ಈಕ್ಷಿಸುತ್ತಿದ್ದ ಗುರುಗಳು, ಅವನ ಮಾತನ್ನು ಕೇಳಿ, ಮುಖದಲ್ಲಿ, ಧ್ವನಿಯಲ್ಲಿ ಆಶ್ಚರ್ಯವನ್ನು ವ್ಯಕ್ತಮಾಡಿ—

"ಇವೆಲ್ಲವೂ ನಮಗೇ?"

ಎಂದು ಕೇಳಿದರು.

"ನಿಜ. ಇವು ರಾಜಗುರುಗಳಿಗೆ ಉಚಿತವಾದ ಕಾಣಿಕೆಗಳಲ್ಲ, ಆದರೂ ಬಡವನ ಕಾಣಿಕೆಯನ್ನು ಒಪ್ಪಿಸಿಕೊಂಡು ಅನುಗ್ರಹಿಸಬೇಕು"

—ಎಂದ ಮುದ್ದಣ್ಣ, ಆ ಮಾತು ಹೇಳಲು ಅನಗತ್ಯವಾದ ಠೀವಿಯಿಂದ.

"ಬಡಜಂಗಮರಿಗೆ ಈ ರಾಜೋಚಿತವಾದ ಉಡುಗೊರೆಗಳೇಕೆ ದಳವಾಯಿಗಳೇ? ಬಡವನಿಗೆ ಆನೆಯನ್ನು ದಾನಕೊಟ್ಟ ಹಾಗೆ ಮಾಡುತ್ತಿದ್ದೀರಿ. ಇದೆಲ್ಲಾ ಇಟ್ಟುಕೊಳ್ಳಬೇಕೆಂದರೆ ನಾವೂ ಒಂದು ಕೋಟೆಯನ್ನೇ ಕಟ್ಟಬೇಕಾದೀತು"

"ಏಕೆ?"

"ಇದನ್ನು ಕಾಪಾಡಿಕೊಳ್ಳಲು. ಇವುಗಳ ಆಸೆಗೆ ಯಾರಾದರೂ ಬಂದು ತಲೆಯೊಡೆದರೆ ಏನು ಮಾಡಲಿ ಹೇಳಿ."

"ನಾವು ಇರುವವರೆಗೂ ಈ ಮಠಕ್ಕೆ ಆ ಭಯವಿಲ್ಲ"

–ಮಠದ ರಕ್ಷಣೆಯನ್ನೆಲ್ಲಾ ತನ್ನಹೆಗಲ ಮೇಲೆಯೇ ಹೊತ್ತವನಂತೆ ಹೇಳಿದ ಮುದ್ದಣ್ಣ. ಆ ಮಾತುಗಳು, ಅದನ್ನಾಡಿದ ರೀತಿ, ಹೆದರಿದ ಹೆಂಗಸಿಗೆ ಅಭಯಕೊಡುವ ತಾತ್ಸಾರದ ಧ್ವನಿ, ಮನವರಿಕೆಯಾಗಿ ಭರಮಣ್ಣನ ಮನಸ್ಸಿಗೆ ಮುಳ್ಳಿರಿದಂತಾಯಿತು. ಪರಶುರಾಮಪ್ಪನ ಮೊಗವೂ

ಕೆಂಪೇರಿತು. ಆದರೆ ಅವರಾರು ಮುದ್ದಣ್ಣನ ಮಾತಿಗೆ ಪ್ರತ್ಯುತ್ತರ ಹೇಳಲಿಲ್ಲ. ಅವರೆಲ್ಲರ ಮುಖವನ್ನು ಸೂಕ್ಷ್ಮವಾಗಿ ದೃಷ್ಟಿಸುತ್ತಿದ್ದ ಸ್ವಾಮಿಗಳೇ ಮೆದುವಾಗಿ ನಕ್ಕು ಹೇಳಿದರು.

"ಇಲ್ಲಿಯ ಕಳ್ಳಕಾಕರದೇ ಭಯವಾದರೆ, ನಿಮ್ಮ ತೋಳೂ ಇದೆ, ನಮ್ಮ ತೋಳೂ ಇವೆ. ಆದರೆ ಸಿಟ್ಟಾಗುವ ನಮ್ಮ ಒಡೆಯರಿಗೆ ಇದಿರಾಗುವವರು ಯಾರು?"

"ನಿಮ್ಮ ಒಡೆಯರು.... ಯಾರು?"

"ಈ ಕಾವಿ ಬಟ್ಟೆ, ವಿಭೂತಿಪಟ್ಟೆಯ ಅಲಂಕಾರಮಾಡಿ, ದಂಡ ಕಮಂಡಲು ಕೈಗೆ ಕೊಟ್ಟು ನಮಗೆ ವಿರಕ್ತ ಪಟ್ಟಕಟ್ಟಿದ ಶಿವ. ಆತ ಸುಮ್ಮ ನಿರುತ್ತಾನೆಯೇ? ನಮ್ಮ ಧಣಿಯ ಸಮಾಚಾರ ನಿಮಗೆ ತಿಳಿಯದು. ಆತ ಮುನಿದರೆ ಮೃತ್ಯುವೂ ಹೆದರಿ ಓಡುತ್ತಾನೆ. ಇನ್ನು ನಮ್ಮ ನಿಮ್ಮಂಥವರ ಪಾಡೇನು? ಆಯಿತು. ವಿಶ್ವಾಸದಿಂದ ತಂದಿದ್ದೀರಿ, ಇಗೋ—ತೆಗೆದು ಕೊಂಡಿದ್ದೇವೆ." ಎಂದು ಉಡುಗೊರೆಯ ತಟ್ಟೆಗಳನ್ನು ದೂರದಿಂದಲೇ ಮುಟ್ಟಿದಂತೆ ಮಾಡಿ "ಇದು ನಮ್ಮದಾಗಿ ನಿಮ್ಮಲ್ಲಿರಲಿ. ಬರುವ ಕಾರ್ತೀಕ ಸೋಮವಾರದಲ್ಲಿ ಹತ್ತು ಜನ ಯೋಗ್ಯರಿಗೆ ದಾನಮಾಡಿ. ಶಿವ ಸಂತುಷ್ಟ ನಾಗುತ್ತಾನೆ. ನಿಮ್ಮ ಹಿರಿಯರಿಗೂ ಒಳಿತಾಗುತ್ತದೆ" ಎಂದು "ಶಿವಣ್ಣಾ.... ಶಿವಣ್ಣಾ...." ಎಂದು ಕೂಗಿ, ತಮ್ಮ ಧ್ವನಿ ಕೇಳಿ ಬಂದು ಕಾಣಿಸಿಕೊಂಡ ಶಿಷ್ಯನಿಗೆ "ಇದನ್ನೆಲ್ಲಾ ಆಮೇಲೆ ಜೋಪಾನವಾಗಿ ದಳವಾಯಿಗಳ ಮನೆಗೆ ತಲುಪಿಸಬೇಕು." ಎಂದರು.

"ಅಪ್ಪಣೆ"

ಎಂದು ಕೈಮುಗಿದು ಶಿವಣ್ಣ ಮತ್ತೆ ಕಣ್ಣುಮರೆಯಾದ.

ಗುರುಗಳಾಡಿದ ಮಾತನ್ನು ಕೇಳಿ ಮುದ್ದಣ್ಣನ ಮುಖಕ್ಕೆ ಆ ಉಡುಗೊರೆಯ ತಟ್ಟೆಯನ್ನೇ ತೆಗೆದು ರಾಚಿದಂತಾಯಿತು. ಹುಬ್ಬು ಬಿಗಿದು ಕಣ್ಣು ಕೆಂಪಾಗಿ, ಎಳೆದ ತುಟಿಯೊಂದಿಗೆ ಬಾಗಿದ ಮೀಸೆಯ ಕುಡಿಯನ್ನು ಕಡಿಯುತ್ತಾ, ಎದುರಿಗೆ ಕುಳಿತ ಗುರುಗಳ ಮೊಗವನ್ನೇ ದಿಟ್ಟಿಸಿ ನೋಡಿ—

"ಅಯಿತು, ತಮ್ಮ ಚಿತ್ತ. ತಮ್ಮ ಅನುಗ್ರಹವೊಂದಿರಲಿ."

ಎಂದ, ನೀರಸವಾದ ಧ್ವನಿಯಲ್ಲಿ.

"ನಮ್ಮ ಮಾತು ಕೇಳಿ ನಿಮ್ಮ ಮನಸ್ಸಿಗೆಲ್ಲಿ ಅಸಮಾಧಾನವಾಗು ವುದೋ ಎಂದಿದ್ದೆವು. ಹಾಗಾಗಲಿಲ್ಲವಲ್ಲಾ ಸಂತೋಷವಾಯಿತು. ಶುಭ ಮಸ್ತು. ಇವೊತ್ತು ಒಂದು ಗುಟ್ಟಿನಮಾತು ಹೇಳುತ್ತೇವೆ, ಕೇಳಿ ದಳ ವಾಯಿಗಳೇ"

"ಅಪ್ಪಣೆ ಕೊಡಿಸಬೇಕು."

"ನೋಡಿ, ನಮ್ಮ ಶಿವ ಇದ್ದಾನಲ್ಲಾ ಆತ ಸುಡುಗಾಡು ಸಿದ್ಧ. ಒಂದು ದಳ ಬಿಲ್ವಪತ್ರೆ, ಅಷ್ಟು ವಿಭೂತಿ ಕೊಟ್ಟರೇ ಸಾಕು, ಸಾಮ್ರಾಜ್ಯ ಕೊಟ್ಟ ಹಾಗೆ ಕುಣಿದಾಡುತ್ತಾನೆ. ನಾವು ಹೇಳಿ ಕೇಳಿ ಅವನ ಪ್ರಜೆಗಳು. ನಮಗೆ, ನಮ್ಮ ಬಳಿಗೆ ನಿಮ್ಮಂಥವರು ಬಂದರೇ ಸಾಕು; ನಿಮ್ಮ ಸಂಪ ತ್ತೆಲ್ಲಾ ನಮಗೆ ಬಂದಹಾಗೆ. ಏನು ಕೆಲಸವಿತ್ತೋ, ಎಷ್ಟು ಅವಸರದ ರಾಜಕಾರಣವಿತ್ತೋ ಏನೋ. ನಾವು ಬನ್ನಿ ಎಂದಾಗ ಅದನ್ನೆಲ್ಲಾ ಅತ್ತ ಕಡೆ ಒದರಿಬಿಟ್ಟು ಬಂದಿರಲ್ಲಾ ಆ ವಿಶ್ವಾಸವೊಂದೇ ಸಾಕು ವಜ್ರದ ಗಣಿಯನ್ನೇ ಕೊಟ್ಟಷ್ಟು ತೃಪ್ತಿಯಾಯಿತು. ನೀವು ಬಂದದ್ದೇ ಸಂತೋಷ. ಇನ್ನು ನಮ್ಮ ಮಾತು ಕೇಳಿ, ಅದನ್ನು ನಡೆಸಿಕೊಟ್ಟರೆ ಮತ್ತಷ್ಟು ಸಂತೋಷವಾಗುತ್ತದೆ."

—ಎಂದು ಎತ್ತಲೋ ಓಡುತ್ತಿದ್ದ ಮಾತನ್ನು, ಅಂದಿನ ಕರ್ತವ್ಯ ದತ್ತ ತಂದು ನಿಲ್ಲಿಸಿ ಹೇಳಿದರು, ಉಗ್ರಚನ್ನವೀರಸ್ವಾಮಿಗಳು. ಎಷ್ಟು ಹೊತ್ತಿಗೆ ಇವರ ಈ ಮಾತು ಮುಗಿದು, ತಮ್ಮ ಮಾತು ಆರಂಭವಾಗು ವುದೋ, ಗುರುಗಳು ಸುಮ್ಮನೆ ಈ ವ್ಯರ್ಥಾಲಾಪದಲ್ಲಿ ಹೊತ್ತುಗಳೆಯು ತ್ತಿದ್ದಾರಲ್ಲಾ ಎಂಬ ಅಸಹನೆಯಿಂದ ಕುದಿಯುತ್ತಿದ್ದ ಪರಶುರಾಮಪ್ಪ, ಭರಮಣ್ಣ ಇವರಿಗೆ, ಗುರುಗಳ ಮಾತಿನ ಚಾಕಚಕ್ಯತೆಯನ್ನರಿತು ಆಶ್ಚರ್ಯವಾಯಿತು.

"ಅಪ್ಪಣೆಯಾಗಲಿ. ತಾವು ಪಾದದಿಂದ ತೋರಿದುದನ್ನು ತಲೆಯಲ್ಲಿ ಹೊತ್ತು ನಡೆಸಲು ನಾವು ಸಿದ್ಧವಾಗಿದ್ದೇವೆ."

—ಎಂದ ಮುದ್ದಣ್ಣ, ಮನಸ್ಸಿನಲ್ಲಿಲ್ಲದ ವಿನಯವನ್ನು ಟೊಳ್ಳು ಮಾತುಗಳಲ್ಲಿ ನುಡಿಸುತ್ತ.

"ಬಹಳ ದೊಡ್ಡ ಮಾತು ಹೇಳಿದಿರಿ. ನಿಮ್ಮ ವಿಶ್ವಾಸ ಬಹಳ

ದೊಡ್ಡದು. ನಾಗತಿಯವರು ಏನೋ ಒಂದು ರಾಜಕಾರಣದ ಮಾತನ್ನು ಹೇಳಬೇಕೆಂದು ನಿಮ್ಮನ್ನು ಕಾಣಬೇಕು ಎಂದರು. ಅವರ ಮನೆಯಲ್ಲೇ ಈ ಮಾತು ಆಗಬಹುದಿತ್ತು. ಆದರೂ ಏನು ಮಾತಾದರೂ ಶಿವಸಾನ್ನಿಧ್ಯ ದಲ್ಲಿ ನಡೆದರೆ ಚೆನ್ನ ಎಂದು ಇಲ್ಲೇ ಆಗಲಿ ಎಂದು. ಅದಕ್ಕಾಗಿಯೇ ಇವರನ್ನೂ ನಿಮ್ಮನ್ನೂ ಇಲ್ಲಿಗೇ ಬರಹೇಳಿದರು. ಆಗಬಹುದು ತಾನೇ?"

ಸ್ವಾಮಿಗಳು ಆಡಿದ ಮಾತನ್ನು ಕೇಳಿ ಮುದ್ದಣ್ಣ, ಆಗಲೇ ಅವರೆಲ್ಲ ರನ್ನು ನೋಡಿದಂತೆ ನಾಗತಿಗೆ ವಂದಿಸಿ—

"ಪರಶುರಾಮಪ್ಪನವರು, ದಳವಾಯಿ ಭರಮಣ್ಣನವರೂ ಬಂದಿ ದ್ದಾರೆ. ಶರಣು." ಎಂದು ಅವರತ್ತಲೂ ತಲೆಬಾಗಿಸಿದಂತೆ ಮಾಡಿ—

"ಇಂಥ ಹಿರಿಯರೆಲ್ಲರೂ ಕಲೆತಿರುವಾಗ ಬಹಳ ಮುಖ್ಯವಾದ ವಿಷ ಯವೇ ಇರಬೇಕು. ಅಪ್ಪಣೆಯಾಗಲಿ."

—ಎಂದ ನಾಗತಿಯತ್ತ ನೋಡುತ್ತ.

"ನಿಮ್ಮ ಮನಸ್ಸಿನಲ್ಲಿರುವ ಮಾತನ್ನು ಹೇಳಬೇಕು."

—ಎಂದರು ಸ್ವಾಮಿಗಳೂ ನಾಗತಿಯತ್ತ ನೋಡಿ.

"ನಮ್ಮ ಮನಸ್ಸಿನಲ್ಲಿರುವ ಮಾತೇನೆಂಬುದು ತಮಗೇ ವೇದ್ಯ ವಾಗಿದೆ. ನಮ್ಮ ಪರವಾಗಿ ತಾವೇ ಹೇಳಬೇಕು."

—ಎಂದಳು ನಾಗತಿ, ಆ ಮಾತನ್ನು ಆಡಲೋ ಬೇಡವೋ ಎಂಬಂತೆ ಸಣ್ಣ ಧ್ವನಿಯಲ್ಲಿ.

"ನಾಗತಿಯವರೂ ನಮ್ಮ ಮೇಲೇ ಭಾರಹಾಕುತ್ತಿದ್ದಾರೆ; ಶಿವೇಚ್ಛೆ. ಆಯಿತು. ನಾವು ಹೇಳಿದರೆ ಆಗಬಹುದೇ ದಳವಾಯಿಗಳೇ?"

"ಅಪ್ಪಣೆಯಾಗಲಿ."

—ಎಂದ ಮುದ್ದಣ್ಣ ಯಾರು ಹೇಳಿದರೇನು ಎಂಬ ತಾತ್ಸಾರದ ಧ್ವನಿ ಯಲ್ಲಿ. ಆ ಧ್ವನಿಯನ್ನು ಕೇಳಿ ಭರಮಣ್ಣನ ಮೈ ರಕ್ತ ಕುದಿಯಿತು.

"ಅಪ್ಪಣೆಯಾದರೆ ನಾನೇ ಹೇಳುತ್ತೇನೆ."

—ಎಂದ 'ಇವನನ್ನು ಮಣಿಸಲು ನೀವೇಕೆ, ನಾನೇ ಸಾಕು' ಎಂಬ ಧ್ವನಿಯಲ್ಲಿ. ಅವನ ಮಾತನ್ನು ಕೇಳಿ ಚಕಿತನಾದವನಂತೆ ಮುದ್ದಣ್ಣ ತಟಕ್ಕನೆ ಭರಮಣ್ಣನ ಮುಖವನ್ನು ದಿಟ್ಟಿಸಿ ನೋಡಿ—

"ಓ—ದಳವಾಯಿ ದೇಸಣ್ಣನವರ ಮಕ್ಕಳಿಗೂ ಎಲ್ಲ ವಿಷಯವೂ ತಿಳಿದಿರುವಂತಿದೆ: ಅದು ಪರಶುರಾಮಪ್ಪನವರಿಗೂ ಗೊತ್ತಿರಲೇಬೇಕು. ಯಾವುದನ್ನು ತಿಳಿಯದಿರುವವನು ನಾನೊಬ್ಬನೇನೇಸೇ."

—ಎಂದ ಆ ಮಾತಿನ ಅರ್ಥವೇನೆಂದು ಅರಿವಾಗದ ವಿಚಿತ್ರ ರೀತಿಯಲ್ಲಿ.

"ಅವರಿಗೇ ಏನು-ನಿಮಗೂ ಗೊತ್ತಿದ್ದರೂ ನಮ್ಮ ಬಾಯಲ್ಲಿ ಆಡಿಸಬೇಕೆಂದು ನಿಮ್ಮಿಷ್ಟ. ಆಗಬಹುದು ಎಂದರೆ ನಾವೇ ಹೇಳುತ್ತೇವೆ."

ಬೇರೆ ಕಡೆ ತಿರುಗಿದ ಮುದ್ದಣ್ಣನ ದೃಷ್ಟಿಯನ್ನು ಮತ್ತೆ ತಮ್ಮತ್ತ ಸೆಳೆಯುತ್ತಾ ಹೇಳಿದರು ಸ್ವಾಮಿಗಳು.

"ಅಪ್ಪಣೆಯಾಗಲಿ"

"ಚಿಕ್ಕಣ್ಣನಾಯಕರು ಕೈಲಾಸವಾಸಿಗಳಾಗಿ ತಿಂಗಳ ದಿನ ಕಳೆಯುತ್ತಾ ಬಂತು. ಸಿಂಹಾಸನ ಬರಿದಾಗಿದೆ. ಆದುದರಿಂದ ಆ ವಿಚಾರದಲ್ಲಿ ತಾವು ಏನು ಯೋಚನೆ ಮಾಡಿರುವಿರೋ ಎಂದು ತಿಳಿದುಕೊಳ್ಳಬೇಕೆಂದು ನಾಗತಿಯವರಿಗೆ ಅಪೇಕ್ಷೆ. ಬಹಳ ದಿನ ಸಿಂಹಾಸನ ಬರಿದಾಗಿರುವುದು ಶುಭವಲ್ಲ."

"ನಿಜ. ಅಲ್ಲದೆ ಈ ಹೊತ್ತಿನಲ್ಲಿ ನಮ್ಮ ಮೇಲೂ ಇದರಿಂದಾಗಿ ಬಹಳ ಭಾರಬಿದ್ದಿದೆ. ನಾವೂ ಯೋಚನೆ ಮಾಡುತ್ತಿದ್ದೇವೆ. ಇಷ್ಟರಲ್ಲೇ ಏನಾದರೊಂದು ಇತ್ಯರ್ಥ ಮಾಡಬೇಕೆಂದಿದ್ದೇವೆ. ಹೀಗೇ ಮಾಡಬೇಕೆಂದು ನಿರ್ಧಾರವಾದಾಗ ನಾಗತಿಯವರಿಗೂ ತಿಳಿಸಿ, ಅವರ ಅಪ್ಪಣೆಯನ್ನೂ ಪಡೆಯುತ್ತೇವೆ."

"ಆದರೂ....ಆದರೂ....ಬಹಳ ದಿನವಾಯಿತಲ್ಲವೇ...."

—ತಾನು ಅವರಿಬ್ಬರ ನಡುವೆ ಆ ಮಾತು ಆಡಬಹುದೋ ಬೇಡವೋ ಎಂದು ತಡೆತಡೆದು ಮಾತನಾಡಿದಳು ನಾಗತಿ.

"ನಿಜ. ಬಹಳ ದಿನವಾಯಿತು. ಇಲ್ಲವೆನ್ನುವುದಿಲ್ಲ. ಆದರೂ ಇದು ಬಹಳ ಮಹತ್ವದ ಸಮಸ್ಯೆ. ಅವಸರದಲ್ಲಿ ಏನಾದರೂ ಆದರೆ...." ಎಂದು ತಟಕ್ಕನೆ ತನ್ನ ಮಾತನ್ನು ತಡೆದು, ಒಂದು ಗಳಿಗೆ ಸುಮ್ಮನಿದ್ದು ಎಲ್ಲರನ್ನೂ ಅರ್ಥಗರ್ಭಿತವಾದ ದೃಷ್ಟಿಯಿಂದ ನೋಡಿ, ಸಡಿಲವಾಗಿದ್ದ

ಮಾತನ್ನು ಬಿಗಿ ಎಳೆದು.... "ಅವಸರದಲ್ಲಾದರೆ, ಹಿಂದಾದಂತೆ ಆಗ ಬಾರದು ಅಲ್ಲವೇ?" ಎಂದು ಎಲ್ಲರನ್ನೂ ಒಮ್ಮೆ ಕಣ್ಣು ಸುತ್ತಿಸಿ ನೋಡಿದ. ಏನೋ ಬೆದರಿಕೆ ತುಂಬಿತ್ತು ಅವನ ಮಾತಿನಲ್ಲಿ.

ಅವನ ಮಾತು ಕೇಳಿ ನಾಗತಿಯ ಮೈ ಅಪ್ರಯತ್ನವಾಗಿ ಕಂಪಿಸಿತು. ಆ ಮಾತನ್ನು ಕೇಳಿ, ಅದುವರೆಗೂ ಸುಮ್ಮನೆ ಕುಳಿತಿದ್ದ ಪರಶುರಾಮಪ್ಪ ತಡೆಯಲಾಗದೆ ಹೇಳಿದ—

"ನಿಜ. ಹಿಂದಾದಂತೆ ಆಗಬಾರದು, ಆಗುವುದಿಲ್ಲ."

"ನಮಗಿರುವ ಬಯಕೆಯೂ ಅದೇ—ಪರಶುರಾಮಪ್ಪನವರೇ."

—ಸಿಟಿನ ಧ್ವನಿಯಲ್ಲಿ ಹೇಳಿದ ಮುದ್ದಣ್ಣ.

"ಸಂತೋಷ. ಹಾಗೆಂದು ಕಾಲಹರಣ ಮಾಡುತ್ತಾ ಕುಳಿತರೆ ಹೇಗೆ? ಈಗಲೇ ಸಾಕಷ್ಟು ತಡವಾಗಿ, ಜನ ಅಡ್ಡ ಮಾತಾಡಲು ಕಾರಣವಾಗಿದೆ."

—ಮುದ್ದಣ್ಣನ ಮಾತು ತನ್ನ ಕಿವಿಗೆ ಬೀಳದವನಂತೆ ಹೇಳಿದ ಪರಶುರಾಮಪ್ಪ.

"ನಮಗೂ ಗೊತ್ತು."

—ಮುದ್ದಣ್ಣ ಹೇಳಿದ.

"ಹಾಗಾದರೆ ಇದುವರೆಗೂ ಏನು ಮಾಡಲಿಲ್ಲವೇಕೆ?"

—ಭರಮಣ್ಣ ಕೆಣಕಿ ಕೇಳಿದ,

"ಇದು ಸಮಾಲೋಚನೆಯೋ, ನಮ್ಮ ವಿಚಾರಣೆಯೋ?"

—ಸಿಡಿದು, ತಟಕ್ಕನೆ ಎದ್ದು ನಿಂತು ಕೇಳಿದ ಮುದ್ದಣ್ಣ.

"ಛೆ! ಛೆ! ಕುಳಿತುಕೊಳ್ಳಿ ದಳವಾಯಿಗಳೇ. ಅವರ ಮಾತನ್ನು ತಾವು ಅನ್ಯಥಾ ಭಾವಿಸಬಾರದು. ಅವರ ಹೃದಯದಲ್ಲಿ ಕುದಿಯುತ್ತಿರುವ ದುರ್ಗನಿಷ್ಠೆ ಅದರಿಂದ ಅವಸರದ ಮಾತಾಡಿಸುತ್ತಿದೆ. ಇನ್ನೂ ಬಿಸಿರಕ್ತ. ಹಿರಿಯರು, ದೀಪದ ಕುಡಿಯಲ್ಲಿರುವ ಸುಡುವ ಉರಿಯನ್ನು ಬಿಟ್ಟು, ಡಾರಿತೋರುವ ಬೆಳಕನ್ನು ಮಾತ್ರ ಕಂಡು ಮೆಚ್ಚುವಂತೆ, ಅವರ ಅಭಿಮಾನವನ್ನು ಮೆಚ್ಚಬೇಕೇ ಹೊರತು ಅನ್ಯಥಾ ತಿಳಿಯಬಾರದು."

—ಅಪಾಯದ ಅಡ್ಡದಾರಿ ಹಿಡಿಯುತ್ತಿದ್ದ ಮಾತನ್ನು ಮಾರ್ಗಕ್ಕೆ ತಂದು ಹೇಳಿದರು ಸ್ವಾಮಿಗಳು.

"ಅನ್ಯಥಾ ಭಾವಿಸುವುದೆ.—ಛೆ! ಅಂಥ ಭಾವನೆಗೇ ನಮ್ಮಲ್ಲಿ ಎಡೆಯಿಲ್ಲ!"

—ಎಂದು ತಟಕ್ಕನೆ ನಕ್ಕು ಮತ್ತೆ ಕುಳಿತುಕೊಂಡು ಹೇಳಿದ ಮುದ್ದಣ್ಣ—

"ದುರ್ಗದ ಬರಿದಾದ ಸಿಂಹಾಸನದ ಹಣತೆಯಲ್ಲಿ ಮತ್ತೊಮ್ಮೆ ನಾಯಕ ಜ್ಯೋತಿ ವಿರಾಜಿಸುವುದನ್ನು ಕಾಣಬೇಕೆಂಬ ಆತುರ ಇವರಿಗಿರುವಷ್ಟೇ ನಮಗೂ ಇದೆ. ಆದರೆ ಈ ವಿಷಯದಲ್ಲಿ ನಮಗೆ ಸಲಹೆ ಮಾಡಬಹುದಾದವರು, ತಮ್ಮ ತಮ್ಮಲ್ಲೇ ಮಾತಾಡಿಕೊಂಡು, ನಮ್ಮಿಂದ ದೂರವಾಗಿ ಕುಳಿತರೆ, ಯಾರ ಮನಸ್ಸು ಹೇಗೆ ಎಂದು ತಿಳಿಯದೆ, ನಾವು ಈ ಸಮಸ್ಯೆಯನ್ನು ಹೇಗೆಂದು ಇತ್ಯರ್ಥ ಮಾಡುವುದು. ಹೀಗೆಂದು ಹೇಳದೆ, ಏನೂ ಮಾಡಲಿಲ್ಲವೆಂದು ನಮ್ಮನ್ನು ಅಪಾದಿಸಿದರೆ, ಅದಕ್ಕೆ ಏನು ಹೇಳುವುದು?

ತನ್ನನ್ನು ಪ್ರಶ್ನಿಸಿದ ಎಲ್ಲರಿಗೂ ಸವಾಲು ಹಾಕುವ ಧೋರಣೆ ಇತ್ತು ಮುದ್ದಣ್ಣನ ಮಾತಿನಲ್ಲಿ.

"ನಿಜವೆನ್ನಿ ನಿಮ್ಮ ಮಾತು. ಅವರಾದರೂ ಹೇಳಬಹುದಾಗಿತ್ತು. ನೀವಾದರೂ ಕೇಳಬಹುದಿತ್ತು. ಏನೋ ಸಂಕೋಚ ಇಬ್ಬರ ನಾಲಗೆಗೂ ಲಗಾಮು ಹಾಕಿತು."

ಗುರುಗಳಾಡಿದ ಮಾತನ್ನು ಕೇಳಿ ಅವರ ಹೃದಯವನ್ನೇ ಭೇದಿಸಿ ನೋಡುವಂತೆ ತೀಕ್ಷ್ಣವಾಗಿ ಅವರತ್ತ ನೋಡಿದ ಮುದ್ದಣ್ಣ. ಆತನ ನೋಟವನ್ನು ಕಂಡೂ ಕಾಣದವರಂತೆ ತಮ್ಮ ಮಾತನ್ನು ಮುಂದುವರಿಸಿ ಹೇಳಿದರು ಗುರುಗಳು—

"ಹೀಗೆ ಏನೋ ಆಗಿ, ಎಂದೋ ಇತ್ಯರ್ಥವಾಗಬೇಕಾದ ಮಾತು ಆಗಬಾರದಷ್ಟು ತಡವಾಯಿತು. ಈಗ ದುರ್ಗದ ಅಡಳಿತ ಭಾರವೆಲ್ಲಾ ನಿಮ್ಮ ಒಂಟಿ ಹೆಗಲ ಮೇಲೇಬಿದ್ದು ನೀವು ಬಳಲುತ್ತಿದೀರ. ಅದನ್ನು ಆದಷ್ಟು ಬೇಗ ಇಳುಹಿಕೊಳ್ಳಬೇಕೆಂಬ ಆತುರ ನಿಮಗೂ ಇದೆ. ಅಲ್ಲವೆ?"

"ನಿಜ,"

"ಅದಕ್ಕೇ ನೀವು ಏನು ಯೋಚನೆ ಮಾಡಿದೀರೋ ಹೇಳಿದರೆ,

ಎಲ್ಲರ ಮನಸ್ಸೂ ಹಗುರಾಗುತ್ತದೆ."

"ನಾನಿನ್ನೂ ಯಾವ ನಿರ್ಧಾರಕ್ಕೂ ಬಂದಿಲ್ಲ. ನಾಗತಿಯವರ ಮನಸ್ಸಿನಲ್ಲೇ ಹೀಗಾಗಬಹುದು ಎಂಬ ಅಪೇಕ್ಷೆ ಇದ್ದರೆ, ಅದನ್ನು ನಮ್ಮಲ್ಲಿ ನಂಬುಗೆ ಇಟ್ಟು ತಿಳಿಸಿದರೆ, ನಮ್ಮ ಯೋಚನೆಗೂ ಒಂದು ದಾರಿ ತೋರಿ ದಂತಾಗುತ್ತದೆ. ತಂದೆಯಂತೆ ಸಾಕುತ್ತಿದ್ದ ಧಣಿಯನ್ನು ಕಳೆದು ಕೊಂಡೆವು. ಆದರೂ ತಾಯಿಯಂತೆ ನಾಗತಿಯವರು ಉಳಿದಿದಾರೆ. ಅವರು ನಮ್ಮಲ್ಲಿ ಯಾವ ಸಂಕೋಚವೂ ಇಲ್ಲದೆ ಹೇಳಬಹುದು. ಹೀಗೆ ಮಾಡಬೇಕು ಎಂದು ಸುದ್ದಿ ಕಳುಸಿದ್ದರೂ ಸಾಕಾಗಿತ್ತು. ನಮ್ಮ ಜವಾ ಬ್ದಾರಿ ತೀರಿತು ಎಂದು ಹಾಗೇ ಮಾಡಿ ಕೈ ತೊಳೆದುಕೊಳ್ಳುತ್ತಿದ್ದೆವು."

"ನಾಗತಿಯವರ ಬಗ್ಗೆ ತಮಗಿಷ್ಟು ವಿಶ್ವಾಸವಿರುವುದನ್ನರಿತು ತುಂಬಾ ಸಂತೋಷವಾಯಿತು ದಳವಾಯಿಗಳೇ"

"ಏಕೆ—ನಮ್ಮ ನಿಷ್ಠೆಯಲ್ಲಿ ಗುರುಗಳಿಗೂ ಸಂದೇಹವಿತ್ತೇ ?"

"ಸಂದೇಹವಿರಲಿಲ್ಲ. ಹೀಗಿರಬೇಕು ಎಂದುಕೊಂಡಿದ್ದೆವು. ಅದೇ ಮಾತು ನಿಮ್ಮ ಬಾಯಿಂದಲೇ ಬಂದು ಮತ್ತಷ್ಟು ಸಂತೋಷವಾಯಿತು."

"ಹಾಗಿದ್ದರೆ—ಇನ್ನು ನಿಸ್ಸಂಕೋಚವಾಗಿ ನಾಗತಿಯವರು ತಮ್ಮ ಮನಸ್ಸಿನಲ್ಲಿರುವುದನ್ನು ಹೇಳಬಹುದಲ್ಲಾ"

"ಅದು ನಿಮಗೆ ಒಪ್ಪಿಗೆಯಾಗುವುದೋ ಇಲ್ಲವೋ ?"

"ನಮಗೆ ಒಪ್ಪಿಗೆಯಾಗುವುದು ಬಿಡುವುದು ಬೇರೆ ಮಾತು. ದುರ್ಗದ ಸಿಂಹಾಸನ ನಮ್ಮದಲ್ಲವಲ್ಲಾ. ನಾವು ಹಿರಿಯರು ಕೈದೋರಿ ದತ್ತ ನಡೆಯುವ ಭಂಟರು. ಈಗ ನಮಗೆ ಹಿರಿಯರಾಗಿ ನಾಗತಿಯವರಿ ದ್ದಾರೆ. ಅವರು ಹೇಳಿದ ಮಾತನ್ನು ಮಂತ್ರಿಮಂಡಲದ ಮುಂದೆ ಇಡು ತ್ತೇನೆ. ಅವರು ಒಪ್ಪಿದರೆ ನಾಳೆಯೇ ಪಟ್ಟಾಭಿಷೇಕ ನಡೆಯಲಿ."

"ನಿಮಗೂ ಅಷ್ಟು ಆತುರವಿರುವುದು ಬಹಳ ಸಂತೋಷದ ಮಾತು, ಈಗ ನಿಮ್ಮ ದೃಷ್ಟಿಯಲ್ಲಿ ಸಿಂಹಾಸನಾಧಿಕಾರಿಗಳಾಗಲು ತಕ್ಕವರು ಯಾರಾದರೂ ಇದಾರೆಯೇ ದಳವಾಯಿಗಳೇ."

"ನಮಗೇನೋ ಯಾರೂ ಇಲ್ಲ. ಹತ್ತುಜನ ಒಪ್ಪಿದ ಯಾರಾದರೂ ಆಗಬಹುದು. ಆದರೂ ಜನ ಇಂಥವರಾಗಬಹುದು ಎಂದು ಒಬ್ಬಿಬ್ಬರ ವಿಷಯದಲ್ಲಿ ಆಡಿಕೊಳ್ಳುವುದು ನಮ್ಮ ಕಿವಿಗೂ ಬಿದ್ದಿದೆ."

"ಯಾರು ಎಂದುಕೊಳ್ಳುತ್ತಾರೆ ಜನ."

"ಮೊದಲನೆಯದಾಗಿ—"

"ಹೂ."

"ಲಿಂಗಣ್ಣನಾಯಕರು."

–ನಿಧಾನವಾಗಿ, ಈಗ ಉರುಳಿಸಿದರೆ ಬಯಸಿದ ಗರಬೀಳುವುದೋ ಇಲ್ಲವೋ ಎಂದು ದಾಳಗಳನ್ನು ಉಜ್ಜಿ ಉಜ್ಜಿ ನಿಧಾನವಾಗಿ ಅವನ್ನು ಉರುಳಿಸುವವನಂತೆ ಹೇಳಿದ ಮುದ್ದಣ್ಣ, ತನ್ನ ಆ ಮಾತಿನಿಂದ ಬೇರೆಯವರಲ್ಲಿ ಏನು ಪರಿಣಾಮವಾಗುವುದೋ ಎಂದು ಅವರ ಕಣ್ಣುಗಳನ್ನೇ ಪರೀಕ್ಷಿಸುತ್ತ.

"ಅವರು ಆದರೆ ನಿಮಗೆ ಸಂತೋಷವೇ ?"

—ಮುದ್ದಣ್ಣನ ಮಾತನ್ನು ಕೇಳಿ ತನ್ನ ಆತುರವನ್ನು ತಡೆಯಲಾರದೆ ಕೇಳಿದ ಭರಮಣ್ಣ.

"ನಿಮಗೆಲ್ಲಾ ಸಂತೋಷವೇ ?"

–ಆ ಮಾತಿನ ಅಕ್ಷರ ಅಕ್ಷರವನ್ನು ಎಳೆದೆಳೆದು ಕೇಳಿದ ಮುದ್ದಣ್ಣ .

"ನಮಗೇನೊ ಆಗಬಹುದು ಎನಿಸುತ್ತದೆ. ಅವರು ಈ ಮೊದಲೇ ಸಂಹಾಸನಕ್ಕೆ ಬರಬೇಕಾಗಿತ್ತು. ಏನೋ ಆಯಿತು. ಹೋಗಲಿ. ಈಗ ಅವರು ಬರುವುದು ಉಚಿತವಾದದ್ದೇ."

—ಆ ಮಾತನ್ನು ಅದಷ್ಟು ಬೇಗ ಮುಗಿಸಲು ಅವಸರವಾಗಿ ಹೇಳಿದಳು ಸಾಗತಿ.

"ಅದು ನಿಮ್ಮ ಅಭಿಪ್ರಾಯವೇ ?"

—ಚುರುಕಾಗಿ ಕೇಳಿದ ಮುದ್ದಣ್ಣ ಹರಿತವಾದ ಧ್ವನಿಯಲ್ಲಿ.

"ಏಕಾಗಬಾರದು ?"

"ಆಗಬಾರದು ಎಂದು ನಾನು ಹೇಳಿದೆನೇ ?"

"ಹಾಗಾದರೆ ಆಗಬಹುದು ಎಂದೇ ನಿಮ್ಮ ಅಭಿಪ್ರಾಯವೇ ?"

"ಹಾಗೆಂದೂ ನಾವು ಹೇಳಲಿಲ್ಲವಲ್ಲ."

"ಮತ್ತೆ?"

—ತನ್ನ ತಾಳ್ಮೆಯನ್ನು ಕಳೆದುಕೊಳ್ಳುತ್ತಾ ಕೇಳಿದಳು ನಾಗತಿ.

"ನಾತಿಯುವರು ದುಡುಕಬಾರದು. ತಮಗೆ ಲಿಂಗಣ್ಣನಾಯಕರಲ್ಲಿ ಮೈದುನರೆಂದು ಅಭಿಮಾನ ಹೆಚ್ಚು, ಈ ಮಾತು ಆಡುತ್ತಿದ್ದೀರ."

"ನಿಮಗೆ ಲಿಂಗಣ್ಣನಾಯಕರಲ್ಲಿ ಅಭಿಮಾನವಿಲ್ಲವೇ ದಳವಾಯಿಗಳೇ?"

—ಅದುವರೆಗೂ ಸುಮ್ಮನಿದ್ದ. ಪರಶುರಾಮಪ್ಪ ಕೇಳಿದ.

"ಉಂಟೆ. ಅವರೂ ನಮ್ಮ ಧಣಿಗಳಾಗಿದ್ದ ಸರ್ಜೇರಾಯ ಮಕ್ಕಳು; ಪ್ರಭು ಚಿಕ್ಕಣ್ಣನಾಯಕರ ಅಣ್ಣಂದಿರು; ಈಗಿರುವ ಹಿರಿಯ ತಲೆ; ಅವರಲ್ಲಿ ನನಗೆ ಅಭಿಮಾನವಿಲ್ಲವೇ?"

"ಹಾಗಾದರೆ...."

"ನಮಗೆ ನಿಮಗೆ ಅವರಲ್ಲಿ ಅಭಿಮಾನವಿದ್ದರೆ ಸಾಕೇ ಪರಶುರಾಮಪ್ಪನವರೇ. ಜನ ಅವರ ವಿಷಯದಲ್ಲಿ ಏನು ಆಡಿಕೊಳ್ಳುತ್ತಿದ್ದಾರೆ ಎಂದು ನಾವು ವಿಚಾರಿಸಬೇಡವೇ? ನಾವೇನೋ ಇಂದು ಅಭಿಮಾನದಿಂದ ಅವರಿಗೆ ಪಟ್ಟ ಕಟ್ಟಬಹುದು. ಆದರೆ ಜನಕ್ಕೆ ಅವರಲ್ಲಿ ವಿಶ್ವಾಸವಿಲ್ಲದಿದ್ದರೆ ಬ್ರಹ್ಮ ಕಟ್ಟಿದ ಪಟ್ಟವಾದರೂ ಉಳಿದೀತೇ?"

"ನಿಮ್ಮ ಮಾತು ನಿಜ ದಳವಾಯಿಗಳೇ. ಪ್ರಜೆಗಳ ಅಸಂತೋಷದ ಬುನಾದಿಯ ಮೇಲೆ ಕಟ್ಟಿದ ಪಟ್ಟ ಉಸುಗಿನಲ್ಲಿ ಕಟ್ಟಿದ ಮನೆ. ಜನ ಲಿಂಗಣ್ಣನಾಯಕರು ಬೇಡ ಎನ್ನುತ್ತಾರೆಯೇ?"

—ಗುರುಗಳು ಮಾತನ್ನು ಮತ್ತೆ ತಮ್ಮ ಹತೋಟಿಯಲ್ಲಿ ತಂದುಕೊಳ್ಳುತ್ತಾ ಕೇಳಿದರು.

"ಹಾಗೆಂದು ನೇರವಾಗಿ ಹೇಳುವುದಿಲ್ಲ."

"ಮತ್ತೆ........"

"ಆದರೂ ಅವರ ಬಗ್ಗೆ ಅಸಂತೃಪ್ತಿಯಿಂದ ಆಡುವ ಮಾತುಗಳು ಅಲ್ಲಲ್ಲಿ ನಮ್ಮ ಕಿವಿಗೆ ಬಿದ್ದಿವೆ. ಅದೇ ನಮಗೆ ಇಷ್ಟು ಯೋಚನೆಗೆ ಕಾರಣವಾಗಿರುವುದು."

"ಜನ ಏನಾಡಿಕೊಳ್ಳುತ್ತಿದ್ದಾರೆ."

ಲಿಂಗಣ್ಣನಾಯಕರು ಹೇಗೆ ನಡೆದುಕೊಳ್ಳಬೇಕಾಗಿತ್ತೋ ಹಾಗೆ ನಡೆದುಕೊಳ್ಳಲಿಲ್ಲ ಎಂದು."

ಅಂದರೆ...."

"ಅವರು ಹೇಗೆ ನಡೆದುಕೊಳ್ಳಬೇಕಾಗಿತ್ತೋ ಹಾಗೆ ನಡೆದು ಕೊಂಡಿದ್ದರೆ ಇಂದು ದುರ್ಗದ ಇತಿಹಾಸವೇ ಬೇರೆಯಾಗುತ್ತಿತ್ತು, ಎಷ್ಟೋ ಅನಿವಾರ್ಯವಾಗಿದ್ದ ಕಹಿ ಪ್ರಸಂಗಗಳು ನಡೆಯುತ್ತಿರಲಿಲ್ಲ. ನಮಗೆ ಕೊಲೆಪಾತಕಿ ಎಂಬ ಅಪಖ್ಯಾತಿಯೂ ತಟ್ಟುತ್ತಿರಲಿಲ್ಲ. ರಾಜಕಾರಣ ತನ್ನ ಮನೆವಾರ್ತೆಯಂತೆ ಹೆಂಗಸರ ಮಾತಿಗೆ ಕಿವಿಗೊಟ್ಟು ನಡೆದು, ರಕ್ತ ಪಾತಕ್ಕೆ ಕಾರಣರಾದರು. ವೈಯುಕ್ತಿಕ ಸಂಬಂಧದ ಅಭಿಮಾನದಿಂದ ಕುರುಡಾದರೆ, ರಾಜಕಾರಣದಲ್ಲಿ ರಕ್ತಪಾತ ತಪ್ಪುವುದಿಲ್ಲ. ಈ ಮಾತನ್ನು ನಾವು ಲಿಂಗಣ್ಣನಾಯಕರಿಗೂ ಹೇಳಿದ್ದೆವು. ಓಬವ್ವನಾಗತಿಯರಲ್ಲೂ ಮನವಿಮಾಡಿಕೊಂಡಿದ್ದೆವು. ಆದರೆ ಅವರಿಗೆ ನಮ್ಮ ಮಾತು ಒಪ್ಪಲಿಲ್ಲ. ಅಭಿಮಾನಕ್ಕೆ ಕಟ್ಟು ಬಿದ್ದು ತಮ್ಮ ದಾರಿಯಲ್ಲೇ ನಡೆದರು. ಜನಾಭಿ ಪ್ರಾಯ ನಮ್ಮ ಕತ್ತಿಯ ಮೂಲಕ ವ್ಯಕ್ತವಾಗುವ ದೌರ್ಭಾಗ್ಯ ನಮ್ಮದಾ ಯಿತು. ಏನೋ ಚಿಕ್ಕಣ್ಣನಾಯಕರ ಕಾಲದಲ್ಲಿ ಅಷ್ಟು ಸೇವೆ ಸಲ್ಲಿಸಿ, ಆ ಕಲಂಕವನ್ನು ಅಷ್ಟಿಷ್ಟು ತೊಡೆದುಕೊಂಡದ್ದಾಯಿತು. ಈಗಲೂ ಆ ಸಿಟ್ಟು ಎಷ್ಟೋ ಜನಕ್ಕೆ ನಮ್ಮ ಮೇಲೆ ಇದ್ದೇ ಇದೆ–ಅಲ್ಲವೇ ಪರಶು ರಾಮಪ್ಪನವರೇ?"

—ಎಂದು ಮುದ್ದಣ್ಣ ಅರ್ಥಪೂರ್ಣ ದೃಷ್ಟಿಯಿಂದ ಪರಶುರಾಮಪ್ಪ, ಭರಮಣ್ಣನವರ ಮುಖಗಳತ್ತ ನೋಡಿದ. ಅವರಿಬ್ಬರೂ ಅವನತ್ತ ನೋಡದೆ, ತಮ್ಮ ಮೊಗವನ್ನು ಬೇರೆ ಕಡೆ ತಿರುಗಿಸಿಕೊಂಡರು. ಆದರೂ ಅವರ ಮನದ ಭಾವ, ಅವರ ಬಿಗಿದ ಮುಷ್ಟಿಗಳಲ್ಲಿ ಸೂಚಿತವಾಗಿತ್ತು. ಅದನ್ನು ನೋಡಿಯೂ ನೋಡದವನಂತೆ ಮತ್ತೆ ಗುರುಗಳತ್ತ ಮೊಗದಿ ರುಹಿ, ತನ್ನ ಮಾತನ್ನು ಮುಂದುವರಿಸಿದ ಮುದ್ದಣ್ಣ.

"ಹೀಗಾಗಿ ನಾವೀಗ ಬಿಸಿಹಾಲು ಕುಡಿದ ತೆನಾಲಿ ರಾಮಕೃಷ್ಣನ ಬೆಕ್ಕುಗಳಂತಾಗಿದ್ದೇವೆ. ಯಾವ ಕೆಲಸ ಮಾಡಲೂ ತಟಕ್ಕನೆ ಮುಂದು ವರಿಯಲು ಹೆದರಿಕೆಯಾಗುತ್ತದೆ."

"ಅದಕ್ಕೇ ಈಗ ಹೇಗೆ ಮಾಡಬೇಕು ಎಂದು ತಮ್ಮ ಯೋಚನೆ?"

—ಗುರುಗಳೇ ಪ್ರಶ್ನೆ ಮಾಡಿದರು.

"ಯಾವುದಾದರೂ ಇತ್ಯರ್ಥಕ್ಕೆ ಬಂದಿದ್ದರೆ, ಹೀಗೇ ಎಂದು ಖಚಿತವಾಗಿ ಹೇಳಬಹುದಾಗಿತ್ತು. ಆದರೆ ನಮ್ಮ ಮನಸ್ಸಿಗೇ ಯಾವುದೂ ಇನ್ನೂ ನಿರ್ಧರವಾಗಿಲ್ಲ. ಅಲ್ಲದೆ ಈ ವಿಷಯದಲ್ಲಿ ದುಡುಕುವುದಕ್ಕೂ ನಮಗೆ ಇಷ್ಟವಿಲ್ಲ. ಹಾಗೆಂದು ಸುಮ್ಮನೆಯೂ ಕುಳಿತಿಲ್ಲ. ಅಲ್ಲಲ್ಲಿ ವಿಚಾರಮಾಡಿ ನೋಡುತ್ತಿದ್ದೇವೆ."

"ಸುಮ್ಮನೆ ಮೀನಾಮೇಷ ಎಣಿಸುತ್ತಾ ಕುಳಿತರೆ ಇತ್ಯರ್ಥವಾಗುವ ಪ್ರಶ್ನೆಯಲ್ಲ ಇದು ದಳವಾಯಿಗಳೇ-ದೇಶದ ಸಿಂಹಾಸನದ ಪ್ರಶ್ನೆ. ಅಷ್ಟೇ ಮಟ್ಟಿಗೆ ಅರಮನೆಯವರ ಅಭಿಮತದ ಪ್ರಶ್ನೆಯೂ ಆಗಿದೆ. ಈಗ ಅರಮನೆಯಲ್ಲಿ ಮಾತನಾಡಲು ಏಕೈಕ ಅಧಿಕಾರಿಗಳಾಗಿ ಉಳಿದಿರುವ ಮಲ್ಲಮ್ಮ ನಾಗತಿಯರಿಗೆ ಲಿಂಗಣ್ಣನಾಯಕರಾದರೆ ಆಗಬಹುದು ಎನಿಸಿದೆ. ಅದು ನಿಮಗೆ ಒಪ್ಪಿಗೆಯೋ ಇಲ್ಲವೋ ಕೇಳಬೇಕೆಂದೇ ನಿಮ್ಮನ್ನು ಇಷ್ಟು ದೂರ ಕರೆಸಿದ್ದು."

—ದಳವಾಯಿ ಭರಮಣ್ಣ ಮಾತನ್ನು ತಮ್ಮ ನಿರ್ಧಾರದ ಕಂಭಕ್ಕೆ ಬಿಗಿದು ಕಟ್ಟಲು ಯತ್ನಿಸಿ ಹೇಳಿದ.

"ಇದು ನಾಗತಿಯರ ಅಭಿಪ್ರಾಯವೇ?"

—ಮುದ್ದಣ್ಣ ತನ್ನನ್ನು ಉದ್ದೇಶಿಸಿ ಮಾತನಾಡಿದ ಭರಮಣ್ಣನತ್ತ ತಿರುಗಿ ಕೂಡಾ ನೋಡದೆ, ನಾಗತಿಯತ್ತ ನೋಡಿ ಕೇಳಿದ.

"ಅಹುದು"

—ಮುದ್ದಣ್ಣನ ಪ್ರಶ್ನೆಗೆ ನಾಗತಿಯೇ ಉತ್ತರ ಕೊಟ್ಟಳು.

"ಈ ಬಗ್ಗೆ ಲಿಂಗಣ್ಣನಾಯಕರನ್ನು ಕೇಳಬೇಕಲ್ಲವೇ?"

—ತನ್ನ ಮಾತಿನ ಗುಟ್ಟು ಬಿಟ್ಟುಕೊಡದ ಧ್ವನಿಯಲ್ಲಿ ಕೇಳಿದ ಮುದ್ದಣ್ಣ.

"ಅವರೂ ಒಪ್ಪುತ್ತಾರೆ."

—ಪರಶುರಾಮಪ್ಪ ಹೇಳಿದ.

"ಅವರ ಪರವಾಗಿಯೂ ನೀವೇ ಮಾತಾಡುತ್ತೀರೋ?"

—ಸವಾಲು ಹಾಕಿದಂತೆ ಕೇಳಿದ ಮುದ್ದಣ್ಣ. ಆ ಮಾತನಾಡಿದ ಅವನ ರೀತಿ, ನಾಲ್ಕಾರು ಕಡೆಯಿಂದ ಬಾಣ ತಗುಲಿ, ಎತ್ತಕಡೆಯಿಂದ

ಅದು ಬಂದು ಬಡಿಯಿತೆಂದು ತಿಳಿಯದೆ ಕೆರಳುತ್ತಿರುವ ಕಾಡಪಶುವಿನಂತಿತ್ತು.

"ಯಾರೂ ಯಾರ ಪರವಾಗಿಯೂ ಮಾತನಾಡುತ್ತಿಲ್ಲ. ಹೀಗಾದರೆ ಚೆನ್ನ ಎಂಬ ತಮ್ಮ ಹೃದಯದ ಭಾವನೆಯನ್ನು ಆ ರೀತಿ ಸೂಚಿಸುತ್ತಿದ್ದಾರೆ. ನಿಮಗೂ ಆಗಬಹುದು ಎಂದಿದ್ದರೆ ಹೇಳಿ."

ಗುರುಗಳಾಡಿದ ಮಾತನ್ನು ಕೇಳಿ, ಒಂದು ಗಳಿಗೆ ಏನು ಮಾತನಾಡುವುದೆಂದು ಯೋಚಿಸಿ ಕೊನೆಗೊಂದು ನಿರ್ಧಾರಕ್ಕೆ ಬಂದು ಹೇಮುದ್ದಣ್ಣ—

"ಪಟ್ಟಕ್ಕೆ ಯಾರು ಬಂದೂ ನಮಗೆ ಆಗಬೇಕಾದುದೇನೂ ಇಲ್ಲ. ಒಮ್ಮೆ ಈ ಸಿಂಹಾಸನ ಬೇಡವೆಂದ ಲಿಂಗಣ್ಣನಾಯಕರು ಇದಕ್ಕೆ ಒಪ್ಪುವರೋ ಇಲ್ಲವೊ ಈಗ ನಮಗದು ತಿಳಿಯದು. ಆದರೂ ಲಿಂಗಣ್ಣನಾಯಕರು ಸಂನ್ಯಾಸಿಗಳೇನೂ ಅಲ್ಲ. ಇಷ್ಟು ದಿನ ಬಿಗಿಹಿಡಿದ ಸಿಂಹಾಸನದ ಮೋಹಕ್ಕೆ ಸೋತು ಒಮ್ಮೆ ಬೇಡವೆಂದುದನ್ನೇ ಈಗ ಬೇಕು ಎಂದರೂ ಎನ್ನಬಹುದೊ ಏನೋ. ಏನಾದರಾಗಲಿ—ಈ ಸಂದರ್ಭದಲ್ಲಿ ನಾನು ಹೇಳುವುದಿಷ್ಟೆ–ನಿಮಗೆ ಬೇಕು ಎನ್ನಿಸಿದುದನ್ನು ಎಲ್ಲರ ಮೇಲೂ ಹೇರಲು ಯತ್ನಿಸಬೇಡಿ. ಅದರ ಪರಿಣಾಮ ಒಳಿತಾಗುವುದಿಲ್ಲ. ನಾಗತಿಯವರಲ್ಲೂ ನಾನು ಬೇಡಿಕೊಳ್ಳುವುದಿಷ್ಟೇ–ಓಬವ್ವ ನಾಗತಿಯರ ಹಟದ ಪರಿಣಾಮ ಏನಾಯಿತೆಂಬುದನ್ನು ನೆನೆಸಿಕೊಳ್ಳಲಿ. ನಾವು ಹೇಳಬಹುದಾದುದಿಷ್ಟೆ. ಆಯಿತು. ನಿಮ್ಮ ಅಭಿಪ್ರಾಯ ಏನಿದೆಯೆಂಬುದೂ ತಿಳಿದಂತಾಯಿತು. ನಾವೂ ವಿಚಾರಮಾಡಿ ಹೇಗೆ ಮಾಡಬೇಕೋ ನಿರ್ಧರಿಸುತ್ತೇವೆ. ನಮಗಿನ್ನು ಅಪ್ಪಣೆಯೇ?"

—ಎಂದವನೇ ಮುದ್ದಣ್ಣ, ಗುರುಗಳಿಗೆ ವಂದಿಸಿದಂತೆ ಮಾಡಿ, ಅವರ ಆಶೀರ್ವಾದ ವಚನಕ್ಕೂ ಕಾಯದೆ, ಎದ್ದು ದಡಧಡನೆ ಅಲ್ಲಿಂದ ಹೊರಟುಹೋದ.

"ಉದ್ಧಟ ಪಶು! ಸಿಗಿದು ಬಿಡಬೇಕು.

—ಎಂದ ಮುದ್ದಣ್ಣ ಹೋದ ರೀತಿಯನ್ನು ಕಂಡು ಕೆರಳಿ ಸಿಡಿದೆದ್ದು ನಿಂತ ದಳವಾಯಿ ಭರಮಣ್ಣ.

"ಛೆ! ಹಾಗೆ ನೀವು ತಾಳ್ಮೆ ಕಳೆದುಕೊಳ್ಳಬಾರದು. ತಾಳ್ಮೆ ಕಳೆದು ಕೊಳ್ಳುವ ತಪ್ಪು ನಿಮ್ಮಿಂದ ಆಗದಿರಲಿ. ಇದೊಂದು ಆಟ. ದಾಳ ಉರುಳಿಸಿ, ನಿಮ್ಮ ಕಾಯಿ ನಡಸಿದ್ದಾಗಿದೆ. ಮುಂದೆ ಅವರು ಏನು ದಾಳ ಹಾಕಿ ಹೇಗೆ ಕಾಯಿ ನಡೆಸುತ್ತಾರೋ ಕಾದು ನೋಡಿ. ತಾಳ್ಮೆ ಗೆಟ್ಟವರಿಂದ ತಪ್ಪುಗಳಾಗುವುದು ಹೆಚ್ಚು."

—ಎಂದರು ಗುರುಗಳು ಕೆರಳಿದ ಭರಮಣ್ಣನನ್ನು ಸಂತೈಸುತ್ತ.

"ಗುರುಗಳು ಅಪ್ಪಣೆ ಕೊಡಿಸಿದುದನ್ನು ನಾನು ಅಲ್ಲವೆನ್ನುವುದಿಲ್ಲ. ಆದರೆ ದುರ್ಗದ ಸಿಂಹಾಸನ ತನ್ನ ಹಕ್ಕಿನ ಆಸ್ತಿ ಎಂಬಂತೆ ಮಾತನಾ ಡುವ ಅವನ ಉದ್ಧಟತನವನ್ನು ಕಂಡರೆ, ನಾನೂ ಭರಮಣ್ಣನೂ ಕೆರಳುವು ದಿರಲಿ—ಮಂಜುಗಡ್ಡೆಯೂ ಕುದಿನೀರಾಗುವುದು."

—ಪರಶುರಾಮಪ್ಪನೂ ಸಣ್ಣಗೆ ಕೆರಳಿ ಹೇಳಿದ.

"ಇರಬಹುದು. ಹಾಗೆಂದು ನಮ್ಮ ಬುದ್ಧಿಯೆಲ್ಲಾ ಸಿಟ್ಟನಿಂದ ಕೆರಳಿ ಕುದಿದು ಆವಿಯಾಗಿ ಹೋದರೆ ಏನು ಫಲ?"

"ಅದಕ್ಕೆ ಇಗ ಏನು ಮಾಡಬೇಕೆನ್ನುತ್ತೀರ ಗುರುಗಳೇ?"

"ಅವರ ಮಾತು ಅವರಿಗೇ ಹೇಳಿ"

"ಅಂದರೆ........"

"ಜನ ಏನನ್ನುತ್ತಾರೋ ಎಂದಲ್ಲವೇ ಅವರು ಹೇಳಿದ್ದು. ಸರಿ— ಜನಗಳೇ ಆ ಮಾತನ್ನು ಅವರಿಗೆ ಹೇಳಲಿ. ಆಮೇಲೆ ಮುಂದೆ ಏನು ಮಾಡುತ್ತಾರೋ ನೋಡಿಕೊಂಡು, ಮುಂದೆ ನಾವು ಮಾಡುವುದನ್ನು ನಿರ್ಧರಿಸೋಣ."

"ಇಷ್ಟೇಕೆ ಅವನ ಹತ್ತಿರ ಚರ್ಚೆ. ಒಳ್ಳೆಯ ಮಾತಿಗೆ ಅವನು ಒಪ್ಪದಿದ್ದರೆ, ನಮ್ಮ ಕೈಯಲ್ಲೂ ನಾಲ್ಕು ಜನರಿದ್ದಾರೆ. ನಮ್ಮ ತೋಳಲ್ಲೂ ಶಕ್ತಿ ಹುಡುಗಿ ಹೋಗಿಲ್ಲ........"

"ಅವನ ತಲೆ ಹೋಗಲಿ, ಇಲ್ಲಿವೇ ನಮ್ಮ ತಲೆ ಹೋಗಲಿ—ಇಷ್ಟೇ ತಾನೇ ನೀವು ಹೇಳುವುದು ಭರಮಣ್ಣ." ಭರಮಣ್ಣನ ಮಾತನ್ನು ಅರ್ಧಕ್ಕೇ ತಡೆದು ಕಟುವಾದ ಧ್ವನಿಯಲ್ಲಿ ಹೇಳಿದರು ಗುರುಗಳು: "ಅವರ ಮಾತು ಹಾಗಿರಲಿ, ಮೊದಲು, ನೀವು ನಮ್ಮ ಪ್ರಶ್ನೆಗೆ ಉತ್ತರ ಕೊಡಿ...."

"ಅಪ್ಪಣೆ ಮಾಡಿ."

—ಅವರ ಚುರುಕಾದ ಧ್ವನಿಯನ್ನು ಕೇಳಿ ಕೊಂಚ ಮೆತ್ತಗಾಗಿ ಕೇಳಿದ ಭರಮಣ್ಣ.

"ನೀವೀಗ ಹಟ ಸಾಧಿಸಲು ಹೊರಟಿದ್ದೀರೋ, ನ್ಯಾಯಸಮರ್ಥನೆ ಮಾಡಲು ಹೊರಟಿದ್ದೀರೋ."

"ನ್ಯಾಯವನ್ನು ಎತ್ತಿ ಹಿಡಿಯಲು."

"ಹಾಗಾದರೆ ಅದಕ್ಕೆ ಇಷ್ಟು ಆತರ, ಉದ್ರೇಕ ಇರಬಾರದು; ಅನ್ಯಾಯಕ್ಕೆ ಎಷ್ಟು ಆತುರವೋ ನ್ಯಾಯಕ್ಕೆ ಅಷ್ಟೇ ಸಹನೆ ಬೇಕು. ಅನ್ಯಾಯಕ್ಕೆ ತಲೆಯನ್ನು ಸೆಂಡಾಡುವಾಸೆ ಇದ್ದರೆ, ನ್ಯಾಯಕ್ಕೆ ಹೃದಯ ವನ್ನು ಗೆಲ್ಲುವಾಸೆ ಇರಬೇಕು. ರಕ್ತದಾಹದ ವಿಜೃಂಭಣೆ ನ್ಯಾಯಕ್ಕೆ ಅಪಮಾನ ದಳವಾಯಿಗಳೇ; ತಾಳ್ಮೆ ನ್ಯಾಯದ ಬುನಾದಿ, ಕರುಣೆ ಅದರ ಕಿರೀಟ. ನಿಮ್ಮದು ನ್ಯಾಯವೆಂದು ನಿಮಗೆ ನಂಬಿಕೆ ಇದ್ದರೆ, ತಾಳ್ಮೆ ಯಿಂದಿರಿ."

"ಹಾಗೆಂದರೆ—ಇವನು ಮಾಡುತ್ತಿರುವ ಅನ್ಯಾಯವನ್ನು ನೋಡಿ ಕೊಂಡು ಹೇಡಿತನದಿಂದ ಕೈಕಟ್ಟಿಕೊಂಡಿರಬೇಕು ಎನ್ನುತ್ತೀರಾ?"

"ಉಂಟೆ. ತಾಳ್ಮೆ ಹೇಡಿತನವೆಂದು ನಿಮಗೆ ಹೇಳಿದವರು ಯಾರು? ಹಾಗೇ ಈ ಮಾತು ನಿಮ್ಮ ಹೃದಯದಲ್ಲಿರಲಿ ಭರಮಣ್ಣ—ನ್ಯಾಯ ಪೋಷಣೆಯಲ್ಲಿ ಪ್ರತೀಕಾರದ ತೃಷೆಯಿರಬಾರದು, ತ್ಯಾಗದ ತೇಜಸ್ಸು ಪ್ರಕಾಶಿಸಬೇಕು. ಅದಕ್ಕಾಗಿ ತಲೆ ತೆಗೆದುಕೊಳ್ಳುತ್ತೇನೆ ಎನ್ನುವುದಕ್ಕಿಂತ ಅಗತ್ಯವಾದರೆ ತಲೆ ಕೊಡುತ್ತೇನೆ ಎಂಬ ಸಂಕಲ್ಪವಿರಬೇಕು. ಅಷ್ಟೇ ನಾವು ನಿಮಗೆ ಹೇಳಬೇಕಾದುದು, ಆಯಿತು. ನಮ್ಮ ಕೆಲಸ ಇಷ್ಟು ದಿನ ಜಡವಾಗಿದ್ದುದು ಈಗ ಚಲನೆಗೆ ಆರಂಭಿಸಿದೆ. ಈಗ ಮುದ್ದಣ್ಣನವರೂ ಸುಮ್ಮನೆ ಕುಳಿತುಕೊಳ್ಳುವಂತಿಲ್ಲ. ಅವರು ಏನು ಮಾಡುವರೋ ನೋಡೋಣ. ಆ ಬಳಿಕ ನಾವು ಮಾಡಬೇಕಾದುದನ್ನು ಮಾಡೋಣ."

"ನಾವೇನು ಮಾಡಬೇಕೋ ಅದನ್ನು ಅಪ್ಪಣೆ ಕೊಡಿಸಿ."

"ಮುದ್ದಣ್ಣನವರು ಕೇಳುವುದು ಜನಾಭಿಪ್ರಾಯವಲ್ಲವೇ? ಅದು ಅವರು ಕಿವಿಗೆ ಮುಟ್ಟುವಂತೆ ಮಾಡಿ."

—ಗುರುಗಳ ಮಾತನ್ನು ಕೇಳಿ ಪರಶುರಾಮಪ್ಪನ ಕಣ್ಣು ಮುಂದೆ ಕವಿದ ಕತ್ತಲಲ್ಲಿ ಚಕ್ಕನೆ ಮಿಂಚು ಚೆಲ್ಲಿದಂತಾಯಿತು. ಆ ಒಂದು ಗಳಿಗೆಯಲ್ಲಿ ಗುರುಗಳ ಬಗ್ಗೆ ಆತನಿಗಿದ್ದ ಗೌರವ ಹತ್ತುಪಟ್ಟು ಹೆಚ್ಚಿತು. ಆ ಹೆಚ್ಚಿದ ಗೌರವದಲ್ಲೇ ಗುರುಗಳ ಅಡಿಗೆ ವಂದಿಸಿದ. ನಾಗತಿಯೂ, ಭರಮಣ್ಣನೂ ಅವರ ಮಾತಿನ ಅರ್ಥ ಅರಿವಾಗದೆ, ಮನದ ಗೊಂದಲದಿಂದ ಮಂಕಾದ ದೃಷ್ಟಿಯಿಂದ ಗುರುಗಳತ್ತ ನೋಡಿದರು.

ಗುರುಗಳ ಮೊಗದ ಮೇಲೆ ಅವರ ಪ್ರಶ್ನೆಗೆ ಉತ್ತರವಿರಲಿಲ್ಲ, ಪ್ರಶಾಂತ ಮಂದಹಾಸವಿತ್ತು.

## ೮

ಆಶ್ವಯುಜಮಾಸ ಆಗಮಿಸಿದೆ. ಶ್ರಾವಣ, ಭಾದ್ರಪದಗಳ ಮಳೆಯಿಂದ ಭೂಮಿ ಹಸಿರಾಗಿ, ಹೊಸದಾಗಿ ಪ್ರಾಯಪ್ರಬುದ್ಧ ಕನ್ಯೆಯಂತೆ ರಂಜಿಸುತ್ತಿದೆ. ಒಮ್ಮೆ ಕಾರ್ಮೋಡ ಕವಿದು ಹುಬ್ಬು ಗಂಟುಹಾಕಿದ ಮುಗಿಲು, ಪ್ರೇಮವಶಳಾದ ಸ್ತ್ರೀಯ ಸಿಟ್ಟಿನಂತೆ, ಮಳೆಯ ಕಂಬನಿಗರೆದು, ಮತ್ತೆ ಪ್ರಫುಲ್ಲವಾಗಿ, ಮಳೆ ತೊಳೆದ ನೀಲಿ ತಳತಳಿಸುತ್ತದೆ. ಭೂಮಿಯನ್ನು ತಬ್ಬಿದ ಹಸಿರ ನಡುವೆ ಅಲ್ಲಲ್ಲಿ ನಿಂತ ಮಳೆ ನೀರು ಬಿಸಲಿನಲ್ಲಿ, ಭೂದೇವಿ ತೊಟ್ಟ ಹಸಿರುಗುಪ್ಪಸಕ್ಕೆ ಮಾಡಿದ ಕನ್ನಡಿ ಅಲಂಕಾರದಂತೆ, ನೀಲ ಮುಗಿಲನ್ನು ಬಿಂಬಿಸಿ ಹೊಳೆಯುತ್ತದೆ. ತಂಗಟೆಯ ಹೂವು, ಅರಳಿ ಬಿರಿದು, ಕೆಳಗಿನ ಹಸಿರು ನೆಲದ ಮೇಲೆ, ಅರಿಶಿಣ ಚೆಲ್ಲಿದಂತೆ ದಳಗಳನ್ನು ಹರಡಿದೆ. ಕಾರ್ಮೋಡಗಳಿಂದ ಕೊಬ್ಬಿದ ಮುಗಿಲು ಮದಗಜದಂತೆ ಘುಡುಘುಡಿಸಿದರೆ, ಹೊಸ ನೀರು ಬಂದು ಕೆಂಪಾಗಿ ಕೊಬ್ಬಿದ ಕೆರೆಯ ನೀರು, ಮೊಳಗುವ ಮುಗಿಲಿನೊಂದಿಗೆ ಸ್ಪರ್ಧಿಸಿ, ತಾನೂ ದಂಡೆಯನ್ನು ಅಪ್ಪಳಿಸಿ ಮೊಳಗುತ್ತದೆ. ತಾಯಿಯ ಕೃತಕ ಕೋಪಕ್ಕೆ ಹೆದರಿದಂತೆ ಚೆಲ್ಲಾಪಿಲಿಯಾಗಿ ಓಡುವ ಮಕ್ಕಳಂತೆ ಕೆರೆಯ ನೀರು ಕಾಲುವೆಗಳಲ್ಲಿ ಕುಲುಕುಲು ನಗುತ್ತಾ ಓಡಿ, ಹೊಲ ಹೊಲಕ್ಕೂ ತನ್ನ ಹರ್ಷವನ್ನು ಹಂಚಿ ಹರಡುತ್ತಿವೆ. ನೆಲದಾಯಿ ಪುಳಕಿತಳಾಗಿ, ಆ ಹರ್ಷ ಸಸಿ

ಯಾಗಿ ಹೊರಹೊಮ್ಮಿ, ಅವೂ ಗಾಳಿಯಲ್ಲಿ ಅತ್ತಿತ್ತ ಸುಳಿದು ಪಿಸುದನಿ ಯಲ್ಲಿ ಗಾಳಿಗೆ ತಮ್ಮ ಹರ್ಷ ಕಾರಣವನ್ನು ಹೇಳುತ್ತಿವೆ. ಆ ಆನಂದ ವನ್ನು ಗಾಳಿ, ಹೊಸ ಹಸಿರಿನ ಪರಿಮಳವನ್ನಾಗಿ ಮಾರ್ಪಡಿಸಿ ಲೋಕ ಕ್ಕೆಲ್ಲಾ ಹಂಚುತ್ತಿದೆ. ಆ ಹರ್ಷವನ್ನೇ ಹಬ್ಬವಾಗಿ ಆಚರಿಸಲು ನಿಶ್ಚಯಿಸಿ ದಂತೆ ಜನ ಮುಂಬರುವ ನವರಾತ್ರಿಯ ಹಬ್ಬದ ಸಾಲಿಗೆ ಸಿದ್ಧತೆ ಮಾಡಿ ಕೊಳ್ಳುತ್ತಿದ್ದಾರೆ.

ಜನರ ಹರ್ಷದ ಕರೆಗೆ ಓಗೊಟ್ಟುಬಂದಂತೆ ನವರಾತ್ರಿಯ ಮೊದಲ ಮಹಾಲಯ ಅಮಾವಾಸ್ಯೆಯೂ ಬಂದಿತು. ಇದ್ದಕ್ಕಿದ್ದ ಹಾಗೇ ಅಮಾ ವಾಸ್ಯೆಯ ಕತ್ತಲು ಜನರ ಮೊಗವನ್ನು ಕವಿದಂತೆ ಅವರ ಮೊಗ ನಿಸ್ತೇಜ ವಾಯಿತು.

ಪ್ರತಿವರ್ಷ ಮಹಾಲಯ ಅಮಾವಾಸ್ಯೆಯ ದಿನದಂದು, ದುರ್ಗದ ಪಾಳೆಯಗಾರರು, ರಾಜಪರಿವಾರದವರೊಂದಿಗೆ, ಜೋಗಿಗಳ ವೇಷಧರಿಸಿ ದುರ್ಗದ ಬಳಿಯ ಹತ್ತಾರು ಹಳ್ಳಿಗಳ ಗೌಡರು ಮೊದಲಾದವರ ಮನೆಗೆ ಹೋಗಿ, ಭಿಕ್ಷೆ ಬೇಡಿ, ಅವರು ಕೊಟ್ಟ ಕಾಣಿಕೆಯನ್ನು ಸ್ವೀಕರಿಸಿ ಬರು ವುದು ವಾಡಿಕೆ.

ಆ ದಿನ ಒಂದೊಂದು ಹಳ್ಳಿಯೂ, ಜೋಗಿಯ ವೇಷ ಧರಿಸಿ ತಮ್ಮ ಹಳ್ಳಿಗೆ ಬರುವ ರಾಜಪರಿವಾರವನ್ನು ಸ್ವಾಗತಿಸಲು ವಿಶೇಷ ಉತ್ಸಾಹ ದಿಂದ ಸಿದ್ಧವಾಗುತ್ತಿತ್ತು. ಆ ದಿನ ಎಷ್ಟು ಉತ್ಸಾಹ, ಎಂಥಾ ಉಲ್ಲಾಸ ಜನಕ್ಕೆ! ಮನೆ ಮನೆಯೂ ಮದುವೆಯ ಮಂಟಪವಾಗುತ್ತಿತ್ತು. ಊರ ಬಾಗಿಲಿನಿಂದ ಹಿಡಿದು ಗೌಡನ ಮನೆಯವರೆಗಿನ ದಾರಿ' ವಸಂತಕಾಲದ ಉದ್ಯಾನವಾಗುತ್ತಿತ್ತು-ಹೂವು, ಹಸಿರು, ತೆಂಗು ಅಡಿಕೆಯ ಗರಿ, ಹೊಂಬಾಳೆ ಗಳ ಅಲಂಕಾರದಿಂದ. ಆ ದಾರಿ ಊರ ಶ್ರೀಮಂತ ಹೆಣ್ಣುಗಳ ಜರತಾರಿಯ ಸೀರೆಗಳ್ನು ಹೊದೆದು ಶೃಂಗಾರವಾಗುತ್ತಿತ್ತು. ಮನೆಮನೆಯೂ ಸುಣ್ಣ ಬಣ್ಣದ ಕಾರಣೆಯಿಂದ ಚೆಲುವಾಗಿ, ಹೊಸ ಉಡಿಗೆ ತೊಡಿಗೆಗಳನ್ನು ಧರಿಸಿದ ಮುತ್ತೈದೆಯರು ಕನ್ನಡಿ, ಕಲಶ, ಆರತಿಯ ತಟ್ಟೆಗಳನ್ನು ಹಿಡಿದು, ರಾಜಪರಿವಾರವನ್ನು ಎದುರುಗೊಳ್ಳಲು ಕಾಯುತ್ತಿತ್ತು-ಹಳ್ಳಿಗೆ ಅರ್ಧ ಮೈಲು ದೂರದಲ್ಲಿ ರಾಜಪರಿವಾರ ಬಂದ ಕೂಡಲೇ, ಅದರ

ಆಗಮನವನ್ನೇ ಕಾಯುತ್ತಾ ನಿಂತ ಜೋಡಿ ಕಹಳೆಯವರು ಊದುವ ಸನ್ನೆ ಗಾಳಿಯ ಧ್ವನಿಯನ್ನು ಕೇಳಲು ಕಿವಿಯಗಲಿಸಿ, ಆ ಸದ್ದು ಕೇಳಿದ ಕೂಡಲೇ ಊರು ಉತ್ಸಾಹದಿಂದ ಲಂಘಿಸಿ, ಕಾದು ನಿಲ್ಲುವುದು, ಕೋಲು ಹುಯ್ಯುವವರ ಗೆಜ್ಜೆಗಾಲು, ಒಮ್ಮೆ ಕುಣಿದು ಗೆಜ್ಜೆ ಸರಿಮಾಡಿಕೊಂಡು ಸಿದ್ಧವಾಗುವುದು, ದೇವಾಲಯಗಳಲ್ಲಿ ಪೂಜೆ ಆರಂಭವಾಗುವುದು. ಊರ ತಲೆಯಾಳುಗಳೆಲ್ಲಾ ತಮ್ಮ ವಸ್ತ್ರ, ಮುಂಡಾಸಗಳನ್ನು ಸರಿಪಡಿಸಿ ಕೊಂಡು, ದೊರೆಗಳಿಗೆ ಸಲಿಸಬೇಕಾದ ಊರ ಮರ್ಯಾದೆಗಳೊಡನೆ ಊರ ಬಾಗಿಲತ್ತ ಓಡುವರು. ರಾಜಪರಿವಾರ ಊರಿಗೆ ಬರುವುದು ಎಲ್ಲರಿಗೂ ಮನೆಯ ಬಾಗಿಲಿಗೇ ಭಾಗೀರಥಿ ಬಂದಷ್ಟು ಸಂಭ್ರಮ. ಆ ಹಳ್ಳಿಯ ಜನಕ್ಕೇನು? ಅಲ್ಲಿಗೆ ಬರುವ ನಾಯಕರನ್ನು ನೋಡಲು ಸುತ್ತಲ ಹತ್ತಾರು ಹಳ್ಳಿಯ ಜನವೂ ಅಲ್ಲಿಗೇ ಮೊಗಚಿ, ಹಳ್ಳಿಗೆ ಹೊಸ ಯೌವನ ಬಂದಂತಾಗುವುದು.

ಆ ಒಂದು ದಿನಕ್ಕಾಗಿ ವರ್ಷದುದಕ್ಕೂ ಸಿದ್ಧತೆ ಮಾಡಿಕೊಳ್ಳು ವುದು ಹಳ್ಳಿಯ ಜನ. ಸಮುದ್ರದ ನೊರೆಯಿಂದ ತಿಕ್ಕಿ, ಒರೆಸಿದ ಕನ್ನಡಿಯಂತೆ ಹೊಳಪಾಗುವುವು.

ಎಲ್ಲ ವರ್ಷದಂತೆ ಈ ವರ್ಷವೂ ಆಶ್ವಯುಜ ಮಹಾಲಯ ಅಮಾ ವಾಸ್ಯೆ ಬಂದಿದೆ. ಆದರೆ ಜನರ ಮೊಗಮಾತ್ರ ಕಾಂತಿಹೀನವಾಗಿದೆ. ಈ ವರ್ಷ ರಾಜಪರಿವಾರದವರ ಆಗಮನವಿಲ್ಲ. ದುರ್ಗಕ್ಕೇ ನಾಯಕರಿಲ್ಲ ದಾಗ, ಹಳ್ಳಿಗೆ ಯಾರು ಬರಬೇಕು? ಇದರಿಂದ ಎಲ್ಲರ ಮನಸ್ಸೂ ಬಲ ವಂತವಾಗಿ ಕೈಯ ತಿಂಡಿಯನ್ನು ಕಸಿದುಕೊಂಡ ಮಗುವಿನ ಮನಸ್ಸಿನಂತೆ ಕಿಡಿ ಕಿಡಿಯಾಗಿದೆ,

ಅದರ ಜೊತೆಗೆ ಎಲ್ಲಂದಲೋ ಮತ್ತೊಂದು ಸುದ್ದಿಯೂ ಹಬ್ಬಿದೆ. ಆ ಕಿಡಿಗೆ ಗಾಳಿ ಬೀಸಿದಂತಾಗಿದೆ. ಆ ಸುದ್ದಿ ಎಲ್ಲಿಂದ ಬಂತೊ, ಯಾರು ಹೇಳಿದರೂ ಯಾರಿಗೂ ತಿಳಿಯದು. ಆದರೆ ಎಲ್ಲರೂ ಪಿಸುದನಿಯಲ್ಲಿ ಆಡಿಕೊಳ್ಳುತ್ತಾರೆ—

"ಈ ವರ್ಷವೇನು, ಇನ್ನು ಮುಂದೆ ಯಾವ ವರ್ಷವೂ ಈ ಹಬ್ಬ ವಿಲ್ಲ. ಇನ್ನು ನಾಯಕರ ತಲೆಯೇ ಮುಗಿದು, ದಳವಾಯಿಯೇ ದುರ್ಗದ

ನಾಯಕನಾಗುತ್ತಾನಂತೆ! ಇನ್ನು ಮೇಲೆ ಜನ ಇಂಥ ಉತ್ಸವಗಳನ್ನೆಲ್ಲಾ ಮರೆತುಬಿಡಬೇಕಾದದ್ದೆ."

ಈ ಮಾತು ಕೇಳಿ ಕೆಲವರು ಹಿರಿಯರ ಕಣ್ಣಿನಲ್ಲಿ ನೀರು ತುಂಬಿ, ಅವರು—

"ಮಾರಾಯ—ತಿಮ್ಮಣ್ಣನಾಯಕನ ವಂಶಕ್ಕೆ ಇಂಥ ಗತಿ ಬರ ಬಹುದೇ? ಸಿದ್ಧರೇನು ಕಣ್ಣು ಮುಚ್ಚಿಕೊಂಡವರಾ"

—ಎಂದು ಮರುಗಿದರೆ, ಕೆಲವರು ಯುವಕರು ಕೆರಳಿ—

"ಇದೇನು ದಳವಾಯಿ ಅಪ್ಪನ ಆಸ್ತಿ ಕೆಟ್ಟು ಹೋಯಿತಾ? ಸಿಂಹಾಸನದ ಮೇಲೆ ಕಾಲು ಮಡಗಿದರೆ ಆ ಕಾಲು ಕತ್ತರಿಸಿ, ದುರ್ಗದ ಕೋಟೆ ಬಾಗಿಲಿಗೆ ಅವನ ಹೆಣ ನೇತುಹಾಕೋಕಿಲ್ಲವಾ."

—ಎಂದು ಪೌರುಷದ ಮಾತಾಡುತ್ತಾರೆ. ಆ ಹೊತ್ತಿನಲ್ಲೇ ಯಾರೋ ಒಬ್ಬರು—

"ಸುಮ್ಮನೆ ಸಿಟ್ಟಾದರೆ ಏನು ಚಂದ? ಪಟ್ಟಕ್ಕೆ ಬರೋರು ಯಾರಿ ದಾರೆ ಆ ಮನೆತನದಲ್ಲಿ?"

ಎನ್ನುತ್ತಾರೆ; ಇನ್ನೊಬ್ಬರು, ಅದನ್ನೇ ಕಾದಿದ್ದಂತೆ—

"ಯಾಕೆ? ತೀರಿಕೊಂಡ ನಾಯಕರ ಅಣ್ಣಂದಿರು ಲಿಂಗಣ್ಣ ನಾಯಕರಿಲ್ಲವಾ. ಪುಣ್ಯಾತ್ಮ, ದೈವಪುರುಷ. ಆ ಹುಲಿ ಜೀವಂತ ಇರೋ ವಾಗ, ಈ ಕುರಿ ಸಿಂಹಾಸನದ ಮೇಲೆ ಕಣ್ಣು ಹಾಕಿ ಬದುಕೀತಾ?" ಎನ್ನುತ್ತಾರೆ.

"ಸೈ. ಸೈ. ಲಿಂಗಣ್ಣನಾಯಕರನ್ನೇ ಸೆರೆಯಲ್ಲಿಟ್ಟಿದಾನಂತೆ ದಳ ವಾಯಿ ಮುದ್ದಣ್ಣ. ಮೇಲು ದುರ್ಗದಲ್ಲೆಲ್ಲಾ ಅವರ ಮೊಕಾನೇ ಕಾಣೋ ಕಿಲ್ಲವಂತೆ. ಒಬ್ಬ ನಾಯಕನನ್ನು ಕೊಂದ ಮುದ್ದಣ್ಣ ಇವರನ್ನೂ ಹೀಗೇ ತೀರಿಸ್ಬಿಡ್ತಾನೆ. ನೀವೆಲ್ಲಾ ಬರೀ ಬಡಾಯಿ ಕೊಚ್ಚಿಕೊಂಡು ಯಾವ ಲೋಕ ಉದ್ಧಾರ ಆಗೋದು?"

—ಎಂದು ಯಾರೋ ಸುತ್ತಲಿದ್ದವರನ್ನು ಕೆರಳಿಸುತ್ತಾರೆ.

"ಐ. ಹಂಗ್ಮಾಡಿ ಇವನು ತಲೆ ಉಳಿಸಿಕೊಳ್ಳಲಿ ನೋಡಾನ. ನಾವೇನು ಸತ್ತಿದೀವಾ"

—ಎಂದು ನಾಲ್ಕಾರು ಜನ ತೋಳು ತಟ್ಟುತ್ತಾರೆ.

"ಮಾತು ಇಲ್ಲಿ ಆಡಿಕೊಂಡ್ರೇನು ಬಂತು. ಎಲ್ಲಾ ಉತ್ತರನ ಮಕ್ಕಳೇ. ದುರ್ಗಕ್ಕೇ ಹೋಗಿ ದಳವಾಯಿಯ ಮೊಕಕ್ಕೇ ಈ ಮಾತು ಹೇಳಿದರೆ ಸೈ ಎನ್ನಬಹುದು. ಸಾಹೇಬರು ಹೇಳೋ ಹಾಗೆ ಹಮಾರಾ ಕುತ್ತಾ ಹಮಾರ ಗಲ್ಲೀಮೇ ಷೇರ್!"

—ಎಂದು ಪೌರುಷದ ಮಾತಾಡುವವರನ್ನು ಕೆಣಕುತ್ತಾರೆ ಮತ್ತೆ ಯಾರೊ.

"ಅದೇನಾಗ್ತದೋ ನಡಿ. ದುರ್ಗಕ್ಕೇ ಹೋಗಿ ನೋಡಾನ. ದಳವಾಯಿ ಏನಾರ ಕಮುಕ್ ಕಿಮುಕ್ ಅಂದ್ರೆ ನಮ್ಮದೂ ಒಂದು ಕೈ ತೋರಿಸೇ ಬಿಡಾವ"

—ಎಂದು ಹಳ್ಳಿ ಹಳ್ಳಿಯಿಂದಲೂ ಹತ್ತಾರು ಜನರ ತಂಡ ಬಂದು, ನವರಾತ್ರಿಯ ಯಾವ ಉತ್ಸವಗಳೂ ಇಲ್ಲದಿದ್ದರೂ, ದುರ್ಗದಲ್ಲಿ ಜನ ತುಂಬಿ, ಏಕೆ ಇಷ್ಟು ಜನ ಎಂದು ದುರ್ಗದ ಜನ ಆಶ್ಚರ್ಯ ಪಡುವಂತಾಗಿದೆ.

ದಿನ ದಿನಕ್ಕೆ ಹೀಗೆ ಹೊರಗಿನ ಹಳ್ಳಿಗಳಿಂದ ಬರುವ ಜನ ಸಂಖ್ಯೆ ಹೆಚ್ಚುತ್ತಿದೆ. ದುರ್ಗದ ಸುತ್ತಲ ನಾಲ್ಕಾರು ಕಡೆಯ ತೋಪುಗಳಲ್ಲೂ, ಹಳ್ಳಿಯ ಜನ ಬಿಡಾರ ಮಾಡಿ, ಅವರ ಮುಖ್ಯಸ್ಥರು ಹಗಲು ಸಂಜೆ ಊರವರೊಂದಿಗೆ ಸುದ್ದಿ ವಿಚಾರಿಸುತ್ತ ಅಲೆಯುತ್ತಾರೆ. ಅವರು ಕೇಳುವ ಪ್ರಶ್ನೆ, ಆಡುವ ಮಾತು, ಮಾತಿನ ರೀತಿ, ಪಟ್ಟಣಿಗರ ಹೃದಯದಲ್ಲೂ ಏನೇನೋ ಅಶುಭ ಚಿಂತೆಗಳನ್ನು ಕೆರಳಿಸಿ, ಅವರನ್ನು ಉದ್ವಿಗ್ನಗೊಳಿಸುತ್ತಿದೆ. ಹಳ್ಳಿಗರೊಂದಿಗೆ ಅವರೂ ಮೇಲುದುರ್ಗ, ಕೆಳದುರ್ಗಗಳಲ್ಲಿ ಸುತ್ತುತ್ತಾರೆ.

ಇಲ್ಲಿ ಏನೋ ಆಗುತ್ತದೆ, ತಾವು ಏನೋ ಮಾಡಬೇಕೆಂದುಕೊಂಡು ದುರ್ಗಕ್ಕೆ ಬಂದ ಹಳ್ಳಿಯ ಜನಕ್ಕೆ, ಇಲ್ಲಿಗೆ ಬಂದಮೇಲೆ, ಇಲ್ಲಿಯ ಸ್ತಬ್ಧವಾತಾವರಣವನ್ನು ಕಂಡು, ಮುಂದೇನು ಮಾಡಬೇಕೆಂಬುವೇ ತೋಚದೆ, ದಿಗ್ಭ್ರಾಂತರಾಗಿದ್ದಾರೆ. ಅವರು ಬರುತ್ತಿದ್ದ ಹಾಗೇ, ಹಳ್ಳಿಯಲ್ಲಿ ಸುದ್ದಿ ಹರಡಿದ್ದ ಹಾಗೆ ಏನೋ ಉತ್ಪಾತ ನಡೆದಿದ್ದರೆ, ಅದು

ನಡೆವ ಖಚಿತ ಸೂಚನೆ ಗಳೇನಾದರೂ ಕಂಡು ಬಂದಿದ್ದರೆ, ಅವರು, ಆ ಸುಳಿಯೊಳಗೆ ಧುಮುಕುವುದಕ್ಕೆ ಸಿದ್ಧರಾಗಿದ್ದರು. ಇಲ್ಲೇನು ಬೆಂಕಿಯ ಮಳೆಗರೆಯುತ್ತಿದೆಯೋ, ರಕ್ತದ ಹೊಳೆ ಹರಿಯುತ್ತಿದೆಯೋ ಎಂದು ಕೊಂಡು ಬಂದವರಿಗೆ, ಇಲ್ಲಿ ಅಂಥದೇನೂ ಕಾಣದು. ಏನೂ ಇಲ್ಲ, ಬರಿದೆ "ತೋಳ, ತೋಳ" ಎಂದು ಕೂಗಿದ ಕುರುಬನ ಸುಳ್ಳು ಹುಯ್ಯಲು ಎಂದುಕೊಂಡು ಹಿಂದಿರುಗಬೇಕೆಂದರೆ, ಅದಕ್ಕೂ ಅವರಿಗೆ ಮನಸಿಲ್ಲ. ಹೀಗೇ ಎಂದು ನಿರ್ಧಾರವಾಗಿ ಹೇಳದ ಪಟ್ಟಣಿಗರೂ, "ಅಂತೂ ಇಷ್ಟು ದಿನ ಯಾರನ್ನೂ ಪಟ್ಟಕ್ಕೆ ತರದಿದ್ದುದರಲ್ಲಿ ಏನೋ ಸಂಚು ಇದೆ" ಎಂದು ಹೇಳಿ ಹಿಂದಿರುಗಬೇಕೆನ್ನುವ ಅವರ ಮನಸ್ಸನ್ನು ತಡೆಯುತ್ತಾರೆ. ಹೀಗೆ ಇರಲು ಕಾರಣವಿರದೆ, ಹೋಗಲು ಮನಸು ಬರದೆ, ಎರಡು ದಿನ ಊರಲ್ಲಿ ಅಲೆದರು. ಆದರೆ ಹಾಗೆ ಎಷ್ಟು ದಿನ ಇರಲು ಸಾಧ್ಯ? ಕಡೆಗೆ ನಾಲ್ಕಾರು ಹಳ್ಳಿಯ ಮುಖಂಡರು ಕಲೆತು ತಮ್ಮತಮ್ಮಲ್ಲೇ ವಿಚಾರ ಮಾಡಿಕೊಂಡು ಯಾವುದನ್ನೂ ನೇರವಾಗಿ ಪ್ರಧಾನಿಗಳನ್ನೇ ವಿಚಾರಿಸಿ, ಯಾವುದಾದರೊಂದು ರೀತಿ ಮನಸಿಗೆ ನೆಮ್ಮದಿ ಮಾಡಿಕೊಂಡು ತಮ್ಮ ತಮ್ಮ ಹಳ್ಳಿಗಳಿಗೆ ಹಿಂದಿರುಗುವುದೆಂದು ನಿಶ್ಚಯ ಮಾಡಿಕೊಂಡರು.

ಅವರ ನಿಶ್ಚಯ ಬಲದಿಂದಲೋ ಎಂಬಂತೆ, ಅವರು ಪ್ರಧಾನಿಯ ಬಳಿಗೆ ಹೋಗದೆ, ಪ್ರಧಾನಿಯೇ ಅವರನ್ನು ಕರೆಸುವ ಸಂದರ್ಭ ತಾನಾ ಗಿಯೇ ಒದಗಿ ಬಂದಿತು.

೬

ಅಂದು ನವರಾತ್ರಿಯ ತದಿಗೆ. ಪ್ರತಿವರುಷವೂ ನವರಾತ್ರಿಯಲ್ಲಿ ನಾಯಕರು ನಡೆಸುತ್ತಿದ್ದ ವಿಶೇಷ ಓಲಗದ ಉತ್ಸವಗಳಾವೂ ಇಲ್ಲದೆ, ಅವರ ವಿಶೇಷ ಓಲಗಸಾಲೆ ಬಣ್ಣದ ಚಾವಡಿ ಭಣಗುಟ್ಟುತ್ತಿದ್ದರೂ, ದೇವಾಲಯಗಳಲ್ಲಿ ಮಾತ್ರ ನವರಾತ್ರಿಯಲ್ಲಿ ನಡೆಯಬೇಕಾದ ಪೂಜೆಗಳಿಗೆ ಕೊರತೆ ಬಂದಿಲ್ಲ. ಅದರಲ್ಲಿಯೂ ಏಕನಾಥೇಶ್ವರಿ, ಉತ್ಸವಾಂಬಾ, ಬರಗೇರಮ್ಮ, ತಿಪ್ಪಲಗಟ್ಟಮ್ಮ ಮೊದಲಾದ ಉಗ್ರದೇವತೆಗಳ ಗುಡಿ ಯಲ್ಲಿಯ ಪೂಜೆಯ ವೈಭವ, ಊರಿನ ಕಣ್ಣನ್ನೆಲ್ಲಾ ತಮ್ಮತ್ತ ಸೆಳೆದಿವೆ.

ಬೇರಾವ ಉತ್ಸವಗಳ ಆಕರ್ಷಣೆಯೂ ಇಲ್ಲದೆ ಬೇಸರಗೊಂಡ ಜನ, ದೇವಾಲಯದ ಬಳಿಯೇ ಕಿಕ್ಕಿರಿದಿದ್ದಾರೆ.

ಉಳಿದೆಲ್ಲ ದೇವಾಲಯಗಳಿಗಿಂತಲೂ ಹೆಚ್ಚು ಜನ ಉತ್ಸವಾಂಬಾ ದೇವಾಲಯದ ಬಳಿಯಲ್ಲಿ ನೆರೆದಿದ್ದಾರೆ. ದೇವಾಲಯದ ಇದಿರಿನಲ್ಲೇ ನಾಲ್ಕು ಕಡೆಯ ಪೇಟೆಗಳೂ ಕೂಡುವುದರಿಂದ, ದೇವಾಲಯಕ್ಕೆ ಬಂದ ಜನರೊಂದಿಗೆ ಪೇಟೆಗೆ ವ್ಯಾಪಾರಕ್ಕೆ ಬಂದ ಬಂದವರೂ ಕಲೆತಿದ್ದಾರೆ. ಅವರೊಂದಿಗೆ ಈ ಗುಂಪನ್ನು ನೋಡಲು ಬಂದವರೂ ಇದ್ದಾರೆ; ಹಾಗೆಯೇ ಈ ಗುಂಪಿನಿಂದ ಉಪಯೋಗ ಪಡೆಯಲೆಂದು ಬಂದವರೂ ಅವರಲ್ಲಿ ಬೆರೆತು, ಗುಂಪನ್ನು ಬೆಳೆಸಿದ್ದಾರೆ. ಗುಂಪಿನ ಗಜಿಬಿಜಿಯೊಂದಿಗೆ, ದೇವಾಲಯದತ್ತಣಿಂದ ಕೇಳಿ ಬರುವ ಉರುಮೆ, ತಮಟೆ, ನಗಾರಿಗಳ ಸದ್ದೂ ಬೆರೆತು, ಗಾಳಿಗೇ ಕಳ್ಳು ಕುಡಿಸಿದಂತಾಗಿದೆ.

ಸಂಜೆಯ ಬೆಳಕು ಕರಗಿ, ಕತ್ತಲು ಹೆಜ್ಜೆ ಇಕ್ಕುವ ಹೊತ್ತಿನಲ್ಲಿ, ಗುಂಪಿಗೆ ಮತ್ತೊಂದು ಆಕರ್ಷಣೆ ದೊರೆಯಿತು—ಮೇಲುದುರ್ಗದತ್ತಣಿಂದ ಬಂದ ಕಾಲಜ್ಞಾನದಿಂದ ದಾಸಯ್ಯನೊಬ್ಬನನ್ನು ನೋಡಿದಾಗ. ಅವನ ರೂಪವೇ ಎಲ್ಲರ ಕಣ್ಣನ್ನು ಸೆಳೆಯುವಂತಿತ್ತು. ಅವನ ಗುಲಾಬಿ ಬಣ್ಣದ ಪಂಚೆ, ಕಾವಿಯ ಅಂಗರೇಖು, ಅದರ ಮೇಲೆ ಬಣ್ಣದ ವಸ್ತ್ರ, ತಲೆಯ ಮೇಲೊಂದು ಭಾರಿ ಕಾವಿ ಬಣ್ಣದ ಬಟ್ಟೆಯ ಮುಂಡಾಸು, ಅದಕ್ಕೊಂದು ನವಿಲುಗರಿಯ ತುರಾಯಿ. ಎದೆಯ ಮೇಲಿನ ಚೆನ್ನಾಗಿ ಸಿಕ್ಕಿ ಹೊಳಪುಗೊಟ್ಟ, ಹಿತ್ತಾಳೆಯ ವೀರಭದ್ರ ಮೂರ್ತಿಯಿದ್ದ ಹಲಗೆ. ಹಣೆಯ ಮೇಲೆ ವಿಭೂತಿಯ ಮೂರು ಪಟ್ಟೆ ಅಷ್ಟು ದೂರಕ್ಕೂ ಕಾಣಿಸುವಂತಿದೆ. ಕಣ್ಣಿನ ಕೆಳರೆಪ್ಪೆಯ ಕೆಳಗೂ ವಿಭೂತಿ ಹಚ್ಚಿದುದರಿಂದ ದಪ್ಪ ಮೀಸೆ ತುಂಬಿದ ಗಡಸು ಮುಖದಲ್ಲಿಯ ಆ ಕಣ್ಣುಗಳೂ ಏನೋ ಒಂದು ಬಗೆಯ ಉಗ್ರತೆಯಿಂದ ಹೊಳೆಯುತ್ತಿವೆ. ಎದುರಿಗೆ ಕಂಡ ಯಾರೂ ಒಂದುಗಳಿಗೆ ತಟಕ್ಕನೆ ನಿಂತು ನೋಡಬೇಕು—ಅಂಥ ರೂಪ. ಅದೇ ಸಾಲದೆಂಬಂತೆ, ಹೆಜ್ಜೆ ಇಟ್ಟಾಗೊಮ್ಮೆ ಘಣಘಣಿಸುವ ದೊಡ್ಡ ಕಂಚಿನ ಘಂಟೆ ಅವನ ಸೊಂಟದಲ್ಲಿ. ಇದರೊಂದಿಗೆ ಒಂದು ಕೈಯ್ಯಲ್ಲಿ ದೀಪಸ್ತಂಭ, ಮತ್ತೊಂದು ಕೈಯಲ್ಲಿ ಎತ್ತಿ ಹಿಡಿದ, ಹೊಳೆವ ಬಿಚ್ಚುಗತ್ತಿ. ಈ ರೂಪ ಅಷ್ಟು ದೂರ

ದಲ್ಲಿ ಬರುತ್ತಿರುವಾಗಲೇ, ಜನದ ಕಣ್ಣು ಅವನತ್ತ ತಿರುಗಿತು.

ಅವನು ನೇರವಾಗಿ ಬಂದು ಜನ ದಟ್ಟಣಿಸಿದ್ದ, ದೇವಾಲಯದ ಮುಂದಿನ ಧ್ವಜಸ್ತಂಭದ ಮುಂದೆ ನಿಂತು, ಸೊಂಟದಲ್ಲಿಂದ ಘಂಟೆಯನ್ನು ಎಲ್ಲರ ಕಿವಿಗೂ ಕೇಳಿಸುವಂತೆ ಬಾರಿಸಿ......

'ಎಲ್ಲೈ ನೆರೆದಿರುವಂಥಾ ಜನಗಳಿರಾ ಕೇಳಿರಯ್ಯಾ, ಕೇಳಿರಯ್ಯಾ, ಚನ್ನಬಸವೇಶ್ವರನ ಕರುಣದಿಂ ವೀರ ವಸಂತರಾಯ ಬರುವಂಥ ವಾರ್ತೆಯ ಪೇಳುವೆನು ಕೇಳಿರಯ್ಯಾ. ಹಕ್ಕಿ ಗೂಡಿದಂಥ ಮಾತು, ಗ್ರಹ ಹೇಳಿದಂಥ ಮಾತು, ಗುರುಕಂಠ ಸಾರಿದಂಥ ಮಾತು—ಕಿವಿಗೊಟ್ಟು ಕೇಳಿರಯ್ಯಾ. ಹಿಂದಾದದ್ದು ಮುಂದಾದೀತು, ಮುಂದಾಗುವುದ ಹಕ್ಕಿ ಇಂದೇ ಹೇಳೀತು ಕೇಳಿರಯ್ಯಾ, ಕೇಳಿರಯ್ಯಾ'

—ಎಂದು ತಾರಸ್ವರದಲ್ಲಿ ಕೂಗಿ ಮತ್ತೆ ಘಂಟೆಯನ್ನು ಬಾರಿಸಿದ. ಅವನು ಏನು ಹೇಳುವನೋ ಎಂಬ ಕುತೂಹಲದಿಂದ ಜನರೆಲ್ಲರೂ ಅವನತ್ತ ತಿರುಗಿ ನಿಂತರು. ಎಲ್ಲರ ದೃಷ್ಟಿಯೂ ತನ್ನತ್ತ ತಿರುಗಿದೆ ಎಂಬುದನ್ನು ಖಚಿತಮಾಡಿಕೊಂಡಂತೆ ಅವನು ಹೇಳಿದ—

"ಎಲ್ಲೈ ಕಲಿಕಾಲದ ಕಂದಗಳಿರಾ ಕೇಳಿರೋ ಕೇಳಿರೋ—

ಬೆತ್ತಾಲೆ ಕುದುರೆ ಹತ್ತಿ
ಕತ್ತೀ ಗುರಾಣಿ ಹಿಡಿದು
ನೆತ್ತಾರ ಚಿಮ್ಮುತ ಬರುತಾನೋ—ವಸಂತರಾಯ
ಕತ್ತಲೆ ಕವಿದೀತೋ'

—ಎಂದು ಗಗ್ಗರ ಸ್ವರದಲ್ಲಿ ಹಾಡು ಹೇಳಿ—

"ಮೂರುಕಣ್ಣಿನ ಶಿವನು ಸಾರಿ ಹೇಳಿದನಿಂತು—ಆರುತಲೆ ಕಳೆದೀತು; ಅರಸು ಬದಲಾದೀತು; ಸಿದ್ಧರಾಜ್ಞೆಯನು ನಡೆಸಿದವ ಸಿದ್ಧನಾದಾನು; ಓಲೈಸಿದವನೆ ಓಲಗವ ನಡೆಸಿಯಾನು; ಪಟ್ಟ ಬಿಟ್ಟವರೆ ಪಟ್ಟವನ್ನು ಕೇಳಿಯಾರು; ಕೇಳಿ, ಕಲ್ಲಿನಲ್ಲಿ ಕಣ್ಣೀರ ಕರಸಿಯಾರು, ನೆಲದೊಳಗೆ ನೆತ್ತರನು ಹರಿಸಿಯಾರು. ಕುಲಸ್ತ್ರೀ ಕೆಟ್ಟು, ಬ್ರಾಹ್ಮಣ ಚಂಡಾಲನಾಗಿ, ಬಂಜೆ ಬೆಸಲೆಯಾದಾಳು, ನೆಲವ ಬೆಳೆ ನುಂಗೀತು, ನೀರು ವಿಷವಾದೀತು—ನಂಬಬೇಡಿ. ವೀರಭದ್ರನ ಖಡ್ಗ ಮತ್ತೆ ಅವತಾರಮಾಡ

ಲಿದೆ; ಇಳೆಯೊಳಗೆ ಹೊಳೆಯಲಿದೆ, ಕತ್ತಲೆಯ ಕಳೆಯಲಿದೆ–ಶರಣೆನ್ನಿರೋ ಮಕ್ಕಳಿರ ಶರಣೆನ್ನಿರೋ."

—ಎಂದು ಮಾತನ್ನು ನಿಲ್ಲಿಸಿ ಮತ್ತೆ ಘಂಟೆಯನ್ನು ಬಾರಿಸತೊಡಗಿದ.

ಅವನು ಅಷ್ಟು ಹೇಳುವವರೆಗೂ ಉಸಿರು ಬಿಗಿಹಿಡಿದು, ಅವನು ಹೇಳುವುದನ್ನು ಕೇಳುತ್ತಿದ್ದ ಗುಂಪಿನಲ್ಲಿ, ಅವನು ಮಾತು ನಿಲ್ಲಿಸಿದ ಕೂಡಲೇ ಪಿಸುಮಾತು ಆರಂಭವಾಯಿತು. ಅದುವರೆಗೂ ಸಡಿಲವಾಗಿದ್ದ ಗುಂಪಿನಲ್ಲಿ ಏನೋ ಬಿಗಿತ ಮೂಡಲಾರಂಭವಾಯಿತು. ಇಂಥಾ ಕಾಲಜ್ಞಾನದ ಅಯ್ಯಗಳನ್ನು ಎಷ್ಟೋ ಜನರನ್ನು ಅವರು ಕಂಡಿದ್ದರು; ಅವರು ಹೇಳುವ ಕಾಲಜ್ಞಾನದ ವಚನಗಳನ್ನು ಅವರು ಕೇಳಿದ್ದರು. ಆದರೆ ಈ ಬಗೆಯ ವಚನವನ್ನು ಅವರು ಯಾರೂ, ಎಂದೂ ಕೇಳಿರಲಿಲ್ಲ. ಹೇಳುವ ಮಾತಷ್ಟೇ ಅಲ್ಲದೆ, ರೀತಿಯೂ ಹೊಸದಾಗಿ, ಎಲ್ಲರಲ್ಲೂ ಏನೋ ಒಂದು ಬಗೆಯ ಸಂಶಯ ಕಲಕಿತು. ಯಾರೋ ಒಬ್ಬ ಅಷ್ಟು ಜನಕ್ಕೆ ಕೇಳಿಸುವ ಹಾಗೇ—

"ಇವನು ಕಾಲಜ್ಞಾನದ ಅಯ್ಯ ಅಲ್ಲ ಯಾರೋ ಹೇಳ್ಕೊಟ್ಟು ಕಳಿಸವರೆ" ಎಂದ.

"ಛೇ—ಉಂಟಾ ?"

—ಎಂದಿತು ಮತ್ತೊಂದು ಧ್ವನಿ.

"ಅವನ್ಯಾರೋ—ಅವನ್ನೇ ಕೇಳು"

—ಎಂದಿತು ಇನ್ನೊಂದು ಕಂಠ.

"ಎರಡು ಮಡಗೋ—ಸುಳ್ಳು ಸುಳ್ಳು ಬೊಗಳತಾ ಅವನೆ. ಹಿಡಕೊಳ್ಳೋ ಅವನ್ನ"

—ಎಂದು ಚೀರಿತು ಕ್ರೋಧೋದ್ದೀಪಿತವಾದ ಮತ್ತೊಂದು ಕಂಠ. ಆ ಮಾತು ಕಿವಿಗೆ ಬೀಳುತ್ತಿದ್ದಂತೆಯೇ ಕಾಲಜ್ಞಾನದವನು ತನ್ನ ಕಾಲಿಗೆ ಬುದ್ಧಿ ಹೇಳಲು ಸಿದ್ಧನಾದ. ಕತ್ತಿ ಹಿಡಿದ ಅವನ ಕೈ ನಡುಗಲಾರಂಭಿಸಿತು. ಗುಂಪಿನಿಂದ ಹತ್ತಾರು ಜನ ಬಂದು ಅವನನ್ನು ಸುತ್ತಿಕೊಂಡರು. ಯಾರೋ ಅವನ ಮುಂಡಾಸವನ್ನು ಕಿತ್ತರು. ಅವನು ತನ್ನ ಮುಂಡಾಸವನ್ನ ರಕ್ಷಿಸಿ

ಕೊಳ್ಳುತಿರುವಾಗಲೇ, ಕತ್ತು ಕುಸಿಯುವಂತೆ ನೆತ್ತಿಯ ಮೇಲೆ ಒದೆ ಬಿದ್ದು, ನಾಯಿಯಂತೆ ಚೀರಲಾರಂಭಿಸಿದ. ಅವನ ಕೂಗು ಕೇಳುತ್ತಿದ್ದ ಹಾಗೇ ದೇವಾಲಯದ ಬಳಿ ಇದ್ದ ಕಾವಲು ಭಟರ ತುಂಡೊಂದು, ಅವನನ್ನು ಬಿಡಿಸಿಕೊಳ್ಳಲೆಂದು ಗುಂಪಿನಲ್ಲಿ ನುಗ್ಗಿತು. ಅದರಿಂದ ಗದ್ದಲ ತಗ್ಗದೆ ಮತ್ತಷ್ಟು ಹೆಚ್ಚಾಗಿ, "ಇದು ದಳವಾಯಿಗಳ ಪಿತೂರಿ ಕಣ್ರಲಾ—ಈ ಅಯ್ಯ ದಳವಾಯಿ ಕುನ್ನಿ. ಅದಕ್ಕೇ ಸಿಪಾಯಿಗಳನ್ನು ಕಳಿಸವನೆ. ಅವನ ಬಿಡಬೇಡಿ. ಹಿಡಕೊಳ್ಳಿ" ಎಂದು ನಾಲ್ಕಾರು ಕಂಠ ಚೀರಿದುವು. ಆ ಕೂಗಿನಿಂದ ಉದ್ರಿಕ್ತವಾದ ಗುಂಪು ಸಿಪಾಯಿಗಳ ಮೇಲೇ ನುಗ್ಗಿತು. ಸಿಪಾಯಿಗಳೂ ಕತ್ತಿ ಹಿರಿದು, ಒಬ್ಬಿಬ್ಬರನ್ನು ಸದೆದರು. ಒಂದು ತಲೆ ನೆಲಕ್ಕುರುಳಿತು. ಗುಂಪು ಕೆಂಪು ಕಂಡ ಗೂಳಿಯಾಯಿತು. ಗುಂಪಿನ ಜನದಲ್ಲೇ ಇಬ್ಬಣವಾಗಿ ಬೀದಿಯುದ್ಧ ಆರಂಭವಾಯಿತು. ಗುಂಪಿನಲ್ಲಿದ್ದ ಹಳ್ಳಿಯ ಜನವಂತೂ ಮೊದಲೇ ಕೆರಳಿ ಬಂದಿತ್ತು. ಈಗಂತೂ ಅವರಿಗೆ ತಾವು ಕೇಳಿದುದೆಲ್ಲಾ ನಿಜವೆನಿಸಿ, ಕೆರಳಿದ ಕೋಣಗಳಂತೆ ಸೈನಿಕರ ಮೇಲೆ ಬಿದ್ದರು. ಹೋರಾಡುವವರಿಗಿಂತ, ಅದನ್ನು ನೋಡಿ ಚೀರಾಡುವವರ ಧ್ವನಿ ಬಲವಾಗಿ, ಗದ್ದಲ ದುರ್ಗದಲ್ಲೆಲ್ಲಾ ವ್ಯಾಪಿಸಿತು.

ಈ ಕೂಗು ಕೇಳಿಸಿದಂತೆ ಮತ್ತಷ್ಟು ಜನ ಕುದುರೆಯಾಳುಗಳು ಸೈನಿಕರ ರಕ್ಷಣೆಗೆ ಗುಂಪಿನ ಮೇಲೆ ನುಗ್ಗಿದರು. ಈ ಸುದ್ದಿ ದುರ್ಗದಲ್ಲಿ ಅಲ್ಲಲ್ಲಿ ಸುತ್ತುತ್ತಿದ್ದ ಇತರ ಹಳ್ಳಿಯವರ ಕಿವಿಗೂ ಬಿದ್ದು "ಹಳ್ಳಿಯೋರ್ನೆಲ್ಲಾ ಸಿಪಾಯಿಗಳು ಕೊಲ್ತಾ ಅವ್ರಂತೆ, ನಡೀರೋ" ಎಂದು ಒಬ್ಬೊಬ್ಬರೂ ಕೈಗೆ ಸಿಕ್ಕಿದುದನ್ನೇ ಅಸ್ತ್ರವಾಗಿ ಮಾಡಿಕೊಂಡು ನುಗ್ಗಿದರು.

ಗುಂಪು ಬಲಿಯಿತು, ಗದ್ದಲ ಹೆಚ್ಚಿತು—ಒಂದು ಗಂಟೆಯ ಹೊತ್ತಿನೊಳಗಾಗಿ, ದೇವಾಲಯದ ಮುಂದಿನ ಬೀದಿ ರಣರಂಗವಾಯಿತು. ಮೇಲು ದುರ್ಗದಿಂದ ಭಾರಿ ಸೇನೆಯಷ್ಟೇ ಅಲ್ಲ, ಫಿರಂಗಿಯ ಗಾಡಿಗಳೇ ಬರಬೇಕಾಯಿತು—ಗುಂಪನ್ನು ಚದುರಿಸಲು.

ಅಂತೂ ನಡುರಾತ್ರಿಯ ವೇಳೆಗೆ, ದೇವಾಲಯದ ಮುಂದಿನ ಚೌಕದಲ್ಲಿ ಹತ್ತು ಹೆಣ ಬಿದ್ದು, ಗದ್ದಲ ಹತೋಟಿಗೆ ಬಂದಿತು. ಸೈನಿಕರು ಕೈಗೆ ಸಿಕ್ಕಿದವರನ್ನು ಹಿಡಿದು ಸೆರೆಮನೆಗೆ ತಳ್ಳಿದರು.

ರಾತ್ರಿಯೆಲ್ಲಾ ಕುದುರೆಯ ಪಡೆ ದುರ್ಗದ ಮೇಲೆ ಕೆಳಗೆ ಗಸ್ತು ತಿರುಗುತ್ತಿತ್ತು.

## ೧೦

ದುರ್ಗದ ಪೇಟೆಯಲ್ಲಿ ನಡೆದ ಗದ್ದಲದ ಸುದ್ದಿಯನ್ನರಿತು ದಳವಾಯಿ ಮುದ್ದಣ್ಣ ಕೆಣಕಿದ ಕಾಳಿಂಗ ಸರ್ಪವಾಗಿದ್ದ.

ಎರಡು ದಿನದಿಂದ ದುರ್ಗಕ್ಕೆ ಸುತ್ತಮುತ್ತಲ ಹಳ್ಳಿಯವರು ವಿನಾ ಕಾರಣ ಬಂದು ಕಲೆಯುತ್ತಿದ್ದಾರೆಂದು ಸುದ್ದಿ ತಿಳಿದಾಗಲೇ ಅವನ ಮನಸ್ಸಿಗೆ ಇರಿಸು ಮುರಿಸಾಗಿತ್ತು. ಅವರು ಹಾಗೇಕೆ ಬಂದಿದ್ದಾರೆಂಬುದನ್ನು ತಿಳಿಯಲು ಕಳುಹಿಸಿದ ಅವನ ಕಡೆಯ ಗೂಢಚಾರರು ಹಳ್ಳಿಯವರು ಬೀಡುಬಿಟ್ಟದ್ದೆಡೆಗಳಲ್ಲೆಲ್ಲಾ ತಿರುಗಾಡಿ, ತಾವು ಸಂಗ್ರಹಿಸಿದ ಸುದ್ದಿಯನ್ನು ತಂದು ಆತನಿಗೆ ವರದಿಮಾಡಿದ್ದರು. ಗೂಢಚಾರರು ಹೇಳಿದ ಸುದ್ದಿಯನ್ನು ಕೇಳಿದಾಗ, ಕಾರ್ಗಾಲದ ಮೋಡಕವಿದ ಮುಗಿಲಿನಂತಾದ ಆತನ ಮನಸ್ಸಿನಲ್ಲೀಗ ಕ್ರೋಧದಸಿಡಿಲು ಮಸೆಯಲು ಆರಂಭವಾಗಿತ್ತು. ಎಂತಲೇ ಉತ್ಸವಾಂಬಾ ದೇವಾಲಯದ ಬಳಿ ಗಲಭೆಯಾಗುತ್ತಿದೆಯೆಂಬ ಸುದ್ದಿ ಕೇಳಿದಾಗ, 'ಆದಷ್ಟು ತಲೆ ಕತ್ತರಿಸಿ, ಈ ಗದ್ದಲವನ್ನು ಮಟ್ಟ ಹಾಕಿ. ಇಂಥ ಪುಂಡಾಟ ಮತ್ತೊಮ್ಮೆ ತಲೆ ಎತ್ತಬಾರದು' ಎಂದು ಕಟ್ಟಪ್ಪಣೆ ಮಾಡಿ ಕಳುಹಿಸಿದ್ದ, ತನ್ನ ತಮ್ಮ ರಾಯಣ್ಣನನ್ನು. ಹತ್ತಾರು ಹೆಣ ಉರುಳಿ ಗದ್ದಲ ತಮ್ಮಣೆಯಾಯಿತೆಂಬುದನ್ನು ಕೇಳಿದ ಮೇಲೂ ಆತನ ಮನಸ್ಸಿಗೆ ಶಾಂತಿಯಾಗಿರಲಿಲ್ಲ. ಹುಚ್ಚು ಕ್ರೋಧ ಅವನೆದೆಯಲ್ಲಿ ಕಡೆಯುತ್ತಿತ್ತು.

ಇರುಳೆಲ್ಲಾ ಸಿಟ್ಟಿನಲ್ಲಿ ಕಣ್ಣು ಮುಚ್ಚದೆ ಕಳೆದ ದಳವಾಯಿ, ಹಗಲು ಹರಿಯುತ್ತಿದ್ದ ಹಾಗೇ, ರಾಯಣ್ಣನನ್ನು ಕರೆದು, " ಈ ಹಳ್ಳಿಗರ ಮುಖಂಡರು ಯಾರಾದರೂ ಇದ್ದರೆ ಅವರನ್ನು ಕರೆದುಕೊಂಡು ಬಾ. ಯಾವ ಕೇಡುಗಾಲಕ್ಕೆ ಅವರಿಗೆ ಈ ಬುದ್ಧಿ ಬಂದಿದೆಯೇ ಕೇಳೋಣ. ಒಳ್ಳೆಯ ಮಾತಿನಲ್ಲಿ ಅವರೇ ಬರದಿದ್ದರೆ, ಹಿಂಗಟ್ಟು ಮುಂಗಟ್ಟು ಬಿಗಿಸಿ ಎಳೆದು ಕೊಂಡು ಬಾ. ಅಗತ್ಯವಾದಷ್ಟು ಜನ ಸಿಪಾಯಿಗಳನ್ನು ಕರೆದು ಕೊಂಡು ಹೋಗು." ಎಂದು ಅಪ್ಪಣೆ ಮಾಡಿ, ರಾಯಣ್ಣ ಅವರನ್ನು ಕರೆತರುವುದನ್ನೇ ಕಾದು ಚಾವಡಿಯಲ್ಲಿ ಕುಳಿತ.

ಮುದ್ದಣ್ಣನ ಮನೆಯ ಮುಂದಿನ ಚಾವಡಿ, ಅವನ ದರ್ಪಕ್ಕೆ ಹಿಡಿದ ಬಾವುಟದಂತಿತ್ತು; ದಳವಾಯಿಯ ಮನೆಯ ಚಾವಡಿಯಾದರೂ ಅರಸರ ಓಲಗಸಾಲೆಯಂತಿತ್ತು. ನಾಲ್ಕು ಅಂಕಣ ವಿಸ್ತಾರವಾದ ಆ ಚಾವಡಿಯ ಒಂದು ಬದಿಗೆ, ಹತ್ತು ಜನ ಕುಳಿತುಕೊಳ್ಳುವಷ್ಟು ವಿಶಾಲ ವಾದ ಪೀಠವನ್ನು ಹಾಕಿ, ಅದರ ಮೇಲೆ ಮಕಮಲ್ ಬಟ್ಟೆಯ ಹೊದಿಕೆ ಯನ್ನುಳ್ಳ ಹಾಸನ್ನು ಹಾಸಿದ್ದರು. ಪೀಠದ ಬೆನ್ನಿಗೂ ಅಷ್ಟೇ ದೊಡ್ಡ ದಾದ, ಜರಿಯ ಕಸೂತಿಯ ಚಿತ್ರಗಳನ್ನುಳ್ಳ ಒರಗುದಿಂಬು ಇಡಲ್ಪ ಟ್ಟಿತ್ತು. ಅದರ ಎರಡು ಪಕ್ಕದಲ್ಲೂ ಗಾಳಿ ಹಾಕುವ ಇಬ್ಬರು ದಾಸಿಯರು. ಅವರಿಗೆ ಅಷ್ಟು ದೂರದಲ್ಲಿ ಇಬ್ಬದಿಯಲ್ಲೂ ಬಿಚ್ಚುಗತ್ತಿಯನ್ನು ಧರಿಸಿದ, ಭೀಮಕಾಯರಾದ ಅಂಗರಕ್ಷಕರು. ಅಂಗಳದಿಂದ ಚಾವಡಿಯನ್ನು ಪ್ರವೇಶಿಸಿದವನಿಗೆ, ತಾನು ಬಂದಿರುವುದು ದಳವಾಯಿಗಳ ಚಾವಡಿ, ಇಲ್ಲಿ ಭಯಭೀತಿಯಿಂದ ವಿನೀತರಾಗಿ ನಡೆದುಕೊಳ್ಳಬೇಕು ಎಂಬುದನ್ನು ಸಾರಿ ಹೇಳುವಂತೆ ಅಲ್ಲಲ್ಲಿ ಶಸ್ತ್ರಧಾರಿಗಳಾದ ಸೈನಿಕರು ಕಾವಲು ನಿಂತಿರು ವುದೇ ಅಲ್ಲದೆ, ಗೋಡೆಗಳ ಮೇಲೂ ಬಗೆಬಗೆಯ ಶಸ್ತ್ರಗಳು, ನೋಡು ವವನ ಮನದಲ್ಲಿ ಭೀತಿ ಕವಿಸುತ್ತಾ ತೂಗಿವೆ. ಅದೇ ಸಾಲದೆಂಬಂತೆ, ಪೀಠದ ಕೆಳಗೆ, ಆತನ ಕಾಲು ಇಡಲು ಇಟ್ಟ ಸಣ್ಣ ಪೀಠದ ಬಳಿಯಲ್ಲಿಯೇ ದೆವ್ವದಂಥ ಬೇಟೆಯ ನಾಯಿ, ನಾಲಿಗೆಯನ್ನು ಹೊರಚಾಚಿ, 'ಹೂ' ಎಂದ ಕೂಡಲೆ ಹಾರಲು ಸಿದ್ಧವಾಗಿ ಒರಗಿದೆ.

ತನ್ನ ಪಾದದಿಂದಲೇ ಆ ನಾಯಿಯ ನೆತ್ತಿಯನ್ನು ನೇವರಿಸುತ್ತಾ, ಆಷ್ಟು ದೂರದಲ್ಲಿ ನಿಂತ ದಾಸಿಯೊಬ್ಬಳು ಹಿಡಿದ ಹುಕ್ಕದ ನೀಳವಾದ ನಳಿಗೆಯ ತುದಿಯನ್ನು ತನ್ನ ತುಟಿಯ ಒಂದು ಕೊನೆಯಲ್ಲಿಟ್ಟು ಹೊಗೆ ಯನ್ನೆಳೆದು, ನಿಧಾನವಾಗಿ ಹೊಗೆಯನ್ನು ತುಟಿಯ ಮತ್ತೊಂದು ಕೊನೆ ಯಲ್ಲಿ ಬಿಡುತ್ತಾ, ಮೈಯನ್ನು ನೀಳವಾಗಿ ಚಾಚಿ ಒರಗಿದ್ದ ಮುದ್ದಣ್ಣ- ರಾಯಣ್ಣ ಬರುವುದನ್ನೇ ಕಾಯುತ್ತಾ. ಬಿಗಿದ ಅವನ ಮುಖಮುದ್ರೆ ಆಸ್ಫೋಟನಕ್ಕೆ ಹೊತ್ತು ಕಾದು ಹೊಗೆಯಾಡುತ್ತಿರುವ ಜ್ವಾಲಾಮುಖಿ ಯಂತಿತ್ತು.

ಕೊಂಚ ಹೊತ್ತಿನಲ್ಲೇ ಅಂಗಳವಲ್ಲಿ ಕುದುರೆಗಳು ನಿಂತ ಸದ್ದಾಗಿ

ಬಾಗಿಲ ಆಳು ಬಂದು 'ದಳವಾಯಿ ರಾಯಣ್ಣನವರು ಬಂದಿದಾರೆ' ಎಂದು ಹೇಳಿದ. 'ಅವರನ್ನು ಒಳಗೆ ಬಿಡು' ಎಂದು ಹೇಳಿದ ಮುದ್ದಣ್ಣ, ಆದು ವರೆಗೂ ವೈ ಚಾಚಿದ್ದವನು, ಚಟಕ್ಕನೆ ಸಿಡಿದು ಕುಳಿತ. ಆವನು ಕುಳಿತ ರೀತಿ, ಬೇಟೆಯ ಮೇಲೆ ಲಂಘಿಸಲು ಸಿದ್ಧವಾದ ಹುಲಿಯಂತಿತ್ತು.

'ಏನು ಯಾರಾದರೂ ಸಿಕ್ಕರೇನು?'

—ರಾಯಣ್ಣ ಒಳಗೆ ಬರುತ್ತಿದ್ದ ಹಾಗೇ ಕೇಳಿದ ಮುದ್ದಣ್ಣ.

'ಒಬ್ಬ ಸಿಕ್ಕಿ ಕರೆದುಕೊಂಡು ಬಂದಿದ್ದೇನೆ,'

'ಯಾರು?'

'ಗೋಪಾಲಪುರದ ಗೌಡ—'

"ಎಲ್ಲಿದಾನೆ?"

'ಹೊರಗೆ ನಿಂತಿದ್ದಾನೆ. ಕರೆಯಲೇ'

'ಹೂ'

ರಾಯಣ್ಣ ಹೊರಗೆ ಹೋಗಿ, ಗೌಡನನ್ನು ಒಳಗೆ ಕರೆದು ತಂದ. ತನ್ನ ತಮ್ಮನೊಂದಿಗೆ ಒಳಗೆ ಬಂದ ಗೌಡನನ್ನು ದುರುಗುಟ್ಟಿ ನೋಡಿದ ಮುದ್ದಣ್ಣ.

ಗೌಡ ಒಳ್ಳೆ ಭಾರಿಯ ಆಳು. ಸುಮಾರು ಆರಡಿ ಎತ್ತರದ ಮೈ, ಎತ್ತರಕ್ಕೆ ತಕ್ಕಷ್ಟು ತುಂಬಿಕೊಂಡಿತ್ತು. ಅಂಗಿ ತೊಟ್ಟಿದ್ದರೂ, ಎದೆಯ ತೋಳ ಮಾಂಸಖಂಡಗಳು ಗರಡಿಯ ಸಾಧನೆಯಿಂದ ಹುರಿಯಾಗಿ ಬಲಿ ತಿರುವುದು ಕಾಣುವಂತಿತ್ತು. ಅಗಲವಾದ ಮುಖದಲ್ಲಿ ಬೆಳೆದ ಗಿರಿಜಾ ಮೀಸೆ ಗೌಡನ ಗಂಡಸುತನಕ್ಕೆ ಕಟ್ಟಿದ ತೋರಣದಂತಿತ್ತು. ಅವನು, ಅವನ ತಲೆಯ ಮೇಲಿನ ಗದ್ದೇಮಡಿಯ ಮುಂಡಾಸು, ಹೆಗಲ ಮೇಲಿನ ಕಂಬಳಿ, ಮೆಟ್ಟಿದ ಗಿರಕಿ ಚಡಾವು-ಒಂದೊಂದನ್ನೂ ಕಣ್ಣ ನೋಟದಿಂದಲೇ ಸೀಳುವಂತೆ ನೋಡಿದ ಮುದ್ದಣ್ಣ.

ಆದರೆ ಒಳಗೆ ಬಂದು ದಳವಾಯಿಗೆ ಸಲ್ಲಬೇಕಾದ ರೀತಿಯಂತೆ ನಮಸ್ಕಾರ ಮಾಡಿ, ದಳವಾಯಿಯನ್ನು ದಿಟ್ಟಿಸಿ ನೋಡುತ್ತಾ ನಿಂತ ಗೌಡನ ಮೇಲೆ, ಚಾವಡಿಯಾಗಲಿ, ದಳವಾಯಿಯ ಕ್ರೂರ ನಿಶಿತ ನೋಟ ವಾಗಲಿ ಏನೂ ಪರಿಣಾಮ ಮಾಡಿದಂತಿರಲಿಲ್ಲ.

"ಏನು ಗೌಡರೇ ದುರ್ಗವೆಂದರೆ ಹೇಳಿ ಕೇಳುವವರಿಲ್ಲದ ಪುಂಡು ಕೊಂಪೆ ಎಂದು ತಿಳಿದುಬಿಟ್ಟಿರೋ?"

—ಗದ್ದರಿಸಿ ಕೇಳಿದ ಮುದ್ದಣ್ಣ.

"ತಮ್ಮ ಭಾವನೆ ಹೇಗೋ ನಾನು ಕಾಣೆ. ಆದರೆ ನಮಗ್ಯಾರಿಗೂ ಅಂಥ ಅಭಿಪ್ರಾಯವಿಲ್ಲ ಬುದ್ಧಿ"

—ಮುದ್ದಣ್ಣನ ಅಬ್ಬರದಿಂದ ಕೊಂಚವೂ ಗಾಬರಿಯಾಗದೆ ಹೇಳಿದ ಗೌಡ.

"ಹಾಗಾದರೆ ನಿನ್ನೆ ನಡೆದ ಪುಂಡಾಟದ ಅರ್ಥವೇನು?"

"ನಮ್ಮವರು ಯಾರೂ ಪುಂಡಾಟ ಮಾಡಿದಂತೆ ನನಗೆ ತಿಳಿದಿಲ್ಲ. ನಾನು ಕೇಳಿದ ಸುದ್ದಿಯೇ ಬೇರೆ. ಹೇಳಬಹುದು ಎಂದರೆ ಹೇಳುತ್ತೇನೆ."

"ಅದೇನು—ಹೇಳಿ."

"ಸುಮ್ಮನಿದ್ದ ನಮ್ಮವರ ಮೇಲೆ ಸೈನಿಕರೇ ಮೇಲೆಬಿದ್ದು ಕೈ ಮಾಡಿದರಂತೆ. ನಾನೇ ತಮ್ಮ ಬಳಿ ಬಂದು ಹೀಗೆ ಮಾಡಿದ್ದು ಸರಿಯಲ್ಲ, ಈ ರೀತಿ ಮಾಡಿದ ಸೈನಿಕರಿಗೆ ತಕ್ಕ ಬಂದೋಬಸ್ತು ಮಾಡಬೇಕು. ಇಲ್ಲ ವಾದರೆ ಈಗಲೇ ಹೆಸರು ಕೆಟ್ಟಿರುವ ಸೇನೆಯವರ ಹೆಸರು ಇನ್ನೂ ಕೆಟ್ಟು ಹೋಗುತ್ತದೆ ಎಂದು ಮನವಿ ಮಾಡಿಕೊಳ್ಳಬೇಕೆಂದಿದ್ದೆ. ನೀವು ಕರೆ ಸಿದ್ದೂ ಒಳ್ಳೆಯದೇ ಆಯಿತು."

"ಅಂದರೆ—ಹಳ್ಳಿಯ ಜನ ಯಾರ ಮೇಲೆ ಬಿದ್ದರೂ ಸೈನಿಕರು ಸುಮ್ಮನಿರಬೇಕಾಗಿತ್ತೆಂದೇ ನಿಮ್ಮ ಅಭಿಪ್ರಾಯವೇ? ಇದು ದುರ್ಗ ಗೌಡರೇ, ಕಾಡಲ್ಲ."

"ಅದನ್ನು ನಾನೂ ಬಲ್ಲೆ ಬುದ್ಧಿ."

"ಅದನ್ನು ತಿಳಿದಿದ್ದೂ ಹೀಗೆ ದುಡುಕಿದಿರಿ ಎನ್ನಿ."

"ದುಡುಕಿನ ಕೆಲಸವನ್ನೇನೂ ಮಾಡಲಿಲ್ಲ."

"ನಮಗೆಲ್ಲಾ ತಿಳಿದಿದೆ. ನಮಗೇ ಬುದ್ಧಿ ಕಲಿಸಬರಬೇಡಿ. ಅಧಿಕ ಪ್ರಸಂಗ ಮಾಡಿದರೆ ಏನಾಗುವುದು ಗೊತ್ತೇ?"

—ಗೌಡನನ್ನು ಏರಿಸಿದ ಧ್ವನಿಯಿಂದ ಬೆದರಿಸುತ್ತಾ ಕೇಳಿದ ಮುದ್ದಣ್ಣ.

ನಾನು ಬಲ್ಲೆ ಬುದ್ಧಿ. ದುರ್ಗದಲ್ಲಿ ಅಧಿಕಪ್ರಸಂಗಮಾಡಿದರೆ ಯಾರ ತಲೆಯೂ ಉಳಿಯುವುದಿಲ್ಲ ಎಂದು. ಅಂಥವರು ಮೊದಲು ತಮ್ಮ ತಲೆ ಜೋಪಾನಮಾಡಿಕೊಳ್ಳಬೇಕು."

—ಗೌಡ ಮಾತಿನಲ್ಲಿ ಮರ್ಯಾದೆಯನ್ನು ಬಿಡದೆ, ಆದರೂ ಮುದ್ದಣ್ಣನ ಬೆದರಿಕೆ ತನ್ನಲ್ಲಿ ಸಾಗುವುದಿಲ್ಲವೆಂಬುದನ್ನು ಸೂಚಿಸುವ ಧ್ವನಿಯಲ್ಲಿ ಹೇಳಿದ.

"ಉಳಿದವರ ವಿಚಾರ ಹಾಗಿರಲಿ. ನಿಮ್ಮ ತಲೆಯ ನೆನಪು ನಿಮಗಿದ್ದರೂ ಸಾಕು. ಉಳಿದವರಿಗೂ ಈ ಮಾತಿನ ನೆನಪು ಕೊಡಿ. ಈ ಜನವೆಲ್ಲಾ ಕೆಲಸ ಬಿಟ್ಟು ದುರ್ಗಕ್ಕೆ ಏಕೆ ಬಂದಿದೆ ಎಂಬುದು ನಮಗೆ ತಿಳಿದಿದೆ ಅವರಿಗೆ ಹೇಳಿ , ಇಂಥ ಪುಂಡಾಟ, ಬೆದರಿಕೆ ನಮ್ಮಲ್ಲಿ ನಡೆಯುವುದಿಲ್ಲ."

"ಇಷ್ಟನ್ನೇ ಅವರಿಗೆ ಹೇಳಬೇಕಾಗಿದ್ದರೆ, ಈ ಮಾತನ್ನು ನನಗಿಂತ ಚೆನ್ನಾಗಿ ತಾವು, ತಮ್ಮ ಸೇನೆಯವರು ಹೇಳಬಹುದು. ಅದಲ್ಲದೆ ಬೇರೆ ಮಾತು ಹೇಳುವುದಿದ್ದರೆ, ನಾನು ಹೇಳುತ್ತೇನೆ."

"ಅಂದರೆ........"

"ಅಂದರೆ........ನಿಮ್ಮ ಕಡೆಯವರು ಕೈದಿನಲ್ಲಿಟ್ಟಿರುವ ಹಳ್ಳಿಯ ಜನರನ್ನು ಬಿಡುಗಡೆ ಮಾಡಬೇಕು. ಇಲ್ಲವಾದರೆ........"

"ಇಲ್ಲವಾದರೆ........"

"ತಮ್ಮವರು ಕೆಲವರು ಸತ್ತಿರುವುದು, ಕೆಲವರು ಸೆರೆಯಾದದ್ದು ಹಳ್ಳಿಯವರನ್ನೆಲ್ಲಾ ಪೂರಾ ಕೆರಳಿಸಿದೆ. ಸತ್ತ ಒಂದು ತಲೆಗೆ ತಾವು ಹತ್ತು ತಲೆಯಾದರೂ ತೆಗೆದುಕೊಳ್ಳಬೇಕು ಎಂದು ಕೆರಳಿ ಕೂತಿದೆ ಜನ. ಅವರೇ ನಿಮ್ಮ ಬಳಿ ಬರಬೇಕೆಂದಿದ್ದರು, ನಾನೇ ತಡದೆ."

"ಅದರ ಪರಿಣಾಮ ಏನಾಗಬಹುದೆಂದು ಅವರಿಗೆ ಗೊತ್ತೋ?"

"ಗೊತ್ತಿದೆ. ನಿಮಗೆ ಸೈನ್ಯವಿದೆ, ಕೋಟೆ ಇದೆ, ಬೇಕೆಂದರೆ ಅಷ್ಟು ಜನವನ್ನೂ ಕೊಲ್ಲಿಸಬಹುದು. ಆದರೆ ಹಳ್ಳಿಗಳಲ್ಲಿರುವುದು ಇಲ್ಲಿಗೆ ಬಂದಿರುವಷ್ಟೇ ಜನವಲ್ಲ; ಬಂದೂಕಿಲ್ಲದ ಮಾತ್ರಕ್ಕೆ ಅವರೆಲ್ಲಾ ಬಳೆ ತೊಟ್ಟ ಜನಗಳೂ ಅಲ್ಲ. ಜನ ಮೊದಲೇ ರೇಗಿದೆ. ಕೈಯಲ್ಲಿ ಅಧಿಕಾರ ಇದೆ ಎಂದು ಮತ್ತಷ್ಟು ರೇಗಿಸಬೇಡಿ."

"ಇದೇನು—ಬೆದರಿಕೆಯೇ?"

—ಮಸೆದ ಕತ್ತಿಯ ಅಲಗಿನಂತಿತ್ತು ಮುದ್ದಣ್ಣನ ಮಾತು.

"ನಿಮ್ಮನ್ನು ಬೆದರಿಸುವಷ್ಟು ದೊಡ್ಡ ಮನುಷ್ಯ ನಾನಲ್ಲ. ಹಾಗೆಂದು ಇರುವ ಸತ್ಯದ ಮಾತು ಹೇಳಲು ನನಗೆ ಬೆದರಿಕೆಯೂ ಇಲ್ಲ. ಹಳ್ಳಿಯ ಜನ ಇಲ್ಲಿಗೆ ಬಂದದ್ದು ಏಕೆ ಎಂಬುದು ನಮಗೆ ತಿಳಿದಿದೆ ಎಂದಿರಿ. ನಿಮಗೆ ಏನು ತಿಳಿದಿದೆಯೋ ನನಗೆ ಗೊತ್ತಿಲ್ಲ. ಆದರೆ ಹಳ್ಳಿಯ ಜನ ಬಂದದ್ದು, 'ತಲೆತಲಾಂತರದ ಮಾಮೂಲು ತಪ್ಪಿ ಹೋಯಿತು. ಇದು ಒಳಿತಲ್ಲ. ಆದಷ್ಟು ಬೇಗ ಇದನ್ನು ತಪ್ಪಿಸಿ' ಎಂದು ಕೇಳಿಕೊಳ್ಳಲು. ಆದರೆ ತಾವು ಮಾತ್ರ ಹಳ್ಳಿಯ ಜನವೇನೋ ಭಂಡಾರ ದ್ರೋಹ ಮಾಡಿದಂತೆ ಮಾತಾಡುತ್ತಿದೀರ ಬುದ್ಧಿ. ಇದು ವಿಶ್ವಾಸಗಳಿಸುವ ಮಾತಲ್ಲ. ಇರುವ ವಿಶ್ವಾಸವನ್ನೂ ಕಳೆದುಕೊಳ್ಳುವ ಮಾತು. ತಾವು ದಳವಾಯಿಗಳು, ದೊಡ್ಡವರು; ನಾನು ಬಡ ಗೌಡ. ಆದರೆ ನನಗೂ ನಿಮ್ಮಷ್ಟೇ ಈ ದುರ್ಗದ ಅಭಿಮಾನ ಇದೆ. ಆದ್ದರಿಂದ ಎರಡು ಮಾತು ಹೇಳಬೇಕು ಏನಿಸುತ್ತಿದೆ. ಅಪ್ಪಣೆಯಾದರೆ ಹೇಳುತ್ತೇವೆ."

"ಹೇಳಿ."

"ತಾವು ಸಿಟ್ಟಾಗಬಾರದು. ಸುತ್ತಮುತ್ತಲ ಹಳ್ಳಿಗಳಲ್ಲೆಲ್ಲಾ ಒಂದು ಕೆಟ್ಟಸುದ್ದಿ ಹಬ್ಬಿದೆ"

"ಏನು ಸುದ್ದಿ?"

"ದಳವಾಯಿಗಳು ತಾವೇ ದುರ್ಗದ ಸಿಂಹಾಸನ ಹತ್ತಬೇಕು ಎಂದು ಒಳಸಂಚು ಮಾಡುತ್ತಿದ್ದಾರೆ. ಅದಕ್ಕೇ ನಾಯಕರು ಗತಿಸಿ ತಿಂಗಳಾಗುತ್ತಾ ಬಂದರೂ ಬೇರೆಯವರು ಪಟ್ಟಕ್ಕೆ ಬರಲಿಲ್ಲ ಎಂತ."

"ಹಾಗೆ ಸುದ್ದಿ ಹರಡಿದೆಯೇ?,"

—ಕಾಡಿನಲ್ಲಿ ಅಲೆಯುತ್ತಿದ್ದ ಪಶು, ಎಲ್ಲೋ ಶತ್ರುವಿನ ವಾಸನೆ ಬಂದು, ತಟಕ್ಕನೆ ನಿಂತು ಕಿವಿ ನಿಮಿರಿಸಿ, ಕಣ್ಣರಳಿಸಿ, ಎಚ್ಚರಿಕೆಯಿಂದ ಸುತ್ತಲೂ ನೋಡುವಂತೆ ನೋಡುತ್ತಾ ಕೇಳಿದ ಮುದ್ದಣ್ಣ.

"ಹೌದು"

"ಅದು ನಿಜವೆಂದು ನೀವು ನಂಬಿದಿರಾ ಗೌಡರೇ?"

"ಅದು ನಿಜವೋ ಸುಳ್ಳೋ ನಿಮಗೆ ಗೊತ್ತು. ನಿಮ್ಮ ಹೃದಯದಲ್ಲಿರುವ ನಿಮ್ಮ ಪರಮಾತ್ಮನಿಗೆ ಗೊತ್ತು; ನಾನೇನು ಬಲ್ಲೆ. ನನಗೆ ಗೊತ್ತಿರುವುದಿಷ್ಟು—ಈ ಮಾತು ಕೇಳಿದ ಜನ ರೊಚ್ಚಿಗೆದ್ದಿದೆ. ಪ್ರತಿ ವರ್ಷವೂ ಮಹಾಲಯದಂದು ಪಾಳಯಗಾರರು ನಮ್ಮ ಹಳ್ಳಿಗಳಿಗೆಲ್ಲಾ ಭಿಕ್ಷಕ್ಕೆ ಬರುವುದು ವಾಡಿಕೆಯಾಗಿತ್ತು. ಈ ವರ್ಷ ಚಿಕ್ಕಣ್ಣನಾಯಕರು ತೀರಿಕೊಂಡ ದುಃಖ ಇದ್ದರೂ 'ಹೊಸ ಪಾಳಯಗಾರರು ಬರುತ್ತಾರೆ. ಅವರಿಗೆ ವೈಭವದಿಂದ ಮೊದಲ ವರ್ಷದ ಕಾಣಿಕೆ ಒಪ್ಪಿಸಬೇಕು ಎಂದು ಜನ ಭಾರಿ ಸಂತೋಷದಿಂದ ಸಿದ್ಧತೆ ಮಾಡಿಕೊಂಡಿತ್ತು. ಆದರೆ ಯಾರೂ ಪಟ್ಟಕ್ಕೆ ಬರದೆ ಜನರ ಉತ್ಸಾಹಕ್ಕೆಲ್ಲಾ ಕಲ್ಲು ಬಿದ್ದು ನಿರಾಶೆಯಾದುದೇ ಅಲ್ಲದೆ, ಜನ ಯಾರು ತಮ್ಮ ಮುಂದಿನ ಪಾಳಯಗಾರರಾಗುತ್ತಾರೆಂದು ನಂಬಿದ್ದರೋ ಅವರ ಬಗ್ಗೆ ಕೆಟ್ಟ ಸುದ್ದಿಯೂ ಕಿವಿಗೆ ಬಿದ್ದು ಬೆಂಕಿಗೆ ತುಪ್ಪ ಹಾಕಿದಂತಾಗಿದೆ."

"ಮುಂದೆ ಯಾರು ಪಾಳಯಗಾರರಾಗುತ್ತಾರೆಂದು ಜನ ನಂಬಿದ್ದರು?"

"ಲಿಂಗಣ್ಣನಾಯಕರು."

"ಹಾಗೇ—ಜನರೆಲ್ಲರ ಅಭಿಪ್ರಾಯವೂ ಹಾಗೇ ಇದೆಯೇ?"

ಗೌಡ ಹೇಳಿದ ಮಾತನ್ನು ಕೇಳಿ ಮುದ್ದಣ್ಣನಿಗೆ ಸಿಡಿಲು ಬಡಿದಂತಾದರೂ, ಮಾತಿನಲ್ಲಿ ಅದನ್ನು ಕೊಂಚವೂ ತೋರ್ಪಡಿಸಿಕೊಳ್ಳದೆ, ತಾನು ಕೇಳಿದ ಸುದ್ದಿ ವಿಶೇಷ ವಾರ್ತೆಯಲ್ಲದೆ, ದಿನಬಳಕೆಯ ಮಾತೇ ಎಂಬಷ್ಟು ನಿರ್ಲಕ್ಷ್ಯದಿಂದ ಕೇಳಿದ.

"ಹೌದು. ಎಲ್ಲರ ಮನಸ್ಸಿನಲ್ಲಿರುವ ಮಾತೂ ಅದೇ. ಅಲ್ಲದೆ, ಅವರನ್ನು ಬಿಟ್ಟರೆ ಮತ್ತಿವಂಶದ ಗಂಡುತಲೆ ಬೇರೆ ಯಾವುದೂ ಇಲ್ಲ. ಏಕೋ ತಡವಾಗಿದೆ; ಸರಿಯಾದ ದಿವಸ ಒದಗಿಲ್ಲವೇನೋ; ಅದಕ್ಕಾಗಿಯೇ ಪಟ್ಟಾಭಿಷೇಕ ತಡವಾಗಿದೆ ಎಂದುಕೊಂಡೇ ಜನ ಸಮಾಧಾನವಾಗಿದ್ದರು. ಆದರೆ ಈಗ ಕೇಳಿಬರುತ್ತಿರುವ ಸುದ್ದಿ, ಹನ್ನೆರಡು ವರ್ಷಗಳ ಹಿಂದೆ ನಡೆದುದನ್ನು ಅವರಿಗೆ ಜ್ಞಾಪಿಸುತ್ತಿದೆ."

"ಏನು ಸುದ್ದಿ?"

"ನಿರ್ಭಯವಾಗಿ ಹೇಳಲೇ?"

"ಹೇಳಿ. ಸತ್ಯ ಹೇಳಲು ನಮಗೆ ಹೆದರಿಕೆ ಇಲ್ಲ ಎಂದು ನೀವೇ ಹೇಳಲಿಲ್ಲವೇ? ಹಾಗಿದ್ದೂ ಈಗೇಕೆ ಹಿಂಜರಿಯುತ್ತಿದೀರ— ಹೇಳಿ."

"ತಾವು ಲಿಂಗಣ್ಣನಾಯಕರನ್ನು ಸೆರೆಯಲ್ಲಿಟ್ಟಿದೀರಂತೆ. ಹಿಂದೆ ಓಬಣ್ಣನಾಯಕರನ್ನು ತೀರಿಸಿದ ಹಾಗೇ, ಈಗ ಇವರನ್ನೂ ತೀರಿಸಿ, ನೀವೇ ಪಟ್ಟಕ್ಕೆ ಬರುವ ಸಂಚು ಮಾಡುತ್ತಿದ್ದೀರ ಎಂದು."

"ಲಿಂಗಣ್ಣನಾಯಕರನ್ನು ನಾವು ಸೆರೆಯಲ್ಲಿಟ್ಟಿಲ್ಲ. ಯಾರು ಬೇಕಾದರೂ ಅವರನ್ನು ನೋಡಬಹುದು."

"ನಿಜ. ಇಲ್ಲಿಗೆ ಬಂದ ಮೇಲೆ ನಮಗೂ ಅದು ತಿಳಿಯಿತು."

ಹಾಗಾದ ಮೇಲೂ ಈ ಸುದ್ದಿ ನಂಬುತ್ತೀರಾ?"

"ಲಿಂಗಣ್ಣನಾಯಕರಿಗೆ ಪಟ್ಟವಾಗುವವರೆಗೂ ಈ ಸುದ್ದಿ ಸಾಯುವುದಿಲ್ಲ."

"ಯಾರು ಈ ಸುದ್ದಿ ಹರಡುತ್ತಿರುವರು?"

"ಯಾರೆಂಬುದನ್ನು ನಾನೇನು ಬಲ್ಲೆ. ಇಂಥ ಸುದ್ದಿ ಹರಡುವವರು ನಾನೇ ಹರಡುತ್ತಿದ್ದೇನೆ ಎಂದು ಹೇಳಿಕೊಳ್ಳುವುದಿಲ್ಲ. ಎಲ್ಲಿಯೋ ಹುಟ್ಟಿ ಹೇಗೋ ಹರಡುತ್ತದೆ. ಆದ್ದರಿಂದ ನಾನು ತಮ್ಮಲ್ಲಿ ಹೇಳುವುದಿಷ್ಟೆ—"

—ಎಂದು ಇದ್ದಕ್ಕಿದ್ದಹಾಗೆ ಅಲ್ಲಿಗೇ ತನ್ನ ಮಾತನ್ನು ತಡೆದು, ದಳವಾಯಿಯ ಮುಖವನ್ನು ನೋಡಿದ ಗೌಡ.

"ಹೂಂ, ಮುಂದೇನು ಹೇಳಿ."

"ಸರಿಯೋ ತಪ್ಪೋ ಓಬಣ್ಣನಾಯಕರ ಕೊಲೆಯ ಅಪಖ್ಯಾತಿ ನಿಮಗೆ ಅಂಟಿಕೊಂಡಿದೆ. ಆಗಲೇ ಏನೇನೋ ಸುದ್ದಿ ಹರಡಿತ್ತು. ಚಿಕ್ಕಣ್ಣನಾಯಕರು ಪಟ್ಟಕ್ಕೆ ಬಂದಮೇಲೆ ಜನ ಅದನ್ನೆಲ್ಲಾ ಮರೆತಿದ್ದರು. ಈಗ ಅಂದಿನ ಸಂಶಯ ಮತ್ತೆ ತಲೆ ಹಾಕಿದೆ. ಆದುದರಿಂದ ಜನರಲ್ಲಿ ನಿಮ್ಮ ಬಗ್ಗೆ ವೃಥಾ ಅನುಮಾನ ಬರಬಾರದು. ಅವರ ಮನಸ್ಸಿಗೂ ತೃಪ್ತಿಯಾಗಬೇಕು ಎನ್ನುವುದಿದ್ದರೆ, ಬೇಗ ಲಿಂಗಣ್ಣನಾಯಕರಿಗೆ ಪಟ್ಟ ಕಟ್ಟಿಬಿಡಿ. ಇದು ಹೀಗೇ ತಡವಾಗುತ್ತ ಹೋದರೆ, ಯಾರು ಬೇಡವೆಂದರೂ ರೊಚ್ಚಿಗೆದ್ದ ಜನ ಏನಾದರೂ ಮಾಡುವುದು ಖಂಡಿತ. ನಿನ್ನೆ ಆದದ್ದೂ ಅದೇ.

ಕಾಲಜ್ಞಾನದ ಅಯ್ಯ ಏನೇನೋ ಅಪದ್ಧ ಬೊಗಳ್ತಾ ಇದ್ದ. ಎಂತಲೇ ಜನ ರೇಗಿ ಅವನ ಮೇಲೆ ಬಿದ್ದದ್ದು. ನಾಯಕರ ವಿರುದ್ಧ ಯಾರು ಏನು ಆಡಿದರೂ ಜನಕ್ಕೆ ಸಹಿಸುವುದಿಲ್ಲ. ತಾವೂ ಅದನ್ನು ಅರಿತುಕೊಂಡು, ಈಗ ಸೆರೆಯಲ್ಲಿಟ್ಟಿರುವವರನ್ನು ಬಿಡುಗಡೆ ಮಾಡಿ, ವಿಜಯದಶಮಿಯ ಹೊತ್ತಿಗಾದರೂ ಲಿಂಗಣ್ಣನಾಯಕರಿಗೆ ಪಟ್ಟವಾಗುತ್ತದೆ ಎಂದು ಹೇಳಿದರೆ, ಎಲ್ಲರಿಗೂ ಅಲ್ಪಸ್ವಲ್ಪ ಸಮಾಧಾನವಾಗುತ್ತದೆ.

—ತನ್ನ ಹೃದಯದಲ್ಲಿದ್ದುದನ್ನೆಲ್ಲಾ ಹೊರಗೆ ಒದರಿಬಿಡುವವನಂತೆ ಹೇಳಿದ ಗೌಡ.

"ರಾಜಕಾರ್ಯದ ಕೆಲಸ ಯಾರ ಒತ್ತಾಯದಿಂದಲೂ ಬೇಗ ನಡೆಯುವುದಿಲ್ಲ. ಅದರಲ್ಲೂ ಇದು ಗತಚಾರದ ಸಮಸ್ಯೆ. ಎಂತಲೇ ಇತ್ಯರ್ಥವಾಗುವುದು ತಡವಾಗುತ್ತದೆ. ಇಂಥ ಕೆಲಸದ ರೀತಿಯೇ ಹೀಗೆ; ಅಲ್ಲವೇ ಗೌಡರೇ? ದೇಶಕ್ಕೆ ದೊರೆಯನ್ನಾರಿಸುವುದು, ಅಲ್ಲಿರುವುದನ್ನು ಇಲ್ಲಿ ಇಟ್ಟಷ್ಟು ಸುಲಭವಲ್ಲ."

"ಇದರಲ್ಲಿ ಜಿಟ್ಟವನ್ನು ಎತ್ತಿಡುವಷ್ಟು ಕಷ್ಟವಾದುದು ಏನಿದೆಯೋ ನಾನು ಕಾಣೆ."

"ಇಲ್ಲವೇ ನಾಯಕರನ್ನು ಆರಿಸುವುದು ಅಷ್ಟು ಸುಲಭವೇ?"

"ನನಗೇನೋ ಸುಲಭವೆಂದೇ ಕಾಣುತ್ತದೆ. ಅವರನ್ನು ಆರಿಸುವವರು ಯಾರು? ನಾಯಕರ ಬಳಿಕ, ಗಂಡುತಲೆಯು ಸಂತಾನ ಯಾವುದಿದ್ದರೆ ಅದು ಪಟ್ಟಕ್ಕೆ ಬರಬೇಕು. ಅದು ನಾಯಕರ ಮನೆಗೆ ಸಿದ್ಧರವರ. ಹೀಗಿರುವಾಗ ಅದರಲ್ಲಿ ನಾನು ನಾಯಕರನ್ನು ಆರಿಸುತ್ತೇನೆ ಎನ್ನುವ ಮಾತೆಲ್ಲಿ ಬಂತು? ನೋಡಿ ಬುದ್ಧಿ, ನಾನು ದಳವಾಯಿಯಲ್ಲ, ಹಳ್ಳಿಯ ಗೌಡ. ಇಂಥ ಕೆಲಸವಲ್ಲಿ ನನಗೆ ಕಷ್ಟವೇನೂ ಕಾಣುವುದಿಲ್ಲ. ನಿಮಗಿರುವಷ್ಟು ಸೂಕ್ಷ್ಮಬುದ್ಧಿಯೂ ನನಗಿಲ್ಲ. ಆದ್ದರಿಂದ ನಾನು ಹೇಳುವುದಿಷ್ಟೆ– ಇದು ಎಂದಿದ್ದರೂ ಆಗಬೇಕಾದ ಕೆಲಸ. ಆದಷ್ಟು ಬೇಗ ಆಯಿತು ಎನಿಸಿಬಿಡಿ. ಇಲ್ಲದ ಅಪಖ್ಯಾತಿ ನೀವೇಕೆ ಕಟ್ಟಿಕೊಳ್ಳುತ್ತೀರಿ? ತಮ್ಮಲ್ಲಿ ನಾನು ಬಿನ್ನಹ ಮಾಡಿಕೊಳ್ಳಬೇಕೆಂದಿದ್ದುದಿಷ್ಟೆ ಬುದ್ಧಿ. ಅಪ್ಪಣೆಯಾದರೆ ಬರುತ್ತೇನೆ."

—ಎಂದು ಕೈ ಮುಗಿದು, ಅಲ್ಲಿಂದ ಹೊರಡಲು ದಳವಾಯಿಯ ಅಪ್ಪಣೆಯನ್ನು ಕಾದು ನಿಂತ ಗೌಡ.

"ಆಯಿತು. ಹೋಗಿ ಬನ್ನಿ. ರಾಯಣ್ಣಾ, ಗೌಡರಿಗೆ ವೀಳ್ಯ ತಂದು ಕೊಡಲು ಹೇಳು."

—ಎಂದ ಮುದ್ದಣ್ಣ, ರಾಯಣ್ಣನತ್ತ ನೋಡಿ. ಮುದ್ದಣ್ಣನಾಡಿದ ಮಾತನ್ನು ಕೇಳಿ ರಾಯಣ್ಣನಿಗೆ ಮಿಂಚು ಮುಟ್ಟಿದಷ್ಟು ಆಶ್ಚರ್ಯವಾಯಿತು. ಬೇರೇನೋ ಆಗುವುದೆಂದು ನಿರೀಕ್ಷಿಸಿದ್ದ ಅವನ ನಿರೀಕ್ಷೆ ತಲೆಕೆಳಗಾದುದು, ಅವನ ಮುಖಲಕ್ಷಣದಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿತ್ತು. ಪ್ರಶ್ನಿಸುವ ನೋಟದಿಂದೊಮ್ಮೆ ತನ್ನಣ್ಣನತ್ತ ನೋಡಿ, ರಾಯಣ್ಣ, ಒಳಗೆ ಹೋಗಿ ದಾಸಿಯೊಂದಿಗೆ ವೀಳ್ಯವನ್ನು ತೆಗೆಸಿಕೊಂಡು ಬಂದ.

ದಾಸಿ ತಂದ ವೀಳ್ಯವನ್ನು ಮುದ್ದಣ್ಣ ತಾನೇ ಕೈಯಾರ ಗೌಡನಿಗೆ ಕೊಟ್ಟು—

"ನೀವು ನಿರ್ಭಯವಾಗಿ ಸತ್ಯವನ್ನಾಡಿದುದು ನಮ್ಮ ಮನಸ್ಸಿಗೆ ತುಂಬಾ ಸಂತೋಷವನ್ನುಂಟುಮಾಡಿತು. ನಿಮ್ಮ ಮಾತಿನಂತೆ ಸೆರೆಯಲ್ಲಿಟ್ಟವರನ್ನು ಬಿಡುಗಡೆ ಮಾಡಲು ಅಪ್ಪಣೆ ಮಾಡುತ್ತೇವೆ. ಹಾಗೇ ಜನರ ಅಭಿಪ್ರಾಯ ನಮ್ಮ ಮನಸ್ಸು ಮುಟ್ಟಿದೆ ಎಂದು ಅವರಿಗೂ ಹೇಳಿ. ಹಾಗೇ ನಿಮ್ಮಲ್ಲಿಯೂ ನಮ್ಮದೊಂದು ಮಾತಿದೆ" ಎಂದ.

"ಅಪ್ಪಣೆ ಕೊಡಿಸಿ."

"ಇಷ್ಟೆ. ದುರ್ಗದ ಬಗ್ಗೆ ನಿಮಗಿರುವಷ್ಟೇ ಅಭಿಮಾನ ನಮಗೂ ಇದೆ. ನಮ್ಮಂತೆಯೇ ನಿಮಗೂ ದುರ್ಗಕ್ಕೆ ಒಳಿತಾಗಬೇಕು ಎಂಬ ಬಯಕೆ ಇದ್ದರೆ ಇಂಥ ಕೆಟ್ಟ ಸುದ್ದಿ ನಂಬಬೇಡಿ. ಅದು ಹರಡಲು ಅವಕಾಶ ಕೊಡಬೇಡಿ. ಸಾಧ್ಯವಾದರೆ ಅಂಥವರನ್ನು ನೀವೇ ಶಿಕ್ಷಿಸಿದರೂ ಸರಿಯೇ, ಇಲ್ಲವೇ ನಮಗೊಂದು ಮಾತು ಹೇಳಿ ಕಳಿಸಿ. ಹೋಗಿ ಬನ್ನಿ."

ಮುದ್ದಣ್ಣನಾಡಿದ ಮಾತು ಕೇಳಿ ಗೌಡ, ಆದಕ್ಕೆ ಏನೂ ಉತ್ತರ ಕೊಡದೆ ವೀಳ್ಯವನ್ನು ತೆಗೆದುಕೊಂಡು, ಮುಜರೆ ಮಾಡಿ ಹೊರಟು ಹೋದ. ಗೌಡರ ಬೆನ್ನು ತನ್ನತ್ತ ತಿರುಗುತ್ತಲೇ, ಅವನನ್ನು ಏಕ ದೃಷ್ಟಿಯಿಂದ ನೋಡುತ್ತಿದ್ದ ಮುದ್ದಣ್ಣನ ಕಣ್ಣುಗಳನ್ನು ಕವಿದಿದ್ದ ಯಾವುದೋ

ತೆರೆ ಸರಿದು, ಭಯಂಕರ ಕ್ರೋಧ, ಉರಿಯಂತೆ ಹೊಳೆದು ಮುಷ್ಟಿ ಬಿಗಿಯಿತು.

"ಇವನನ್ನು ಹೀಗೇ ಬಿಡಬಾರದಾಗಿತ್ತು. ಅಬ್ಬಾ! ನಿಮಗೆ ಬುದ್ಧಿ ಹೇಳುವಷ್ಟು ದುರಹಂಕಾರವೇ? ನೀರು ಕೀಳುವಂತೆ ಚಮ್ಮಟಿಗೆಯಿಂದ ಸುತ್ತಿಸಿ ಜಡಿದಿದ್ದರೆ, ಆಗ ಇವನ ಸೊಕ್ಕು ಇಳಿದು, ಮಾತನಾಡುತ್ತಿರುವುದು ಯಾರಲ್ಲಿ ಎನ್ನುವುದು ಗೊತ್ತಾಗುತ್ತಿತ್ತು."

—ಅದುವರೆಗೂ ತಡೆದ ಸಿಟ್ಟು ಉಕ್ಕಿ ಬಂದು ಹೇಳಿದ ರಾಯಣ್ಣ, ಗೌಡ ತನ್ನ ಮಾತು ಕಿವಿಗೆ ಬೀಳದಷ್ಟು ದೂರ ಹೋದನೆಂಬುದು ಅರಿವಾದ ಮೇಲೆ.

"ಊ ಹೂ. ಅಲ್ಲೇ ನೀನು ತಪ್ಪುತ್ತಿರುವುದು. ಗೌಡನಾಡಿದ ಮಾತು ಅವನು ಆಡಿದ್ದಲ್ಲ. ಯಾರೋ ಅವನಿಂದ ಆಡಿಸಿದ ಮಾತು."

–ಎಂದ ಮುದ್ದಣ್ಣ ಸಿಟ್ಟನ್ನು ನುಂಗಿ, ತಟಕ್ಕನೆ ಕರ್ಕಶವಾಗಿ ನಕ್ಕು.

"ಈ ಬಾಲವನ್ನು ಕತ್ತರಿಸಿದ್ದರೆ ತಲೆ ತಾನೇ ಹೊರಗೆ ಬರುತ್ತಿತ್ತು"

"ಊ ಹೂ. ರೆಂಬೆಯನ್ನು ಕಡಿದರೆ ಗಿಡ ಸಾಯುವುದಿಲ್ಲ."

—ಎಂದ ಮುದ್ದಣ್ಣ ರಾಯಣ್ಣನ ಮಾತಿಗೆ ಉತ್ತರವಾಗಿ.

"ಅಂದರೆ........"

"ಬೇರು ಹುಡುಕಿ ಅದಕ್ಕೆ ಕೊಡಲಿ ಪೆಟ್ಟುಹಾಕಬೇಕು. ಆಗ ರೆಂಬೆ ತಾನೇ ಸಾಯುತ್ತದೆ. ಅಲ್ಲಿಯವರೆಗೆ ಹಾರಾಡಲಿ ಬಿಡು."

"ಆದರೂ........"

"ಏನು?"

"ಈಗ ನಾವು ಅವರಿಗೆ ಸೋತ ಹಾಗೇ ಆಯಿತಲ್ಲ. ಹಾಗೆಂದುಕೊಂಡು ಇವರು ಕೊಬ್ಬುವುದಿಲ್ಲವೇ?"

"ಕೊಬ್ಬಲಿ, ಕೊಬ್ಬಲಿ. ಚೆನ್ನಾಗಿ ಕೊಬ್ಬಲಿ. ಕುರಿ ಕೊಬ್ಬಿದರೆ ಲಾಭ ಕುರುಬನಿಗೆ, ಕುರಿಗಲ್ಲ! ಇದು ಕುರಿ"

—ಎಂದ ಮುದ್ದಣ್ಣ ನಗುತ್ತಾ.

ಮುದ್ದಣ್ಣನ ನಗುವಿನೊಂದಿಗೆ ರಾಯಣ್ಣನ ನಗುವೂ ಬೆರೆಯಿತು–ಕತ್ತಲಿಗೆ ಬಿರುಗಾಳಿ ಜೊತೆಯಾದಂತೆ.

## ೧೧

ಬಾಗಿಲ ಆಳಿನಿಂದ, "ದಳವಾಯಿ ಮುದ್ದಣ್ಣನವರು ಬಂದು, ತಮ್ಮನ್ನು ಕಾಣಲು ಅವಕಾಶವಿದೆಯೇ ಎಂದು ಕೇಳುತ್ತಿದ್ದಾರೆ" ಎಂಬ ಸುದ್ದಿಯನ್ನುಕೇಳಿ ಲಿಂಗಣ್ಣನಾಯಕ ಮಿಂಚು ಸೋಕಿದಂತೆ ಚಕಿತನಾದ.

ಓಬಣ್ಣನಾಯಕನ ಕೊಲೆಯಾಗಿ, ಚಿಕ್ಕಣ್ಣನಾಯಕ ಪಟ್ಟಕ್ಕೆ ಬಂದ ಈ ಹನ್ನೆರಡು ವರ್ಷಗಳಲ್ಲಿ ಮುದ್ದಣ್ಣ ಲಿಂಗಣ್ಣನಾಯಕರನ್ನು ಹುಡುಕಿಕೊಂಡು ಬಂದುದು ಇದೇ ಮೊದಲಬಾರಿ. ಇಷ್ಟು ದಿನ ಲಿಂಗಣ್ಣನಾಯಕ ಬದುಕಿರುವನೋ ಸತ್ತಿರುವನೋ ಎಂಬುದನ್ನೂ ಅವನು ವಿಚಾರಿಸಿದಂತಿರಲಿಲ್ಲ. ಈಗ ತಾನೇ ಹುಡುಕಿಕೊಂಡು ಬಂದಿದ್ದಾನೆ; ತನ್ನ ಮನೆ ಬಾಗಿಲಿಗೇ.

ಮುದ್ದಣ್ಣನ ಹೆಸರು ಕೇಳಿದ ಕೂಡಲೇ ಲಿಂಗಣ್ಣನಾಯಕನ ಚಿತ್ತದಲ್ಲಿ ಹಳೆಯ ನೆನಪುಗಳೆಲ್ಲವೂ ಜಾಗರಿತವಾಗಿ, ಏಕೋ ಅವನ ಮನಸ್ಸಿನಲ್ಲಿ ಪ್ರಚಂಡಬಿರುಗಾಳಿ ಬೀಸುವ ಮೊದಲು ಕವಿವ ಛೀಃಗತ್ತಲೆ ಕವಿದಂತಾಯಿತು. ದೇಸಣ್ಣನ ಕೊಲೆ, ಭುವನಪ್ಪನವರ ಸಾವು ಓಬಣ್ಣನಾಯಕನ ಶಿರಚ್ಛೇದನ, ನಾಗತಿಯ ಆತ್ಮಹತ್ಯೆಯ ನೆನಪು ನುಗ್ಗಿಬಂದು ಆ ಹೆಸರು ಕೇಳಿಯೇ ಹೇಸಿಗೆ ಮುಟ್ಟಿದಷ್ಟು ಅಸಹ್ಯವೂ ಆಯಿತು. ಒಂದು ಗಳಿಗೆ "ಈಗ ಹೊತ್ತಿಲ್ಲ" ಎಂದು ಹೇಳಿ ಕಳುಹಿಸಿಬಿಡಲೇ ಎಂಬ ಭಾವನೆಯೂ ಬಂದು ಸುಳಿದು ಹೋಯಿತು. ಹೀಗೆ ಏಕೆ ಬಂದಿರುವನೋ ಏನೋ ತಿಳಿಯಬೇಕೆಂಬ ಕುತೂಹಲವೂ, ಕಣ್ಣರಳಿಸಿತು. ಆ ಭಾವನೆಗೇ ವಶನಾಗಿ "ಒಳಗೆ ಬಾ ಎನ್ನು" ಎಂದು ಆಳಿಗೆ ಹೇಳಿ, ಮುದ್ದಣ್ಣ ಬರುವುದನ್ನೇ ಕಾಯುತ್ತಾ ನಿಂತ.

ಸ್ವಲ್ಪ ಹೊತ್ತಿನಲ್ಲೇ ಮುದ್ದಣ್ಣ ಒಳಗೆ ಬಂದು ಇಬ್ಬರೂ ಒಬ್ಬರನ್ನೊಬ್ಬರು ನೋಡಿದರು. ಮೊದಲ ನೋಟಕ್ಕೇ ಇಬ್ಬರ ಕಣ್ಣುಗಳಲ್ಲಿ ಯಾವುದೋ ವಿಕರ್ಷಣೆಯ ಬೆಳಕು ಸುಳಿದು ಮರೆಯಾಗಿ, ಒಬ್ಬನು ಮತ್ತೊಬ್ಬನ ಆಳವನ್ನು ನೋಟದಲ್ಲೇ ಅಳೆಯುವಂತೆ ನೋಡಿದರು. ಈ ಹನ್ನೆರಡು ವರ್ಷಗಳಲ್ಲಿ ಮುಪ್ಪು ಮೈಯಡರಿದ ಲಿಂಗಣ್ಣನಾಯಕನನ್ನು

ನೋಡಿದ ಮುದ್ದಣ್ಣನ ನೋಟದಲ್ಲಿ, ಮಾರಾಟಕ್ಕೆ ಬಂದ ಕುರಿಯನ್ನು ನೋಡುವ ಕಟುಕನ ನೋಟವಿತ್ತು. ಲಿಂಗಣ್ಣನಾಯಕನು ನೋಡಿದ ನೋಟ—ಮೊದಲೇ ದರ್ಪೋದ್ಧತನಾಗಿದ್ದ ದಳವಾಯಿಯ ಮೊಗದಲ್ಲಿ ಇಂದು ಮೆರೆಯುತ್ತಿರುವ ಸರ್ವಾಧಿಕಾರದ ಉಗ್ರಕಳೆಯನ್ನು, ಇದರ ಬೆಲೆ ಎಷ್ಟು ಎಂದು ತೂಕಮಾಡುತ್ತಿತ್ತು.

ಒಂದು ಗಳಿಗೆ ಇಬ್ಬರೂ ಮಾತನಾಡದೆ ಒಬ್ಬರನ್ನೊಬ್ಬರು ನೋಡುತ್ತಿದ್ದರು. ಬಳಿಕ ಲಿಂಗಣ್ಣನಾಯಕನೇ ಸಾವರಿಸಿಕೊಂಡು—

"ಕುಳಿತುಕೊಳ್ಳಿ ದಳವಾಯಿಗಳೇ. ಬಹಳ ಅಪರೂಪವಾಗಿ ದಯ ಮಾಡಿಸಿದಿರಿ"

—ಎಂದ, ದಳವಾಯಿ ಕುಳಿತುಕೊಳ್ಳಲು ಆಸನ ತೋರಿಸಿ.

"ಬಂದುದು ಬಹಳ ಅಪರೂಪವಾಯಿತೆಂಬುದೇನೋ ನಿಜ. ಆದರೆ ಅದಕ್ಕೆ ಕಾರಣ ನಾನಲ್ಲ, ನೀವೇ."

—ಎಂದ ಮುದ್ದಣ್ಣ, ಕುಳಿತು ಒರಗು ದಿಂಬಿಗೆ ಮೈಚಾಚಿ.

"ನಾನೇ? ಹೇಗೆ?"

—ಅಚ್ಚರಿಯಿಂದ ಕೇಳಿದ ಲಿಂಗಣ್ಣನಾಯಕ.

"ಅಲ್ಲವೇ? ನಮ್ಮಲ್ಲಿ ವಿನಾಕಾರಣ ತಪ್ಪು ಕಂಡು ನೀವೇ ನಮ್ಮನ್ನು ದೂರಮಾಡಿದಿರಿ. ನಾವು ನಿಮ್ಮ ಹಗೆಗಳು ಎಂಬ ರೀತಿಯಲ್ಲಿ ವ್ಯವಹರಿಸಿದಿರಿ. ಆಯಿತು—ದೊಡ್ಡವರಿಗೆ ನಾವು ಬೇಡವಾದಷ್ಟು ದಿನ, ಅವರ ಕಣ್ಣಿಗೆ ಬಿದ್ದು ಅವರ ಮನಸ್ಸಿಗೆ ನೋವನ್ನುಂಟುಮಾಡುವುದೇಕೆ ಎಂದು ನಾವೂ ನೀವು ತೋರಿಸಿದಷ್ಟು ದೂರದಲ್ಲೇ ನಿಂತೆವು."

—ಮನಸ್ಸಿನಲ್ಲಿಲ್ಲದ ವಿನಯವನ್ನು ಮಾತಿನಲ್ಲಿ ಕಾಣಿಸುತ್ತ ಹೇಳಿದ ಮುದ್ದಣ್ಣ. ಆ ವಿನಯವೂ ಲಿಂಗಣ್ಣನಾಯಕನಿಗೆ ಅಸಹ್ಯವಾಯಿತು. "ಛಿ! ದೂರ ಹೋಗು" ಎನ್ನಬೇಕೆನಿಸಿತು. ಆದರೂ ಆ ಭಾವನೆಯನ್ನು ಹತ್ತಿಕ್ಕಿಕೊಂಡು, ನೀರಸವಾದ ಧ್ವನಿಯಲ್ಲಿ ಕೇಳಿದ:

"ಮತ್ತೆ ಈಗ ಇಲ್ಲಿಯವರೆಗೆ ಬಂದದ್ದು?"

"ದೊಡ್ಡವರು ನಮ್ಮನ್ನು ದೂರ ಮಾಡಿದರೆ, ನಾವು ದೂರ ನಿಂತು ಬದುಕಲು ಸಾಧ್ಯವೇ? ನೀವು ನಮ್ಮನ್ನು ಆಚೆ ತಳ್ಳಿದರೂ, ನೀವು

ಸರ್ಜೇರಾಯರ ಮಕ್ಕಳೆಂಬುದನ್ನು ನಾವು ಮರೆಯಲು ಸಾಧ್ಯವೇ? ಆ ಧಣಿ ಇಟ್ಟ ಉಪ್ಪುಂಡು ಬೆಳೆದವೈ ಇದು. ಇಷ್ಟು ದಿನವೂ ಆ ವಿಶ್ವಾಸಕ್ಕೆ ಕಟ್ಟುಬಿದ್ದೇ ದುಡಿದೆವು. ಇರುವಷ್ಟು ದಿನವೂ ಅದಕ್ಕಾಗಿಯೇ ಸೈವೆಸಬೇಕು, ಅವರ ಮಕ್ಕಳ ಸೇವೆ ಮಾಡಿ, ಆ ತಂದೆಯ ಋಣ ಅಷ್ಟಿಷ್ಟಾದರೂ ತೀರಿಸಬೇಕು ಎಂಬುದೊಂದೇ ನಮಗಿರುವ ಬಯಕೆ. ಓಬಣ್ಣನಾಯಕರ ಮೊದಲು ನೀವೇ ನಮ್ಮ ಧಣಿಗಳಾಗಬೇಕೆಂಬ ಬಯಕೆ ನಮಗಿತ್ತು. ಆಗ ನೀವು ನಮ್ಮ ಬೇಡಿಕೆ ನಡೆಸಲಿಲ್ಲ. ಓಬಣ್ಣನಾಯಕರ ಬಳಿಕ..............."

"ಕಳೆದ ದಿನಗಳ ಸುದ್ದಿಯನ್ನೆತ್ತಬೇಡಿ ದಳವಾಯಿಗಳೇ."

—ಮುದ್ದಣ್ಣನ ಮಾತನ್ನು ಕತ್ತರಿಸಿ, ಕರ್ಕಶ ಧ್ವನಿಯಲ್ಲಿ ಹೇಳಿದ ಲಿಂಗಣ್ಣನಾಯಕ. ಆ ಮಾತು ಕಶಾಪ್ರಹಾರದಂತೆರಗಿತು ಮುದ್ದಣ್ಣನ ಎದೆಯ ಮೇಲೆ. ಆ ಆಘಾತದಿಂದ ಒಂದು ಗಳಿಗೆ ಅಪ್ರತಿಭನಾಗಿ, ಮರುಗಳಿಗೆಯೇ ಚೇತರಿಸಿಕೊಂಡು, ಒಣನಗು ನಕ್ಕು ಹೇಳಿದ ಮುದ್ದಣ್ಣ-

"ನಿಜ. ನಮಗೂ ಅದು ಬೇಕಾಗಿಲ್ಲ."

"ಸರಿ. ಹಾಗಾದರೆ ಆ ಮಾತು ಬಿಟ್ಟು ಈಗ ನಿಮ್ಮಿಂದ ಏನಾಗಬೇಕೋ ಅದನ್ನು ನೇರವಾಗಿ ಹೇಳಿ."

"ಈಗ ಮತ್ತೊಮ್ಮೆ ತಮ್ಮ ಬಳಿ ಬಂದಿದ್ದೇನೆ—ತಾವು ನಮ್ಮ ನಾಯಕರಾಗಿ ದುರ್ಗವನ್ನು ಕಾಪಾಡಬೇಕು ಎಂದು ಬೇಡಿಕೊಳ್ಳಲು."

"ನಾನು ದುರ್ಗದ ದೊರೆಯಾಗಬೇಕೆಂದು ನಿಮ್ಮ ಅಪೇಕ್ಷೆಯೇ ದಳವಾಯಿಗಳೇ?"

—ಮುದ್ದಣ್ಣನ ಮೊಗವನ್ನು ದುರುಗುಟ್ಟಿ ನೋಡುತ್ತಾ ಕೇಳಿದ ಲಿಂಗಣ್ಣನಾಯಕ.

"ನಿಜ, ಅದು ನಮ್ಮ ಇಚ್ಛೆ."

"ಅಂದರೆ ನಿಮ್ಮೊಬ್ಬರ ಇಚ್ಛೆಯೋ?"

"ಅದು ನನ್ನ ಇಚ್ಛೆಯೂ ಅಹುದು, ಹತ್ತು ಜನರ ಅಭಿಪ್ರಾಯವೂ ಅಹುದು."

"ಮಂತ್ರಿಮಂಡಲದವರು, ಅರಮನೆಯವರು ಎಲ್ಲರೂ ಈ ಮಾತಿಗೆ

ಒಪ್ಪಿ ನಿಮ್ಮನ್ನು ನನ್ನ ಬಳಿ ಕಳುಹಿಸಿದ್ದಾರೆಯೆ?'

"ಹಾಗೆಂದು ಯಾರೂ ಕಳುಹಿಸಿಲ್ಲ."

"ಮತ್ತೆ?"

"ಇದೇ ಸೂಕ್ತವಾದ ಮಾರ್ಗವೆಂದು ತೋರಿತು; ಬಂದೆ;"

"ನಿಮಗೇನೋ ನನ್ನಲ್ಲಿ ಅಭಿಮಾನವಿರಬಹುದು. ಆದರೆ ಎಲ್ಲರೂ ಅದಕ್ಕೆ ಒಪ್ಪಬೇಕಲ್ಲ."

—ಅಗುಳಗುಳನ್ನೂ ಹಿಚುಕಿ ನೋಡುವ ಅನ್ನ ಪರೀಕ್ಷಕನಂತೆ ಕೇಳಿದ ಲಿಂಗಣ್ಣನಾಯಕ.

"ಅವರು ಒಪ್ಪುವುದು, ಅವರನ್ನು ಒಪ್ಪಿಸುವುದು ಕಷ್ಟವಲ್ಲ. ಮುಖ್ಯ —ನೀವು ಒಪ್ಪಿದರೆ ಆಯಿತು."

—ಎಂದ ಮುದ್ದಣ್ಣ "ಒಪ್ಪಿದ ಬಳಿಕ ಬೇರೆಯವರ ಮಾತೇನು" ಎಂಬ ಧ್ವನಿಯಲ್ಲಿ. ಆ ಮಾತಿನಲ್ಲಿ ಅಡಗಿದ ಉದ್ಧಟತನ ಪ್ರತಿಷ್ಠೆಗಳು ಅರಿವಾಗಿ, ಲಿಂಗಣ್ಣನಾಯಕನಿಗೆ ಆಶ್ಚರ್ಯವಾಯಿತು; "ಅಬ್ಬಾ, ಸೊಕ್ಕೇ" ಎಂದು ಸಿಟ್ಟು ಬಂತು; ಹಾಗೆಯೇ "ಅಯ್ಯೋ, ಇಂಥವನ ಕೈಯ ಆಟದ ವಸ್ತುವಾಯಿತಲ್ಲಾ ದುರ್ಗದ ಕಿರೀಟ" ಎಂದು ವ್ಯಸನವೂ ಆಯಿತು. ಆದರೂ ಅದಾವ ಭಾವನೆಯನ್ನೂ ತನ್ನ ಮಾತಿನಲ್ಲಿ ತೋರಗೊಡದೆ ಹೇಳಿದ.

"ನಾನು ಒಪ್ಪಿದರೆ ಸಾಕು, ದುರ್ಗಾಧಿಪತಿಯಾಗಬಹುದು ಅಲ್ಲವೇ ದಳವಾಯಿಗಳೇ?"

"ಅಹುದು."

ನನ್ನ ಮೇಲಿನ ತಮ್ಮ ಅಭಿಮಾನ ಬಹಳ ಹೆಚ್ಚಿನದು. ಅದಕ್ಕೆ ತುಂಬಾ ಋಣಿಯಾಗಿದ್ದೇನೆ."

"ಅಷ್ಟೇ ಸಾಲದು........"

"ಮತ್ತೆ?"

"ತಾವು ದುರ್ಗಾಧಿಪತಿಗಳಾಗಲು ಒಪ್ಪಬೇಕು. ದುರ್ಗಾಧಿಪತಿಗಳಾಗಿ, ಚಿಕ್ಕಣ್ಣನಾಯಕರಂತೆ ನಮ್ಮನ್ನು ಆಳಬೇಕು."

"ಅಂದರೆ........"

"ಚಿಕ್ಕಣ್ಣನಾಯಕರು ತಮ್ಮ ತಂದೆಗೆ ತಕ್ಕ ಮಗ ಎಂಬಂತೆ ಆಳಿದರು. ಆ ತಂದೆಯಂತೆಯೇ ತಮ್ಮವರನ್ನು ಕೈಬಿಡಲಿಲ್ಲ. ತಾವೂ ಹಾಗೇ ಆಳಬೇಕು, ತಮ್ಮ ಅಭಿಮಾನದ ಛತ್ರದಡಿಯಲ್ಲಿ ನಮಗೂ ಅಷ್ಟು ತಾವು ಕೊಡಬೇಕು ಎಂಬುದೇ ನನ್ನ ಅಭಿಲಾಷೆ. ಮನಬಿಚ್ಚಿ ಒಂದು ಮಾತನ್ನು ನಾನು ಹೇಳಬಹುದೇ"

"ಹೇಳಿ—ದಳವಾಯಿಗಳೇ"

ಈ ವಿಷಯದಲ್ಲಿ ದಳವಾಯಿ ಭರಮಣ್ಣ, ಪರಶುರಾಮಪ್ಪನವರೂ ತಮ್ಮ ಬಳಿಗೆ ಬಂದಿದ್ದರೆಂದು ಕೇಳಿದ್ದೇನೆ. ಅವರು ತಮ್ಮ ಆಪ್ತರು."

"ಹೂ"

"ಆದರೆ ನಾನೂ ತಮ್ಮ ಆಪ್ತನೇ ಎಂಬುದನ್ನು ಮರೆಯಬೇಡಿ. ನನ್ನಲ್ಲೂ ಅಷ್ಟು ನಂಬಿಕೆ ಇಡಿ. ನಿಮ್ಮ ನಂಬಿಕೆ ವಿಫಲವಾಗುವುದಿಲ್ಲ."

"ತುಂಬಾ ಸಂತೋಷ. ಆಯಿತು—ನಾನೂ ಒಂದು ಮಾತು ಮನಬಿಚ್ಚಿ ಹೇಳಬಹುದೇ?"

"ಅಪ್ಪಣೆ ಕೊಡಿಸಿ."

"ನಾನು ನಾಯಕನಾಗಬೇಕೆಂದೇ ನಿಮ್ಮ ಆಸೆ ಎಂದಿರಲ್ಲವೇ?'

"ನಿಜ."

"ಅದೇ ಮಾತನ್ನು ಬೇರೆಯ ನಾಲ್ಕು ಜನರೂ ನನ್ನಲ್ಲಿ ಆಡಿದ್ದಾರೆ. ನಾನೂ ಯೋಚಿಸಿದ್ದೇನೆ. ಹೀಗಾಗಬೇಕೆಂಬುದೇ ದೈವೇಚ್ಛೆ ಇದ್ದರೆ ಹಾಗಾಗಲಿ ಎಂದು ನನಗೂ ಅನ್ನಿಸಿದೆ. ನನಗಾಗಿಯೇ ನನಗೆ ಈ ರಾಜ್ಯಬೇಕಾಗಿಲ್ಲವಾದರೂ, ನಿಮ್ಮಂಥ ಹಿರಿಯರ ಮಾತಿಗೆ ಕಟ್ಟುಬೀಳಬೇಕಾಗಿದೆ. ಆದರೆ ನಾನು ಇದಕ್ಕೆ ಒಪ್ಪಬೇಕಾದರೆ, ನೀವೂ ನನ್ನ ಒಂದು ಮಾತಿಗೆ ಒಪ್ಪಬೇಕು."

"ಏನು ಹೇಳಿ?"

"ನನಗಾಗಿ ಭುವನಪ್ಪನವರು ಪ್ರಧಾನಿ ಪಟ್ಟ ಬಿಟ್ಟು ಕೊಟ್ಟರು; ಅಲ್ಲವೇ?"

"ಅಹುದು'

"ವಂಶಪಾರಂಪರ್ಯವಾಗಿ ಅವರ ಮನೆತನಕ್ಕೆ ಬಂದದ್ದು ಆ ಪದವಿ."

"ನಿಜ"

"ನನ್ನಿಂದಾಗಿ ಅವರ ಮನೆಯವರಿಗೆ ಅದು ತಪ್ಪಿ ಹೋಗಿತ್ತು. ಆದುದರಿಂದ ನಾನು ಕೇಳುವುದಿಷ್ಟೇ: ಮತ್ತೆ ನಾನು ನಾಯಕನಾಗ ಬೇಕೆಂಬ ಆಶೆ ನಿಮಗಿದ್ದರೆ, ಮತ್ತೆ ಆ ಪದವಿ ಭುವನಪ್ಪನವರ ಮನೆಗೇ ಹೋಗಬೇಕು."

—ಇದು ನನ್ನ ಅಭಿಪ್ರಾಯವಲ್ಲ, ನಿರ್ಧರ ಎಂಬಷ್ಟು ಖಚಿತವಾದ ಸ್ವರದಲ್ಲಿ ಹೇಳಿದ ಲಿಂಗಣ್ಣನಾಯಕ. ಅನಿರೀಕ್ಷಿತವಾಗಿ ಬಂದ ಆ ಮಾತನ್ನು ಕೇಳಿ ಮುದ್ದಣ್ಣ ತಬ್ಬಿಬ್ಬಾದ. ತಟಕ್ಕನೆ ಮೂಡಿಬಂದ ಹಲಬಗೆಯ ಭಾವನೆಗಳ ಆಘಾತದಲ್ಲಿ ಅವನ ಮನಸ್ಸು ಅಲ್ಲಕಲ್ಲೋಲ ವಾಯಿತು. ಲಿಂಗಣ್ಣನಾಯಕರ ಪ್ರಶ್ನೆಗೆ ಏನು ಉತ್ತರ ಹೇಳಬೇಕೆಂದು ತೋಚದೆ, ಆ ಮಾತೇ ಅರ್ಥವಾಗದವನಂತೆ ಹೇಳಿದ:

"ಅಂದರೆ—"

"ಅಂದರೆ—ಭುವನಪ್ಪನವರ ಮಕ್ಕಳು ಪರಶುರಾಮಪ್ಪನವರು ಮತ್ತೆ ಪ್ರಧಾನಿಗಳಾಗಬೇಕು."

—ಗಂಟೆ ಹೊಡೆದಂತೆ, ಪ್ರತಿಯೊಂದು ಮಾತನ್ನೂ ಒತ್ತಿ ಒತ್ತಿ ಹೇಳಿದ ಲಿಂಗಣ್ಣನಾಯಕ. ಆ ಮಾತು ಕೇಳಿ, ಮುದ್ದಣ್ಣ ಪ್ರಯತ್ನ ಪೂರ್ವಕವಾಗಿ ತಡೆ ಹಿಡಿದಿದ್ದ ದ್ವೇಷ ತಾನೇತಾನಾಗಿ ಉಕ್ಕಿ ಬಂದು, ಅವನ ಕಣ್ಣುಗಳಲ್ಲಿ ಉರಿಯಿತು. ಮರುಗಳಿಗೆಯೇ ಅದನ್ನು ಬದಿಗೆ ಸರಿಸಿ—

"ಆ ಪ್ರಶ್ನೆಗೆ ನಾನು ಉತ್ತರ ಕೊಡಲಾರೆ. ಹತ್ತು ಜನ ಒಪ್ಪಿ ಮಾಡಬೇಕಾದ ಕೆಲಸ ಅದು" ಎಂದ.

"ನನ್ನನ್ನು ಪಟ್ಟಕ್ಕೆ ತರುವ ವಿಷಯದಲ್ಲಿ ಅವರನ್ನೆಲ್ಲಾ ಒಪ್ಪಿಸ ಬಹುದು ಎಂದಿರಲ್ಲ. ಅದೇ ಸಾಧ್ಯವಾದರೆ, ಇದು ಸಾಧ್ಯವಾಗದೇ ?"

—ಸವಾಲು ಹಾಕಿದಂತೆ ಕೇಳಿದ ಲಿಂಗಣ್ಣನಾಯಕ.

"ಅಂದರೆ ತಾವು ನಾಯಕರಾಗಿ ನಾನು ಪ್ರಧಾನಿಯಾಗಿರುವುದು ತಮಗೆ ಇಷ್ಟವಿಲ್ಲವೇ ?"

—ಲಿಂಗಣ್ಣನಾಯಕನ ಮೊಗವನ್ನು ಚಿಕಿತ್ಸಕ ದೃಷ್ಟಿಯಿಂದ

ನೋಡುತ್ತಾ ಕೇಳಿದ ಮುದ್ದಣ್ಣ.

"ಹಾಗೆಂದು ನಾನು ಹೇಳಲಿಲ್ಲ."

"ಹಾಗಾದರೆ ಈಗೇಕೆ ಆ ಮಾತು ?"

—'ಇದು ಬೇಡ. ಅಲ್ಲಿಗೇ ಅದನ್ನು ಬಿಡಿ' ಎಂದು ಸೂಚಿಸುವ ಧ್ವನಿಯಲ್ಲಿ ಹೇಳಿದ ಮುದ್ದಣ್ಣ.

"ನೀವು ಪ್ರಧಾನಿಗಳಾಗಿರಲು ನನ್ನ ಅಭ್ಯಂತರವೇನೂ ಇಲ್ಲ ದಳವಾಯಿಗಳೇ. ಆದರೂ ನಾನು ನಾಯಕನಾಗಬೇಕೆಂಬ ಇಚ್ಛೆ ನಿಮಗಿದ್ದರೆ ಪರಶುರಾಮಪ್ಪನವರು ಮತ್ತೆ ಪ್ರಧಾನಿಗಳಾಗಬೇಕು. ಅದು ನಮಗಾಗಿ ಮೃತರಾದ ಭುವನಪ್ಪನವರ ನೆನಪಿಗೆ ನಾನು ಸಲ್ಲಿಸಬೇಕಾದ ಋಣ."

"ಒಂದುವೇಳೆ ಅದು ಇತರರಿಗೆ ಸಮ್ಮತವಿಲ್ಲದಿದ್ದರೆ........"

"ಇತರರ ಮಾತು ಆಮೇಲಾಗಲಿ. ನಿಮ್ಮ ಅಭಿಪ್ರಾಯ ಹೇಳಿ."

"ಈ ಪ್ರಶ್ನೆಗೆ ನಾನು ಸಿದ್ಧನಾಗಿ ಬಂದಿರಲಿಲ್ಲ. ಇದರ ಸಾಧಕ-ಬಾಧಕಗಳನ್ನು ಕೂಲಂಕಷವಾಗಿ ವಿಚಾರಮಾಡಿ ನಾನು ಹೇಳುತ್ತೇನೆ. ಈಗ ನನ್ನ ಪ್ರಶ್ನೆಗೆ ತಮ್ಮ ಉತ್ತರವೇನು ?"

"ನನ್ನ ಪ್ರಶ್ನೆಗೆ ತಮ್ಮ ಉತ್ತರ ಬಂದನಂತರ, ತಮ್ಮ ಪ್ರಶ್ನೆಗೆ ನಾನೂ ಉತ್ತರ ಹೇಳುತ್ತೇನೆ. ನಾನೂ ನೀವು ಕೇಳಿದ ವಿಷಯದ ಸಾಧಕಬಾಧಕಗಳನ್ನು ಯೋಚಿಸಬೇಡವೇ ? ನಾನೂ ನಿಮ್ಮ ಪ್ರಶ್ನೆಗೆ ಸಿದ್ಧವಾಗಿರಲಿಲ್ಲ."

ತನ್ನ ಮಾತಿನಲ್ಲಿ ಯಾವ ಅಂತರ್ಗತ ಭಾವನೆಯೂ ಇಲ್ಲವೆಂಬಂತೆ ಸರಳವಾಗಿಯೇ ಲಿಂಗಣ್ಣನಾಯಕ ಹೇಳಿದರೂ, ಮುದ್ದಣ್ಣನಿಗೇನೋ ಲಿಂಗಣ್ಣನಾಯಕ ತನ್ನ ಮಾತನ್ನೇ ಅಣಕಿಸಿ ಆಡಿದಂತೆ ಭಾಸವಾಗಿ, ಅವನ ಮುಖ ಕೆಂಪೇರಿ ಉಕ್ಕಿಬಂದ ಸಿಟ್ಟಿನಲ್ಲಿ ಗಂಟಲು ಒಣಗಿತು. ಉಗುಳು ನುಂಗಿ, ಗಂಟಲನ್ನು ತೇವಮಾಡಿಕೊಳ್ಳುತ್ತಾ ಹೇಳಿದ :

"ಇದು ಬಹಳ ಅನಿರೀಕ್ಷಿತ ಸಮಸ್ಯೆ. ಆಗಲಿ—ವಿಚಾರಮಾಡಿ ತಿಳಿಸುತ್ತೇನೆ."

"ನಿಧಾನವಾಗಿ ವಿಚಾರಮಾಡಿ. ನಿಮಗೆ ಸಮಯುವಾದಾಗ ತಿಳಿಸಿ.

ಆದರೂ ನಮಗೆ ವಂಶಪಾರಂಪರ್ಯವಾಗಿ ಬಂದ ಸಿಂಹಾಸನವನ್ನು ನಮಗೇ ದೊರಕಿಸಿಕೊಡಬೇಕೆಂಬ ನಿಮ್ಮ ಶುಭಾಶಯಕ್ಕಾಗಿ ನಾನು ಕೃತಜ್ಞನಾಗಿದ್ದೇನೆ."

—ಎಂದ ಲಿಂಗಣ್ಣನಾಯಕ ಮಾತು ಮುಗಿಯಿತು ಎಂದು ಸೂಚಿಸುವ ಸ್ವರದಲ್ಲಿ.

"ಅಪ್ಪಣೆಯಾದರೆ ನಾನಿನ್ನು ಬರುತ್ತೇನೆ"

—ಎಂದು ಲಿಂಗಣ್ಣನಾಯಕನಿಗೆ ವಂದಿಸಿ, ದುರ್ದಾನ ತೆಗೆದುಕೊಂಡವನಂತೆ ಹೊರಟು ಹೋದ ದಳವಾಯಿ ಮುದ್ದಣ್ಣ. ಅವನು ಹೋಗುವುದನ್ನೇ ನೋಡುತ್ತಿದ್ದ ಲಿಂಗಣ್ಣನಾಯಕನ ಮೊಗದಲ್ಲಿ ಅದುವರೆಗೂ ಇದ್ದ ಸಂಯಮ ಸಡಲಿ, ಮುಖ ರೋಷವಿಕಾರವಾಗಿ, ಕಣ್ಣುಗಳು ಕ್ರೋಧದ ಕೆಂಡವನ್ನು ಕಾರಿದವು.

"ನಾಯಿ! ನನಗೆ ಪಟ್ಟ ಕೊಡುವ ದಾತ ನೀನೇ! ನಿನ್ನ ಹೆಣದ ಮೇಲೆ ಸಿಂಹಾಸನ ಹತ್ತುತ್ತೇನೆ. ನಿನ್ನ ತಲೆ ನನ್ನ ಪಾದ ಪೀಠ!"

—ಎಂದು ತನಗೆ ತಾನೆ, ಹಲ್ಲು ಕಡಿಯುತ್ತಾ ಹೇಳಿಕೊಂಡು, ಸಿಟ್ಟಿನಿಂದ ಕಾಲನ್ನು ನೆಲಕ್ಕೆ ಅಪ್ಪಳಿಸಿದ.

## ೧೨

ಅಪಮಾನ! ಶುದ್ಧ ಅಪಮಾನ! ಆ ಕುನ್ನಿಯ ತಲೆಕತ್ತರಿಸಿ ಆ ಮಾತಿಗೆ ನೀವು ಉತ್ತರ ಕೊಡಬೇಕಾಗಿತ್ತು.

—ಲಿಂಗಣ್ಣನಾಯಕನ ಮನೆಯಿಂದ ಬಂದ ಮುದ್ದಣ್ಣ ಹೇಳಿದ ಮಾತನ್ನು ಕೇಳಿ ಸಿಟ್ಟಿನಿಂದ ಅಬ್ಬರಿಸಿದ ರಾಯಣ್ಣ.

"ನೀವು ಆ ಕೆಲಸ ಮಾಡದೆ ಬಿಟ್ಟು ಬಂದುದೇ ಅಲ್ಲ. ಈಗಲೂ ನನಗೆ ಅಪ್ಪಣೆ ಕೊಡಿ. ಹಗಲು ಹರಿಯುವುದರೊಳಗಾಗಿ ಅವನ ತಲೆ ಕತ್ತರಿಸಿ ತಂದು ನಿಮ್ಮ ಕಾಲ ಮೇಲೆ ಕೆಡವದಿದ್ದರೆ ನಾನು ರಾಯಣ್ಣನೇ ಅಲ್ಲ."

"ತಲೆ! ನಿನಗಿರುವಷ್ಟು ನನಗೆ ಅದರ ಆತುರವಿಲ್ಲ ರಾಯಣ್ಣ."

—ಎಂದ ಮುದ್ದಣ್ಣ ಯಾವುದೋ ನಿರ್ಧರಕ್ಕೆ ಬಂದವನಂತೆ,

ಯಾವ ಉದ್ರೇಕವೂ ವ್ಯಕ್ತವಾಗದ ಶಾಂತಸ್ವರದಲ್ಲಿ. ಆತನ ಮಾತನ್ನು ಕೇಳಿ, ರಾಯಣ್ಣನ ಸಿಟ್ಟಿನ ಬಿರುಗಾಳಿಗೆ, ಯಾವ ತಡೆಯೂ ಇಲ್ಲದ ಬೋಳು ಬಯಲಿನಲ್ಲಿ ಬೀಸಿದಂತಾಗಿ ಒಂದು ಬಗೆಯ ನಿರಾಶೆಯಾಯಿತು. ಅಷ್ಟೇ ಮಟ್ಟಿಗೆ ಮುದ್ದಣ್ಣನ ಅನಿರೀಕ್ಷಿತ ರೀತಿಯಿಂದ ಆಶ್ಚರ್ಯವೂ ಆಯಿತು. ಬೇರೆಯವರನ್ನು ಭಯದಿಂದ ಮೈ ಝುಂ ಎನ್ನಿಸುವಂತಿದ್ದ ಕ್ರೂರನೋಟದಿಂದ ತನ್ನ ಅಣ್ಣನ ಮೋರೆಯನ್ನು ಮಿಕಿ ಮಿಕಿ ನೋಡಿ ಕೇಳಿದ—

"ಇದೆಂಥ ಮಾತು ಅಣ್ಣ; ಅದೂ ನಿಮ್ಮಿಂದ! ಈಚೆಗೆ ನಿಮ್ಮ ರೀತಿಯೇ ನನಗೆ ಅರ್ಥವಾಗುತ್ತಿಲ್ಲ."

"ಏಕೆ?"

"ಮೊನ್ನೆ ಯಾರ ಇದುರಿನಲ್ಲಿ ನಿಂತು ಮಾತನಾಡುತ್ತಿರುವೆನೆಂಬು ದನ್ನು ತಿಳಿಯದೆ ಬಾಯಿಗೆ ಬಂದಹಾಗೆ ಬೊಗಳಿದ ಗೌಡನಿಗೂ ತಕ್ಕ ಶಾಸ್ತಿ ಮಾಡದೆ ಬಿಟ್ಟಿರಿ. ಆಗ ಕೇಳಿದರೆ ರೆಂಬೆ ಕತ್ತರಿಸುವುದೇಕೆ ಎಂದಿರಿ? ಈಗ ಆ ತಲೆಯೂ ತಲೆಹರಟೆ ಹರಟೆ ಕತ್ತರಿಸು ಎಂದು ಕೇಳುತ್ತಿರುವಾಗಲೂ ಅದರ ಆತುರವೇನು ಏನ್ನುತ್ತೀರಲ್ಲಾ?"

"ರಾಜಕಾರಣದಲ್ಲಿ ಹೀಗೇ ರಾಯಣ್ಣ. ಉಳಿಯುತ್ತೇನೆ ಎನ್ನುವ ತಲೆಯಾದರೆ ಅದನ್ನು ಕತ್ತರಿಸಲು ಆತುರ ಮಾಡಬೇಕು. ಇದು ಅಂತ ಹುದಲ್ಲ."

"ಮತ್ತೆಂತಹುದು?"

"ಎಂದಿದ್ದರೂ ಉರುಳಬೇಕಾದ ತಲೆ! ನನ್ನ ಹೆಬ್ಬಯಕೆಯ ಮಾರ್ಗದಲ್ಲಿ ಅಡ್ಡವಾಗಿರುವ ಕಡೆಯ ತಲೆ. ಇದು ಉರುಳದೆ, ನಾನು ಬಯಸಿದುದು ನನಗಾಗುವುದಿಲ್ಲ. ಆದರೆ ಅದಕ್ಕಿನ್ನೂ ಹೊತ್ತು ಬಂದಿಲ್ಲ."

"ಏಕೇ? ನಮಗಷ್ಟು ಶಕ್ತಿ ಇಲ್ಲವೆ?"

"ಶಕ್ತಿ ಇದೆ. ಆದರೆ ನಮ್ಮ ಕಡೆಯಿಂದ ಅಪಾಯ ಬರಬಹು ದೆಂದು ಅವರು ಎಚ್ಚರವಾಗಿರುವಾಗ ಈ ಕೆಲಸ ಕಷ್ಟವಾಗುತ್ತದೆ. ಅದರಿಂ ದಾಗಿಯೇ ಹಳ್ಳಿಯವರನ್ನು ನಮ್ಮ ವಿರುದ್ಧ ಎತ್ತಿಕಟ್ಟಿದ್ದಾರೆ. ಈಗ ಲಿಂಗಣ್ಣನಾಯಕನ ಜೀವಕ್ಕೆ ಅಪಾಯವಾದರೆ, ಆ ಅಪಾಯ ನಮ್ಮ

ತಲೆಯನ್ನೂ ಮುತ್ತುತ್ತದೆ. ಈ ಗದ್ದಲ ಕೊಂಚ ಶಾಂತವಾಗಲಿ; ಆ ಬಳಿಕ ಈ ತಲೆ ತೆಗೆಯುವುದು ತಡವಾಗುವುದಿಲ್ಲ. ಒನ್ಮೆ ಪೆಟ್ಟುತಿಂದು ಎಚ್ಚರವಾದ ಹುಲಿಯನ್ನು ಬೇಟೆಯಾಡಲು ಎದಗಾರಿಕೆಗಿಂತ ಜಾಣತನ ಬೇಕು. ಆದ್ದರಿಂದ ಈ ಹುಲಿಯ ಬೇಟೆಯಾಡಲು ಸರಿಯಾದ ಮರಸು ಕಟ್ಟಬೇಕು. ಅದಕ್ಕೆ ಮಾಡಬೇಕಾದ ಕೆಲಸ ಸ್ವಲ್ಪ ಇದೆ."

"ಏನು ಕೆಲಸ?"

"ಮೊದಲು ನಮ್ಮ ವಿರುದ್ಧ ಈ ಕೆಟ್ಟ ಸುದ್ದಿ ಹಬ್ಬಿಸುತ್ತಿರುವವರು ಯಾರು ಎಂಬುದನ್ನು ಗೊತ್ತು ಹಚ್ಚಬೇಕು—ಅಂದಹಾಗೆ ಚಿಕ್ಕಣ್ಣನಿಗೆ ಈ ಕೆಲಸ ಮಾಡಲು ಹೇಳಿದ್ದೆ. ಏನಾದರೂ ಸುದ್ದಿ ತಂದನೇನು?"

"ಹೂ. ನೀವು ಲಿಂಗಣ್ಣನಾಯಕರ ಮನೆಗೆ ಹೋದಾಗ ಬಂದಿದ್ದ. ನಿಮಗೆ ಒಂದು ಸುದ್ದಿ ತಿಳಿಸಬೇಕೆಂದು ಹೇಳಿ ಹೋದ."

"ನಾನು ಬರುವವರೆಗೂ ಇರು ಎನ್ನಬೇಕಾಗಿತ್ತು."

"ಇರುವಷ್ಟು ಅವಕಾಶವಿರಲಿಲ್ಲ. ಯಾರನ್ನೋ ಹಿಡಿಯಬೇಕು ಎಂದು ಹೇಳಿ ಹೋದ."

"ಏನು ಸುದ್ದಿ?"

"ನಮ್ಮ ವಿರುದ್ಧ ಹಳ್ಳಿ ಹಳ್ಳಿಗಳಲ್ಲಿ ಈ ಸುದ್ದಿಯನ್ನು ಹಬ್ಬಿಸುತ್ತಿರುವವಳು ಒಬ್ಬ ಹುಚ್ಚು ಹೆಂಗಸಂತೆ."

"ಯಾರೆಂಬುದೇನಾದರೂ ತಿಳಿಯಿತಂತೇನು?"

"ಗೋಣೂರಿನವಳಂತೆ. ಗಿರಿಜೆ ಎಂದು ಅವಳ ಹೆಸರು. ಹಿಂದೊಮ್ಮೆ ಅವಳು ಅರಮನೆಯ ಊಳಿಗದಲ್ಲಿದ್ದಳಂತೆ."

"ಅವಳು ನಿಜವಾಗಿಯೂ ಹುಚ್ಚಿಯೋ ಅಥವಾ...."

"ಅದನ್ನು ಪತ್ತೆ ಹಚ್ಚಲೆಂದೇ ಹೋಗಿದ್ದಾನೆ ಚಿಕ್ಕಣ್ಣ."

"ಹೂ. ಸರಿ. ಹಾಗೇ ಇನ್ನು ಮೇಲೆ ಈ ಕಾಲಜ್ಞಾನದ ಆಟ ಬೇಡ. ಅದನ್ನು ನಿಲ್ಲಿಸಿ ಬಿಡುವಂತೆ ಗುರಿಕಾರ ದಾಸಣ್ಣನಿಗೆ ಹೇಳು."

"ಹೇಳುತ್ತೇನೆ. ಮತ್ತೇನಾದರೂ ಇದೆಯೆ ನಾನು ಮಾಡುವುದು?"

"ಸದ್ಯಕ್ಕೇನೂ ಇಲ್ಲ. ಆದರೆ ನಮ್ಮ ಕಡೆಯವರಿಗೆಲ್ಲಾ ಹೇಳು— ನಮ್ಮವರು ಯಾರೂ ಲಿಂಗಣ್ಣನಾಯಕರ ವಿರುದ್ಧ ಮಾತಾಡದಿರಲಿ."

"ಅಪ್ಪಣೆ ಮಾಡುತ್ತೇನೆ."

"ಸರಿ. ನೀನಿನ್ನು ಹೋಗು"

—ಎಂದು ರಾಯಣ್ಣನಿಗೆ ಅಪ್ಪಣೆ ಮಾಡಿದ ಮುದ್ದಣ್ಣ. ರಾಯಣ್ಣನನ್ನು ಕಳುಹಿಸಿ ಮುದ್ದಣ್ಣ, ಆಳನ್ನು ಕರೆದು ಹುಕ್ಕಾ ತರಲು ಹೇಳಿ, ಒರಗುದಿಂಬಿಗೆ ಮೈಚಾಚಿ ಕಣ್ಣು ಮುಚ್ಚಿದ. ಅವನ ಮನದಲ್ಲಿ ನಡೆಯುತ್ತಿದ್ದ ಮಥನಕ್ಕೆ ಸಾಕ್ಷಿಯೆಂಬಂತೆ ಅವನ ಹುಬ್ಬು ಹೆಣೆದುಕೊಂಡು, ತುಟಿ ಮೀಸೆಯ ಕುಡಿಯನ್ನು ಎಳೆದು ಕಚ್ಚಿತು.

ಅಷ್ಟು ಹೊತ್ತು ಹಾಗೇ ಚಿಂತೆ ಮಾಡುತ್ತಾ ಒರಗಿದ್ದ ಮುದ್ದಣ್ಣ ಇದ್ದಕ್ಕಿದ್ದ ಹಾಗೇ ಏನೋ ಒಂದು ನಿರ್ಧಾರಕ್ಕೆ ಬಂದವನೇ ಕೂಡಲೇ ಎದ್ದು, ಹುಕ್ಕಾವನ್ನು ಹಿಡಿದು ಎದುರಿಗೆ ಬಂದ ಆಳಿನ ಕಡೆಗೆ ನೋಡದೆ, ಅವನು ಇವನತ್ತ ಚಾಚಿದ ಹುಕ್ಕವನ್ನು ಹಾಗೆಯೇ ಕೈಯಿಂದ ತಳ್ಳಿ, ಹೊರಗೆ ಬಂದು, ಕುದುರೆಗಾಗಲಿ, ಬೆಂಗಾವಲ ಭಟನಿಗಾಗಲಿ ಕಾಯದೆ, ಮನೆಯಿಂದ ಹೊರಗೆ ಹೊರಟ. ಹೊರಗೆ ಬಂದ ಇವನನ್ನು ಕಂಡು, ಎಂದಿನಂತೆ ತಲೆನೇವರಿಕೆಗೆಂದು ಕತ್ತು ಚಾಚಿದ ಬೇಟೆಯ ನಾಯಿಗಳು, ತಮ್ಮತ್ತ ಕೂಡಾ ನೋಡದೆ ಹೊರಟು ಹೋದ ಅವನ ವಿಚಿತ್ರ ನಡತೆಯನ್ನು ಖಂಡಿಸುವಂತೆ ಒಮ್ಮೆ ಬೊಗುಳಿ, ಮತ್ತೆ ಹಾಗೇ ಮಲಗಿದವು. ಧಪ ಧಪ ಕಾಲುಹಾಕುತ್ತಾ ಹೋಗುತ್ತಿದ್ದ ಅವನನ್ನು ಕಂಡು, ಮೊಗಸಾಲೆಯ ತಮ್ಮ ತಮ್ಮೊಳಗೆ ಏನೋ ಮಾತನಾಡುತ್ತಿದ್ದ ಬೆಂಗಾವಲ ಭಟರು ತಮ್ಮ ಉಡುಪು, ಅಸ್ತ್ರಗಳನ್ನು ಅವಸರದಲ್ಲಿ ಸರಿಮಾಡಿಕೊಂಡು ಅವನ ಹಿಂದೆ ಓಡಿದರು; ಮೊದಲು ಸೂಚನೆ ಕೊಡದೆ ಹೊರಹೊರಡುವುದಿಲ್ಲವೆಂದು ಪಂಜನ್ನಾರಿಸಿ, ಮರೆಯಲ್ಲಿ ಚಿಲುಮೆಯನ್ನೆಳೆಯುತ್ತಾ ಕುಳಿತಿದ್ದ ಹಗಲು ದೀವಟಿಗೆಯವನೂ, ಅವಸರದಲ್ಲಿ ಪಂಜನ್ನು ಹತ್ತಿಸಿಕೊಂಡು ದಳವಾಯಿಯ ಹಿಂದೆ ಓಡಿ, ಅವನ ಬಳಿ ಸೇರಿ ಪಂಜು ಹಿಡಿದ.

ಅದಾವುದರ ಪರಿವೆಯೂ ಇಲ್ಲದೆ ತಲೆ ತಗ್ಗಿಸಿ ನಡೆದ ಮುದ್ದಣ್ಣ. ಕಲ್ಲುಮಠದ ಬಾಗಿಲು ಸೇರುವವರೆಗೂ ಮತ್ತೆ ತಲೆ ಎತ್ತಲಿಲ್ಲ.

ಮುದ್ದಣ್ಣ ಕಲ್ಲುಮಠದ ಬಾಗಿಲು ಸೇರುವುದಕ್ಕೂ ಮಠದೊಳಗಿನಿಂದ ಪರಶುರಾಮಪ್ಪ, ದಳವಾಯಿ ಭರಮಣ್ಣ ಹೊರಬರುವುದಕ್ಕೂ ಸರಿ

ಹೋಯಿತು. ಅನಿರೀಕ್ಷಿತವಾಗಿ ಮುದ್ದಣ್ಣನನ್ನು ಕಂಡ ಅವರಿಬ್ಬರಿಗೂ, ಒಂದು ಗಳಿಗೆ ಕತ್ತಲಲ್ಲಿ ಹಾವು ತುಳಿದಂತಾಯಿತು. ಆದರೆ ಅದನ್ನು ತೋರಗೊಡದೆ, "ದಳವಾಯಿಗಳು ಕುಶಲವೇ?" ಎಂದು ಕೇಳಿ ನಮಸ್ಕಾರ ಮಾಡಿದರು.

"ನಿಮ್ಮ ದಯೆ"

—ಎಂದು ಅವರಿಬ್ಬರ ಮೊಗವನ್ನು ವಿಚಿತ್ರವಾದ, ಮೊನೆಯಾದ ನೋಟದಿಂದ ನೋಡಿ ಹೇಳಿದ, ಮರುಗಳಿಗೆಯೇ ಅವರು ಅಲ್ಲಿರುವುದೂ ತಿಳಿಯದವನಂತೆ, ಬಾಗಿಲಿನಲ್ಲಿದ್ದ ಮಠದ ಆಳಿಗೆ "ನಾವು ಬಂದಿದ್ದೇವೆಂದು ಗುರುಗಳಿಗೆ ತಿಳಿಸು ಎಂದು ಹೇಳಿ ಅವರತ್ತ ಬೆನ್ನು ತಿರುಗಿಸಿ ನಿಂತ.

ಮಠದ ಆಳು ಒಳಗೆ ಹೋಗಿ ಬಂದು....

"ಅಪ್ಪಣೆಯಾಗಿದೆ. ಒಳಗೆ ಬರಬೇಕು" ಎಂದು ಹೇಳಿದ.

ತನ್ನ ಮುಖವನ್ನೇ ನೋಡುತ್ತಾ ನಿಂತಿದ್ದ ಪರಶುರಾಮಪ್ಪ, ಭರಮಣ್ಣನವರನ್ನು ತಿರುಗಿಯೂ ನೋಡದೆ ಮುದ್ದಣ್ಣ ಮಠದೊಳಗೆ ಪ್ರವೇಶಮಾಡಿದ. ಅನಿರೀಕ್ಷಿತವಾಗಿ ಅವರಿಬ್ಬರನ್ನು ಅಲ್ಲಿ ಕಂಡ ಅವನಿಗೆ, ಶಕುನಕೇಳಿ ಹೊರಟವನಿಗೆ ಬಾಗಿಲಲ್ಲೇ ಬೆಕ್ಕು ಕಂಡಂತಾಗಿ ಮನಸ್ಸು ಮುಳ್ಳಾಗಿತ್ತು.

"ದಳವಾಯಿಗಳು ದಯಮಾಡಿಸಬೇಕು."

—ಎಂದರು ಗುರುಗಳು, ಮುದ್ದಣ್ಣನಿಗೆ ಕೂಡಲು ಸ್ಥಳ ತೋರಿಸಿ.

"ಶರಣು"—ಎಂದು ನಮಸ್ಕರಿಸಿದಂತೆ ಮಾಡಿ, ಅವರು ತೋರಿದ ಪೀಠದಲ್ಲಿ ಕುಳಿತುಕೊಳ್ಳುತ್ತಾ ಹೇಳಿದ ಮುದ್ದಣ್ಣ-"ನಮ್ಮಿಂದ ಗುರುಗಳಿಗೆ ತುಂಬಾ ತೊಂದರೆಯಾಗುತ್ತಿರುವಂತೆ ಕಾಣುತ್ತದೆ. ವಿಶ್ರಾಂತಿಯ ಸಮಯವೇನೋ. ತೊಂದರೆಯಾದರೆ ಮತ್ತೊಮ್ಮೆ ಬಂದು ನೋಡುತ್ತೇನೆ."

"ನೀವು ಬಂದರೆ ತೊಂದರೆಯೇ? ನೀವು ಬರುವುದೇ ಅಪರೂಪ."

"ನಾವೊಬ್ಬರು ಅಪರೂಪವಾದರೇನು? ನಮ್ಮ ಹಾಗೇ ಹತ್ತು ಜನ ಇದ್ದೇ ಇರುತ್ತಾರೆ. ನಮಗೇನೋ ನೀವು ಒಬ್ಬರೇ. ನಿಮಗೆ ನಮ್ಮಂಥವರು ನೂರು ಜನ. ಈಗ ತಾನೇ ಪರಶುರಾಮಪ್ಪನವರು, ದಳವಾಯಿ ಭರಮಣ್ಣನವರು ಬಂದಹಾಗಿತ್ತು.

"ಹೂ. ಈಗ ತಾನೇ ಹೋದರು. ನಿಮಗೂ ದಾರಿಯಲ್ಲೇ ಸಿಕ್ಕಿರಬೇಕು. ನಿಮ್ಮ ಹಾಗೇ ಅವರಿಗೂ ನಮ್ಮಲ್ಲಿ ತುಂಬಾ ವಿಶ್ವಾಸ."

"ನಮ್ಮ ವಿಶ್ವಾಸ ನಿಮ್ಮ ಪಾಲಿಗೆ ಉರಲು."

"ಹಾಗೆಂದರಾಗುತ್ತದೆಯೇ? ಬರುವವರು ಬರುತ್ತಿರಲೇಬೇಕು. ಬರುವವರಿಗೆ ಬೇಡ ಎಂದರೆ ನಾವು ಇರುವುದು ಏಕೆ?"

"ನನ್ನಂಥವನು ಬರಡು ಭೇಟಿ, ಒಣಹರಟೆಯಲ್ಲಿ ಹೊತ್ತು ಕಳೆಯಲೇ?"

"ನಿಮ್ಮ ವಿಶ್ವಾಸಕ್ಕೆ ಆ ಹೆಸರು ಕೊಟ್ಟರೆ ಶಿವ "ಛೀ" ಅಂದಾನು. ಏನೋ—ಅವರಿಗೆ ನಮ್ಮ ಅಗತ್ಯವಿದೆ ಎಂತ ಹತ್ತು ಜನ ನಮ್ಮ ಬಳಿ ಬರುತ್ತಾರೆ. ನೀವು ತಾನೇ ಬರುತ್ತೀರಾ? ಏನೋ ಕೆಲಸವಿತ್ತು—ಬಂದಿದ್ದೀರಿ ದಳವಾಯಿಗಳೇ?"

"ಅವರು ಬಂದ ಕೆಲಸಕ್ಕೇ."

"ಅಂದರೆ...."

—ಮುದ್ದಣ್ಣನ ಮಾತು ಅಧಿಕವಾಗದಂತೆ ಕೇಳಿದರು ಗುರುಗಳು.

"ಸುತ್ತ ಬಳಸು ಮಾತನಾಡಿ ಅಭ್ಯಾಸವಿಲ್ಲ. ಆದ್ದರಿಂದ ನಮ್ಮ ಮಾತನ್ನು ಗುರುಗಳು ಅನ್ಯಥಾ ಭಾವಿಸಬಾರದು."

"ಹಾಗೇನೂ ಸಂಕೋಚಪಟ್ಟುಕೊಳ್ಳಬೇಡಿ. ನಮಗೂ ನೇರವಾಗಿ ಕಾಪಾಡುವವರನ್ನು ಕಂಡರೇ ಪ್ರೀತಿ. ಅದೇನು ಹೇಳು"

"ಅವರು ಬಂದದ್ದು ಲಿಂಗಣ್ಣನಾಯಕನನ್ನು ಪಟ್ಟಕ್ಕೆ ತರುವ ವಿಷಯ ಮಾತನಾಡುವುದಕ್ಕಲ್ಲವೆ?"

"ಅಲ್ಲ ಎಂದರೆ ಆಕೃತಕವಾದೀತು."

ನಾವು ಬಂದದ್ದೂ ಅದಕ್ಕೇ. ಅವರು ತಮ್ಮಲ್ಲಿ ಏನು ಹೇಳಿದರೋ, ಏನು ಕೇಳಿದರೋ ನಮಗೆ ತಿಳಿಯದು. ಆದರೆ ಮೊದಲೇ ಒಂದು ಮಾತು ಹೇಳಿಬಿಡುತ್ತೇನೆ? ಲಿಂಗಣ್ಣನಾಯಕರು ಪಟ್ಟಕ್ಕೆ ಬರುವುದು ನಮಗೆ ಅಪ್ರಿಯವಾಗಿಲ್ಲ."

"ಹಾಗೆಂದು ಅವರೂ ಹೇಳಲಿಲ್ಲ."

"ಹೇಳದಿದ್ದರೆ ತುಂಬಾ ಸಂತೋಷ. ಆದರೆ ನಮ್ಮ ವಿಷಯದಲ್ಲೇನೋ ಅವರಿಗೆ ಅದೇ ಭಾವನೆ ಇದೆ."

"ಏನು ಭಾವನೆ ?"

"ಲಿಂಗಣ್ಣನಾಯಕರು ಪಟ್ಟಕ್ಕೆ ಬರಲು ನಾವು ವಿರೋಧವಾಗಿದ್ದೇವೆ ಎಂದು. ನಮ್ಮ ಪರವಾಗಿ ತಾವು ಅವರಿಗೆ ಹೇಳಹೇಳಬೇಕು—ನಮಗೆ ಅಂಥ ಭಾವನೆಯೇನೂ ಇಲ್ಲ. ಲಿಂಗಣ್ಣನಾಯಕರು ಪಟ್ಟಕ್ಕೆ ಬರುವುದು ಅವರಷ್ಟೇ ನಮಗೂ ಸಂತೋಷವೇ. ಆ ಮಾತನ್ನು ತಮಗೆ ಹೇಳಬೇಕೆಂದೇ ಇಲ್ಲಿಗೆ ಬಂದದ್ದು.

"ಶುಭಮಸ್ತು. ಬಹಳ ಸಂತೋಷದ ಸುದ್ದಿ ಇದು."

"ನೆನ್ನೆ ತಾವು ಕೇಳಿದಾಗಲೇ ಈ ಮಾತು ಹೇಳಬಹುದಾಗಿತ್ತು. ಆದರೆ ಇದು ನಮ್ಮ ಇಷ್ಟಾನಿಷ್ಟದ ವಿಷಯವಲ್ಲ. ಆದುದರಿಂದ ಉಳಿದವರನ್ನು ಒಂದು ಮಾತು ಕೇಳಬೇಕೆಂದು ಆ ದಿನ ಯಾವ ಮಾತನ್ನು ಖಚಿತವಾಗಿ ಹೇಳಲಿಲ್ಲ."

"ಅಂದರೆ—ಈಗ ಉಳಿದವರೂ ಇದಕ್ಕೆ ಒಪ್ಪಿದ್ದಾರೆಯೋ ?'

"ಹಾಗೆಂದೇ ಇಟ್ಟುಕೊಳ್ಳಬಹುದು."

"ಆದರೆ ಎಲ್ಲರೂ ಒಪ್ಪಿಲ್ಲ ?"

"ಈಗ ಒಪ್ಪಿದ್ದಾರೆ."

"ಇದಕ್ಕೆ ಮೊದಲು ?"

—ಮುದ್ದಣ್ಣನ ಮಾತು ಕೇಳಿ ಸಂದಿಗ್ಧಕ್ಕೊಳಗಾದ ಗುರುಗಳು ಕೇಳಿದರು.

"ಇಷ್ಟು ದಿನ ರಾಜಕಾರಣದ ಸಂಪರ್ಕವನ್ನೇ ಇಟ್ಟುಕೊಳ್ಳದ ಅವರು, ಬಹಳ ತೊಡಕಾದ ದುರ್ಗದ ರಾಜಕಾರಣವನ್ನು ನಿರ್ವಹಿಸಿಯಾರೇ ಎಂಬ ಸಂದೇಹ ಕೆಲವರಿಗಿತ್ತು. ಮತ್ತೆ ಕೆಲವರಿಗೆ, ಅವರು ಹಿಂದಾದುದರ ಕಹಿಯನ್ನು ಮನಸ್ಸಿನಲ್ಲಿಟ್ಟುಕೊಂಡು, ಎಲ್ಲಿ ಹೊಸ ಸಮಸ್ಯೆಗಳನ್ನು ತಂದೊಡ್ಡಿಯಾರೋ ಎಂದು ಅನುಮಾನವೂ ಇತ್ತು. ಅದಕ್ಕೇನೂ ಕಾರಣವಿಲ್ಲವೆಂದು ನಾವು ಹೇಳಿದರೂ ಅವರು ನಂಬುವುದು ಕಷ್ಟವಾಯಿತು. ಅದಕ್ಕೆಂದೇ ತಮ್ಮಲ್ಲಿಗೆ ನಾನು ಬಂದೆ. ತಾವು ನಮಗೆ ಒಂದು ಭರವಸೆಯ ಮಾತು ಹೇಳಿದರೆ ಎಲ್ಲರ ಮನಸ್ಸಿಗೂ ಸಮಾಧಾನವಾಗುತ್ತದೆ.

"ನಾನೇ—ನಾವು ಭರವಸೆಯ ಮಾತು ಹೇಳಬೇಕೇ? ನಮಗೂ ಇದಕ್ಕೂ ಏನು ಸಂಬಂಧ?"

"ತಮಗೂ ಇದಕ್ಕೂ ಏನೂ ಸಂಬಂಧವಿಲ್ಲದೆ ಇರಬೇಕು. ತಾವು ಮಾತ್ರ ಈ ರಾಜಕಾರಣದ ಕೆಸರಿನಲ್ಲಿ ಮುಳುಗದೆ ಲೋಕಕಲ್ಯಾಣಾರ್ಥವಾಗಿ ತಪೋನಿರತವಾಗಿರಬೇಕೆಂಬುದೇ ನಮ್ಮ ಬಯಕೆಯೇ ಆದರೂ, ನಿಮಗೆ ಬೇಕಾಗಿಯೋ ಬೇಡವಾಗಿಯೋ, ಕೆಲವರು, ನಿಮ್ಮನ್ನು ಇದಕ್ಕೆ ಎಳತಂದಿದ್ದಾರೆ. ನಿಮ್ಮ ಮಾತು ಅವರಿಗೆ ವೇದವಾಕ್ಯ. ನಾವು ಹೇಳುವುದು ಸರಿಯಲ್ಲವೇ?"

—ಭಾವಪೂರ್ಣವಾಗಿ ಗುರುಗಳ ಮೊಗವನ್ನೇ ತನ್ನ ಚೂರಿಗಣ್ಣುಗಳಿಂದ ದಿಟ್ಟಿಸಿ ನೋಡುತ್ತಾ ಹೇಳಿದ ಮುದ್ದಣ್ಣ.

"ಊ ಹೂ. ಅಲ್ಲ. ನೀವು ಹೇಳುವುದು ಸರಿಯಲ್ಲ."

—ಅವನ ಮಾತಿನ ಅಂತರಾರ್ಥ ಅರಿವಾಗದಂತೆ ಹೇಳಿದರು ಗುರುಗಳು.

"ಅಂದರೆ........"

"ಯಾರಿಗೂ ನಮ್ಮ ಮಾತು ವೇದವಾಕ್ಯವಲ್ಲ. ಯಾರೂ ನಮ್ಮನ್ನು ಯಾವುದಕ್ಕೂ ಎಳೆತಂದಿಲ್ಲ."

"ಅಂದರೆ ನೀವಾಗಿಯೇ, ಮನವೊಪ್ಪಿ ಈ ರಾಜಕಾರಣಕ್ಕಿಳಿದಿರಾ?"

–ಗುರುಗಳ ಮಾತು ಕೇಳಿ ಚಕಿತನಾದವನಂತೆ ಕೇಳಿದ ಮುದ್ದಣ್ಣ.

"ಅಹುದು. ತಪ್ಪೇ?"

"ತಪ್ಪು ಎನ್ನುವಷ್ಟು ಶಕ್ತಿ ನಮಗಿಲ್ಲ. ಆದರೂ ತಪಸ್ಸಿಗೂ ರಾಜಕಾರಣಕ್ಕೂ ಏನು ಸಂಬಂಧವೋ, ಎಂಥ ನಂಟೋ ನಮಗೆ ಅರ್ಥವಾಗುವುದಿಲ್ಲ. ನಮ್ಮ ದೃಷ್ಟಿಯಲ್ಲಿ ಮಠ—ದೇವಾಲಯ, ಗುರುಗಳು—ದೇವರು, ಎಲ್ಲಾ ಪರಲೋಕದ ವಿಚಾರಕ್ಕೆ ಹೊಣೆಗಾರರು. ಇಲ್ಲಿಯ ಕೊಳಚೆ ನಮ್ಮಂಥ ಪಾಮರರಿಗೆ."

"ಹಾಗಲ್ಲ."

—ಖಚಿತವಾದ ಧ್ವನಿಯಲ್ಲಿ ಹೇಳಿದರು ಸ್ವಾಮಿಗಳು, ಮುದ್ದಣ್ಣನ ಮಾತಿನಲ್ಲಿ ಅಡಗಿದ್ದ ನವಿರಾದ ವ್ಯಂಗ್ಯವನ್ನು ಗುರುತಿಸಿ.

"ಮತ್ತೆ ಹೇಗೆ?"

"ನೀವು ಚೆನ್ನಾಗಿರಬೇಕು ಎಂಬ ಭಾವನೆ ನಮಗಿದ್ದರೆ, ಅದಕ್ಕಾಗಿ ದುಡಿಯುವುದೇ ನಮ್ಮ ಕರ್ತವ್ಯವಾಗಿದ್ದರೆ, ನಮಗೆ ನಿಮ್ಮ ಸುಖವೂ ಬೇಕು, ಕಷ್ಟವೂ ಬೇಕು. ತುಪ್ಪ ಅಳೆಯುವವನು ಕೈ ಜಿಡ್ಡಾಗಬಾರದು ಎಂದರೆ ಹೇಗಾದೀತು ದಳವಾಯಿಗಳೆ?"

"ಹಾಗೂ ಇರಬಹುದು. ನಾವು ಮೂಢರು. ಅಷ್ಟು ಆಳವಾದ ವಿಚಾರ ನಮಗೇನು ಗೊತ್ತು. ಆದರೂ ಒಮ್ಮೆ, ಚಿಕ್ಕಣ್ಣನಾಯಕರಿದ್ದಾಗ ಅರಮನೆಯಲ್ಲಿ ತಾವು ಮಾಡಿದ ಉಪದೇಶ ನಮ್ಮ ಕಿವಿಯ ಮೇಲೆ ಬೀಳುವ ಭಾಗ್ಯವೂ ನಮ್ಮದಾಗಿತ್ತು. ಆಗ ತಾವೇ ಬಸವಣ್ಣನವರ ವಚನವೊಂದನ್ನು ಹೇಳಿ "ಪರಚಿಂತೆ ಎಮಗೆ ಏಕೆ ಅಯ್ಯಾ................ ಕೂಡಲಸಂಗನು ಒಲಿವನೊ ಒಲಿಯನೊ ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು" ಎಂದು ಅಪ್ಪಣೆ ಕೊಡಿಸಿದ್ದು ನೆನಪಿನಲ್ಲಿ ಇನ್ನೂ ಉಳಿದಿದೆ. ಏನೋ ನಮ್ಮ ನೆನಪಿನದೇ ತಪ್ಪಿರಬಹುದು."

—ಗುರುಗಳ ಹೃದಯವನ್ನು ಇರಿಯಲೇಬೇಕೆಂದು ಉದ್ದೇಶಿಸಿದಂತೆ ಮೊನೆಯಾಗಿ ಹೇಳಿದ ಮುದ್ದಣ್ಣ.

"ಚಿಂತೆಯಿಲ್ಲ, ದಳವಾಯಿಗಳ ಮನಸ್ಸಿನಲ್ಲಿ ಎಂದೋ ಕೇಳಿದ ಅಣ್ಣನವರ ಮಾತು ಇನ್ನೂ ಉಳಿದಿರುವುದು ನಮ್ಮ ಭಾಗ್ಯ. ಅಣ್ಣನವರು ಹೇಳಿದ ಹಾಗೇ ಅಕ್ಕನವರೂ ಒಂದು ಜ್ಯೋತಿಯಂಥ ಮಾತು ಹೇಳಿದ್ದಾರೆ. ಅದನ್ನೂ ಆ ದಿನ ಹೇಳಿದ್ದೆವು. ಆದರೆ ಅದು ದಳವಾಯಿಗಳಿಗೆ ನೆನಪಿದೆಯೋ ಇಲ್ಲವೋ?"

"ಮತ್ತೊಮ್ಮೆ ಅಪ್ಪಣೆ ಕೊಡಿಸಬೇಕು."

"ಅಕ್ಕನವರು ಅಪ್ಪಣೆ ಕೊಡಿಸಿದ್ದಾರೆ—'ಹಾವಿನ ಹಲ್ಲಕಳೆದು ಹಾವನಾಡಿಸ ಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯಾ' ಎಂದು."

—ಗುರುಗಳು ನಿಧಾನವಾಗಿ, ಮಾತು ಮನದ ಆಳಕ್ಕೆ ಇಳಿಯುವಂತೆ ಹೇಳಿವರು ಯಾವ ಭಾವನೆಯ ಸೋಂಕೂ ಇಲ್ಲದ ನಿರ್ವಿಕಾರವಾದ ಸ್ವರದಲ್ಲಿ. ಆದರೂ ಅವರ ಮಾತು ಗುರಿಯಿಟ್ಟು ಹಾರಿಸಿದ ಗುಂಡಿ

ನೇಟನಂತೆ ಲಕ್ಷ್ಯಭೇದನ ಮಾಡಿತು. ಅದನ್ನು ಕೇಳಿದ ಮುದ್ದಣ್ಣನ ಮುಖ ಒಂದು ಗಳಿಗೆ ಕೆಂಪೇರಿ, ಮರುಗಳಿಗೆಯೇ ಬಿರುಸಾಯಿತು.

"ಆ ಧರ್ಮಸೂಕ್ಷ್ಮವೆಲ್ಲಾ ತಮ್ಮಂಥ ಜ್ಞಾನಿಗಳಿಗೆ. ನಮ್ಮಂಥ ಅಜ್ಞರಿಗೇನು ತಿಳಿಯುತ್ತದೆ? ನಾವು ಕತ್ತಿಯಾಡಿಸಲು ಕಲಿತೆವೇ ಹೊರತು ಬುದ್ಧಿಯೋಡಿಸಲು ಕಲಿಯಲಿಲ್ಲ. ಹಾವನ್ನಾಡಿಸುವುದೋ, ಹುಲಿಯನ್ನು ಪಳಗಿಸುವುದೋ—ಆ ಗಾರುಡಿವಿದ್ಯೆಯೆಲ್ಲಾ ನಮಗೆ ಅರ್ಥವಾಗದ ಚದುರು. ತಾವು ಅಪ್ಪಣೆ ಕೊಡಿಸಿದುದೇ ನಮಗೆ ಧರ್ಮ ಶಾಸ್ತ್ರ. ರಾಜಕಾರಣದ ಹಾವಿನ ಸರಸವೇ ತಮಗೆ ಲೇಸು ಎನಿಸಿದರೆ ಅಲ್ಲವೆನ್ನಲು ನಾವು ಯಾರು? ಈ ಧರ್ಮ ಚರ್ಚೆಗೆಂದಲ್ಲ ನಾವು ಬಂದದ್ದು."

—ಗಡುಸಾದ ಧ್ವನಿಯಲ್ಲಿ ಹೇಳಿದ ಮುದ್ದಣ್ಣ.

"ನಿಜ. ಈ ವೃಥಾ ವಾಗ್ವಾದದಿಂದ ತಮ್ಮ ಅಮೂಲ್ಯವಾದ ವೇಳೆ ವ್ಯರ್ಥವಾಗುತ್ತಿದೆ. ತಾವು ಬಂದ ವಿಚಾರ ಹೇಳಬೇಕು."

"ಇಷ್ಟೆ—ಲಿಂಗಣ್ಣನಾಯಕರು ಪಟ್ಟಕ್ಕೆ ಬರಲು ನಾವು ಯಾರೂ ವಿರೋಧಿಗಳಾಗಿಲ್ಲ. ಲಿಂಗಣ್ಣನಾಯಕರು ಒಪ್ಪಿದರೆ ನಾಳೆಯೇ ಪಟ್ಟಕ್ಕೆ ಬರಬಹುದು. ಆದರೆ—"

"ಹೂ."

"ಚಿಕ್ಕಣ್ಣನಾಯಕರ ಮೊದಲು ಏನಾಯಿತೋ, ಹೋಯಿತೋ ಅದನ್ನು ಲಿಂಗಣ್ಣನಾಯಕರು ಮನಸ್ಸಿನಲ್ಲಿಟ್ಟುಕೊಳ್ಳದೆ, ಎಲ್ಲರನ್ನೂ ಸಮಾನವಾಗಿ ಕಂಡು ರಾಜ್ಯವಾಳಲಿ. ಚಿಕ್ಕಣ್ಣನಾಯಕರ ಕಾಲದಲ್ಲಿ ಏನು ಏರ್ಪಾಡಿತ್ತೋ, ಏನು ರಿವಾಜು, ಮರ್ಯಾದೆಗಳಿತ್ತೋ ಅದನ್ನು ಮುರಿಯದೆ ರಾಜ್ಯವಾಳಿದರೆ ನಮಗೂ ಸಂತೋಷ. ತಾವು ಈ ಮಾತನ್ನು ಅವರಿಗೆ ಹೇಳಬೇಕು."

"ನಮಗೆ ಹೇಳುವುದೇನು, ಅವರಿಗೇ ಹೇಳಬಹುದಲ್ಲಾ ದಳವಾಯಿಗಳೇ. ಪಟ್ಟಕಟ್ಟಿಸಿಕೊಂಡರೆ ರಾಜ್ಯವಾಳುವವರು ಅವರು, ನಾವಲ್ಲ"

"ನಿಜ, ಪಟ್ಟಕಟ್ಟಿಸಿಕೊಂಡು ರಾಜ್ಯವಾಳುವವರು ಅವರು; ಪಟ್ಟ ಕಟ್ಟಿಸಿಕೊಳ್ಳದೆಯೇ ರಾಜ್ಯವಾಳುವವರೂ ಕೆಲವರಿದ್ದಾರೆ. ಅವರಿಗೂ

ತಾವು ಈ ಮಾತನ್ನು ಹೇಳಬೇಕು. ಹಾಗೆಯೇ ನಮ್ಮ ಬಗ್ಗೆ ವೃಥಾ ದ್ವೇಷ ಹುಡುಕುವುದೂ ಉಭಯತಾಪಿ ಒಳ್ಳೆಯದಲ್ಲ."

—ಕಡ್ಡಿ ಮುರಿದು ತುಂಡುಮಾಡುವಂತೆ ಹೇಳಿದ ಮುದ್ದಣ್ಣ.

"ನೀವು ಹೇಳುವುದು ಸರಿ, ದಳವಾಯಿಗಳೇ. ಆದರೆ ಇದನ್ನೆಲ್ಲಾ ನಮಗೇಕೆ ಹೇಳುತ್ತಿದೀರ? ಯಾರಿಗೆ ಹೇಳಬೇಕೋ ಅವರಿಗೇ ಹೇಳಿದರೆ ಒಳಿತಲ್ಲವೇ?"

"ಅವರೆಲ್ಲರೂ ನಿಮ್ಮ ಬಳಿ ಬರುವಷ್ಟು ನಿಸ್ಸಂಕೋಚವಾಗಿ ನಮ್ಮ ಬಳಿ ಬರುವುದಿಲ್ಲ. ಅಲ್ಲದೆ ಶಂಖದಿಂದ ಬಂದದ್ದೇ ತೀರ್ಥವಲ್ಲವೇ? ಆದ್ದರಿಂದ ನಮ್ಮ ಪರವಾಗಿ ತಾವು ಅವರಿಗೆ ಈ ಮಾತು ಹೇಳಬೇಕು. ಹಾಗೇ........ಹಾಗೇ....ನಾಗತಿಯರಿಗೂ ಹೇಳಬೇಕು—ನಮ್ಮ ಮೂಲಕ ಅವರು ಕೊಡಿಸಿದ ಅಪ್ಪಣೆಯನ್ನು ನಾವು ಶಿರಸಾವಹಿಸಿ ನಡೆಸಲು ಸಿದ್ಧರಾಗಿದ್ದೇವೆ ಎಂದು. ಇಷ್ಟೇ ನಾವು ಹೇಳಬೇಕೆಂದಿದ್ದುದು. ಇನ್ನು ತಮ್ಮ ಅಮೂಲ್ಯವಾದ ವೇಳೆಯನ್ನು ವ್ಯರ್ಥಗೊಳಿಸಲು ನಮಗೆ ಇಷ್ಟವಿಲ್ಲ. ಅಪ್ಪಣೆಯಾದರೆ ಮತ್ತೊಮ್ಮೆ ಬಂದು ಕಾಣುತ್ತೇವೆ—ತಮಗೆ ನಮ್ಮಿಂದ ಏನು ಕಾರ್ಯವಾಗುವುದಿದ್ದರೂ ಅಪ್ಪಣೆ ಕೊಡಿಸಬೇಕು. ನಾವೂ ತಮ್ಮ ಶಿಷ್ಯರೇ ಎಂದು ಭಾವಿಸಿ ನಮ್ಮನ್ನು ಅನುಗ್ರಹಿಸಬೇಕು."

—ಎಂದು ನುಡಿದು, ಗುರುಗಳಿಗೆ ನಮಸ್ಕರಿಸಿ, ಹೊರಡಲನುವಾಗಿ ನಿಂತ ಮುದ್ದಣ್ಣ.

"ನಮ್ಮ ಮೇಲಿನ ತಮ್ಮ ಅಭಿಮಾನ ಹೀಗೇ ಸ್ಥಿರವಾಗಿರಲಿ"

—ಎಂದು ಗುರುಗಳು ಮುದ್ದಣ್ಣನ ಬೊಗಸೆಗೆ ವಿಭೂತಿಯ ಪ್ರಸಾದವನ್ನು ಹಾಕಿದರು.

ಮುಷ್ಟಿಯಲ್ಲಿ ಆ ವಿಭೂತಿಯನ್ನು ಹಿಡಿದು ಮಠದಿಂದ ಹೊರಬಿದ್ದ ಮುದ್ದಣ್ಣ, ತನಗಾಗಿ ಬಂದು, ಮಠದ ಹೊರಬಾಗಿಲಬಳಿ ಕಾದಿದ್ದ ಮೇನಾದೊಳಗೆ ಕುಳಿತು, ಗುರುಗಳು ಕೊಟ್ಟ ವಿಭೂತಿಯನ್ನು ಗಾಳಿಗೆ ಊದಿ—

"ನಮಗೆ ಇದಿರಾದವರ ಗತಿಯೂ ಇಷ್ಟೆ"

—ಎಂದು ತನಗೆ ತಾನೆ ಹಲ್ಲು ಕಡಿಯುತ್ತಾ ಹೇಳಿಕೊಂಡ.

"ತಾವು ದಳವಾಯಿಗಳಲ್ಲಿ ಪ್ರಧಾನಿಪಟ್ಟದ ವಿಚಾರವಾಗಿ ಅಷ್ಟು ಖಡಾಖಂಡಿತವಾಗಿ ಮಾತನಾಡಿದುದು ಸರಿಯಲ್ಲ. ಅದು ಮೊದಲೇ ಕೆರಳಿದ ಪಶುವಿಗೆ ಮತ್ತಷ್ಟು ಕಳ್ಳು ಕುಡಿಸಿದಂತಾಗಿದೆ."

ಮಠದಲ್ಲಿ ತಮ್ಮೊಡನೆ ಸಮಾಲೋಚನೆಗೆಂದು, ಪರಶುರಾಮಪ್ಪ ದಳವಾಯಿ ಭರಮಣ್ಣನವರೊಂದಿಗೆ ಬಂದಿದ್ದ ಲಿಂಗಣ್ಣನಾಯಕನನ್ನು ನೋಡಿ ಹೇಳಿದರು ಗುರುಗಳು.

ಅಷ್ಟೇ ಹೇಳಿ ಕಳುಹಿಸಿದುದು ಅವನ ಪುಣ್ಯ. ನನ್ನ ಹೃದಯವನ್ನೇ ಬಿಚ್ಚಿ ಮಾತನಾಡಿದ್ದರೆ, ಅವನ ನೆತ್ತಿಯ ಮೇಲೆ ಹಾಲಹಲದ ಮಳೆಯನ್ನೇ ಕರೆಯುತ್ತಿದ್ದೆ."

—ಎಂದ ಲಿಂಗಣ್ಣನಾಯಕ ಆಕ್ರೋಶದಿಂದ.

"ನಿಜ. ಹಾಗೆ ಮಾತನಾಡಲು ನಿಮಗೆ ಕಾರಣವಿದೆ. ನಮಗೂ ಗೊತ್ತು. ಆದರೂ ಅವರಾಗಿಯೇ ನಿಮ್ಮ ಬಳಿ ಬಂದಿದ್ದಾಗ, ಇನ್ನಷ್ಟು ಔದಾರ್ಯದಿಂದ ನಡೆದುಕೊಂಡಿದ್ದರೆ, ಎರಡು ಕಡೆಯೂ ಕಹಿ ಅಷ್ಟು ಕಡಮೆ ಆಗುತ್ತಿತ್ತು. ಅಲ್ಲದೆ ಇಂದು ಆಗಲೇಬೇಕಾದ ಕೆಲಸಕ್ಕೆ ಈ ಹಟದಿಂದ ಪ್ರಯೋಜನವೂ ಇಲ್ಲ. ಈಗ ನೀವು ಪಟ್ಟಕ್ಕೆ ಬರುವುದು ಮುಖ್ಯವೇ ಹೊರತು, ಉಳಿದಾವ ಮಾತುಗಳಿಗೂ ಅಷ್ಟು ಪ್ರಾಮುಖ್ಯತೆ ಇಲ್ಲ. ಇಂಥ ಮಾತುಗಳಿಂದ, ಅನುಕೂಲಕ್ಕಿಂತ ಅನಾನುಕೂಲವೇ ಆಗುವ ಸಂಭವ ಹೆಚ್ಚು. ವಿಚಾರಮಾಡಿನೋಡಿ, ನಾಯಕರೇ."

—ಲಿಂಗಣ್ಣನಾಯಕನಲ್ಲಿ ಉದ್ರೇಕಗೊಂಡ ಆಕ್ರೋಶವನ್ನು ಸಮಾಧಾನಗೊಳಿಸುತ್ತಾ ಹೇಳಿದರು ಸ್ವಾಮಿಗಳು.

"ಗುರುಗಳಾಡುವ ಮಾತು ಸರಿಯಾದದ್ದು, ನಾಯಕರೇ. ತಾವು ಮುದ್ದಣನಲ್ಲಿ ಈ ಮಾತನ್ನಾಡಿ ನಮ್ಮ ಬಾಯನ್ನು ಕಟ್ಟಿದಿರಿ."

—ಚಿಂತೆ ತುಂಬಿ ತುಳುಕುವ ಧ್ವನಿಯಲ್ಲಿ ಹೇಳಿದ ಪರಶುರಾಮಪ್ಪ.

ಏಕೆ? ನಾನಾಡಿದ ಮಾತಿನಿಂದ ನಿಮಗೇನು ತೊಂದರೆ?"

—ಪರಶುರಾಮಪ್ಪನ ಮಾತುಕೇಳಿ ಲಿಂಗಣ್ಣನಾಯಕ ಅಚ್ಚರಿಯಿಂದ ಕೇಳಿದ.

"ಅಲ್ಲವೇ? ಈಗ ಮುದ್ದಣ್ಣ ನಮ್ಮ ಕನಸುಮನಸಿನಲ್ಲಿಯೂ ಇಲ್ಲ ದುದನ್ನು ನಮ್ಮಲ್ಲಿ ಆರೋಪಿಸಿ, ಅಪಪ್ರಚಾರ ಮಾಡಲು ನೀವೇ ದಾರಿ ಮಾಡಿಕೊಟ್ಟ ಹಾಗಾಯಿತು."

"ಹೇಗೆ? ನಾಯಕರು ಹೇಳಿದ ಮಾತಿನಲ್ಲಿ ತಪ್ಪೇನೂ ಇಲ್ಲ. ಇರುವ ಮಾತನ್ನೇ, ಆಡಬೇಕಾದ ಮಾತನ್ನೇ ಅವರು ಆಡಿದರು. ಅದರಲ್ಲಿ ನನಗೇನೂ ತಪ್ಪು ಕಾಣುವುದಿಲ್ಲ."

—ದಳವಾಯಿ ಭರಮಣ್ಣ ಲಿಂಗಣ್ಣನಾಯಕನ ನಡತೆಯನ್ನು ಸಮರ್ಥಿಸಿ ಹೇಳಿದ.

"ಹಾಗಲ್ಲ ಭರಮಣ್ಣ, ನಮ್ಮ ಮನಸ್ಸಿನಲ್ಲಿ ಕಲ್ಮಷವೇನೂ ಇಲ್ಲ. ಆದುದರಿಂದಲೇ ನಮಗೇನೂ ಇದರಲ್ಲಿ ದೋಷ ಕಾಣುವುದಿಲ್ಲ. ಆದರೆ ಮುದ್ದಣ್ಣನ ದೃಷ್ಟಿಯಿಂದ ನೋಡು. ಲಿಂಗಣ್ಣನಾಯಕರು ನನಗೆ ಪ್ರಧಾನಿ ಪಟ್ಟವಾದರೇ ತಾವು ಪಟ್ಟಕ್ಕೆ ಒಪ್ಪುವುದಾಗಿ ಹೇಳಿದರೆ, ನಾವು ಲಿಂಗಣ್ಣನಾಯಕರ ಪಕ್ಷ ಕಟ್ಟಿರುವುದು ಆ ಪ್ರಧಾನಿ ಪಟ್ಟದ ಬಯಕೆ ಯಿಂದಲೇ ಎಂದು ಅವರು ಆಡಿಕೊಳ್ಳಲು ಅವಕಾಶವಾಗುವುದಿಲ್ಲವೇ?"

—ಪರಶುರಾಮಪ್ಪ ಭರಮಣ್ಣನ ಪ್ರಶ್ನೆಗೆ ಉತ್ತರ ಕೊಡುತ್ತಾ ಹೇಳಿದ.

"ಅವನಿಗೇನು—ಬೇಕಾದದ್ದು ಹೇಳಬಹುದು. ನೆಕ್ಕುವ ನಾಯಿಗೆ ಲಿಂಗವೇನು, ಪಾಣಿಪಟ್ಟವೇನು? ಅವನು ಸಾವಿರ ಹೇಳಿದರೂ ಕೇಳುವವ ರೊಬ್ಬರು ಬೇಕಲ್ಲ?"

—ಭರಮಣ್ಣ ಪರಶುರಾಮಪ್ಪನ ಮಾತನ್ನು ನಂಬದವನಂತೆ ನುಡಿದ.

"ಅಂದರೆ—ಎಲ್ಲರ ಮನಸ್ಸೂ ನಿಮಗೆ ಗೊತ್ತೆ—"

—ಗುರುಗಳೇ ಭರಮಣ್ಣನನ್ನು ಕೇಳಿದರು.

"ಎಲ್ಲರ ಮನಸ್ಸನ್ನೂ ಅರಿಯಲು ನಾನು ಭಗವಂತನಲ್ಲ. ಆದರೂ ಸುಳ್ಳು ಮಾತನ್ನು ಜನ ನಂಬುವುದಿಲ್ಲವೆಂದು ನಾನು ಬಲ್ಲೆ."

"ನಿಮ್ಮ ಮನಸ್ಸು ಹಾಗೆ. ಅದಕ್ಕೇ ಎಲ್ಲರೂ ನಿಮ್ಮ ಹಾಗೇ ಎಂದು ಊಹಿಸಿ ಹೇಳುತ್ತೀರಿ. ಲೋಕದ ರೀತಿಯೇ ಹಾಗೆ—ತಾವಿದ್ದ ಹಾಗೇ ಜಗತ್ತು ಎಂದು ನಂಬುವುದು. ಆದರೆ ವಸ್ತುಸ್ಥಿತಿ ಹಾಗಿರುವುದಿಲ್ಲ.

ಎಷ್ಟು ಜನವೋ ಅಷ್ಟು ಬಗೆಯ ಮನಸ್ಸು; ಒಂದೊಂದು ಗಿಡದ ಹೂವಿಗೆ ಒಂದೊಂದು ಬಗೆಯ ಬಣ್ಣ, ಪರಿಮಳವಿದ್ದಂತೆ. ಆದುದರಿಂದ ಅದನ್ನು ಅರಿತು, ನಮಗೆ ಕೊಂಚ ಅನ್ಯಾಯವಾದರೂ, ಬೇರೆಯವರು ನಾವೇ ಅನ್ಯಾಯ ಮಾಡುತ್ತಿದ್ದೇವೆ ಎಂದು ದೂರಲು ಅವಕಾಶವಾಗದಂತೆ ನಡೆಯುವುದು ಮೇಲು. ಸಾಧಾರಣವಾಗಿ ಈ ಮಾತು ನಮಗೆ ತಿಳಿದಿರಬೇಕಾದುದು ಅಗತ್ಯ. ಈಗಂತೂ ಇದ್ದದ್ದೂ ವಿಶೇಷ ಪರಿಸ್ಥಿತಿ. ಮೊದಲೇ ದಳವಾಯಿಗಳಿಗೆ ನೀವು ಇದಿರು ಗುಂಪು ಎನಿಸಿದೆ. ನೀವು ಅಧಿಕಾರಕ್ಕೆ ಬಂದರೆ ತನಗೆ ಏನು ಭೀತಿಯೋ ಎಂಬ ಅಳುಕೂ ಇದೆ. ಅಲ್ಲದೆ ನಿಮಗೇ ತಿಳಿದಿರುವಂತೆ ಆತನಿಗೆ ಅಧಿಕಾರವ್ಯಾಮೋಹವೂ ಇದೆ. ಇಷ್ಟೆಲ್ಲಾ ತಿಳಿದಿದ್ದೂ—ಮೊದಲೇ ಆತನನ್ನು ಬೆದರಿಸುವಂತೆ ಗುಟುರೆ ಹಾಕುವುದು ಸರಿಯಾಗುವುದಲ್ಲ. ಅಲ್ಲದೆ ಲಿಂಗಣ್ಣನಾಯಕರು ಪಟ್ಟಕ್ಕೆ ಬರುವ ಉದ್ದೇಶವೂ ಅದಲ್ಲ."

"ಅದಲ್ಲದೆ ಬೇರೊಂದು ಉದ್ದೇಶವೇ ನನಗಿಲ್ಲ. ಈ ಕಿರೀಟ, ಸಿಂಹಾಸನ, ರಾಜ್ಯಾಧಿಪತ್ಯದ ವ್ಯಾಮೋಹ ನನಗೆ ಎಳ್ಳಷ್ಟೂ ಇಲ್ಲ ಗುರುಗಳೇ. ಯಾರು ನನ್ನ ತಾಯಿಗಿಂತ ಹೆಚ್ಚಿನ ತಾಯಾಗಿದ್ದರೋ ಆಕೆಯನ್ನು ನುಂಗಿದ ಈ ರಾಜ್ಯ ನನ್ನ ಪಾಲಿಗೆ ಪಾದರಿ ನೆಲ, ಹಾಲಾಹಲ. ಈ ಸಿಂಹಾಸನವನ್ನು ನಾನು ಏರಲು ಒಪ್ಪಿರುವುದು ಒಂದೇ ಉದ್ದೇಶದಿಂದ..........."

ಗುರುಗಳ ಮಾತಿಗೆ ಭರಮಣ್ಣ ಉತ್ತರ ಕೊಡುವ ಮೊದಲೇ ಲಿಂಗಣ್ಣನಾಯಕನೇ ನಡುವೇ ಬಾಯಿಹಾಕಿ ಹೇಳಿದ.

"ಹಾಗಾದರೆ ನಿಮ್ಮ ಉದ್ದೇಶ ಏನು?"

"ನನ್ನ ಉದ್ದೇಶವೇ—ಸೇಡು! ನಿಮ್ಮ ಆಶೀರ್ವಾದ ಬಲವೊಂದಿದ್ದರೆ–ಯಾರು ದೇಸಣ್ಣನವರ ತಲೆ ಕಡಿದರೋ, ಯಾರು ಭುವನಪ್ಪನವರ ಭಿಕಾರಿಯಂಥ ಸಾವಿಗೆ ಕಾರಣರಾದರೋ, ಯಾರ ಕೈ ನನ್ನ ಸೋದರ ಓಬಣ್ಣನಾಯಕನ ತಲೆಯನ್ನು ಕತ್ತರಿಸಿತೋ, ಯಾರ ರಕ್ತದಾಹ ನನ್ನ ತಾಯಿ ಹೊಂಡದಲ್ಲಿ ಹಾರಲು ಕಾರಣವಾಯಿತೋ, ಆ ನಾಯಿಗಳ ರಕ್ತವನ್ನು ಅವರಿಗೇ ಕುಡಿಸುವುದೊಂದೇ ನನಗಿಂದು ಉಳಿದಿರು

ಕರ್ತವ್ಯ. ಇಷ್ಟುದಿನ ಅದನ್ನು ಮರೆತು ಬದುಕಿದ್ದೆ. ಈಗ ನಾನೆಂತಹ ತಪ್ಪನ್ನು ಮಾಡಿದ್ದೆ ಎಂಬುದು ಅರಿವಾಗಿದೆ. ನನ್ನ ತಲೆ ಹೋದರೂ ಸರಿಯೇ—ಈ ಕೆಲಸವನ್ನು ಮಾಡಿ ಮುಗಿಸುತ್ತೇನೆ. ಸಿಂಹಾಸನಾರೋಹಣ ಅದಕ್ಕೆ ಮೊದಲ ಹೆಜ್ಜೆ. ಪರಶುರಾಮಪ್ಪನವರು ಪ್ರಧಾನಿಗಳಾಗುವುದು ಮುದ್ದಣ್ಣನಿಗೆ ನಾನು ಕೊಡುವ ಮೊದಲ ಪೆಟ್ಟು."

—ಪ್ರತೀಕಾರತೃಷೆಯ ಕಾವಿನಲ್ಲಿ ಕುದಿದು ಕರಾಳನಾಗಿ ಹೇಳಿದ ಲಿಂಗಣ್ಣನಾಯಕ.

ಇದಕ್ಕೆ ನಿಮಗೆ ನಮ್ಮ ಆಶೀರ್ವಾದ ಬೇಕಲ್ಲವೇ?"

—ಶುಷ್ಕವಾದ ಸ್ವರದಲ್ಲಿ ಕೇಳಿದರು ಗುರುಗಳು.

ಅಹುದು—ನನ್ನ ಹಗೆ ತೀರಿಸಲು ನಿಮ್ಮ ಹರಕೆ ಬೇಕು."

"ಎಂಥ ಬಯಕೆ ನಿಮ್ಮದು ಲಿಂಗಣ್ಣನಾಯಕರೇ! ನಾವು ಇದಕ್ಕೆ ಒಪ್ಪುತ್ತೇವೆಂದು ಬಗೆದಿರಾ ನೀವು?"

"ಅಂದರೆ—ನಮಗೆ ನಿಮ್ಮ ಹರಕೆಯ ಬೆಂಬಲವಿಲ್ಲವೇ?"

—ಗುರುಗಳ ಅನಿರೀಕ್ಷಿತವಾದ ಮಾತನ್ನು ಕೇಳಿ ದಿಗ್ಭ್ರಾಂತನಾಗಿ ಕೇಳಿದ ಲಿಂಗಣ್ಣನಾಯಕ.

"ನಿಮಗೆ ನಮ್ಮ ಹರಕೆ ಇದೆ, ಲಿಂಗಣ್ಣನಾಯಕರೇ. ಈ ರಾಜ್ಯಕ್ಕೆ ನೀವು ನ್ಯಾಯವಾದ ಉತ್ತರಾಧಿಕಾರಿಗಳು. ಎಂತಲೇ ಇದು ನಿಮ್ಮದಾಗಬೇಕು. ಇದು ನಿಮ್ಮದೇ ಆಗಬೇಕು ಎನ್ನುವವರದು ಧರ್ಮಪಕ್ಷ. ಅದಕ್ಕೆ ನನ್ನದೇನು, ಶಿವನದೇ ಬೆಂಬಲವಿದೆ. ಆದರೆ ನೋಡು, ರಕ್ತಪಾತ, ಹಿಂಸೆ, ದ್ವೇಷಗಳಿಗೆ ನಮ್ಮ ಹರಕೆಯಿಲ್ಲ. ಅವೆಲ್ಲವೂ ನಮ್ಮ ಶತ್ರು ಪಕ್ಷ. ನೀವು ಸಿಂಹಾಸನಾಧಿಕಾರಿಗಳಾಗಬೇಕೆಂದು ನಾವು ಬಯಸುವುದು, ಈ ಕಾರ್ಯಸಾಧನೆಗಾಗಿ ಅಲ್ಲ."

—ನಿರ್ದಾಕ್ಷಿಣ್ಯವಾಗಿ ಹೇಳಿದರು ಸ್ವಾಮಿಗಳು.

ಮತ್ತಾವುದಕ್ಕಾಗಿ?"

"ಸಿಂಹಾಸನಕ್ಕೆ ನ್ಯಾಯವಾದ ಅಧಿಕಾರಿಗಳಾದ ನೀವು, ಸಿಂಹಾಸನವನ್ನೇರಿ, ಶಾಂತಿ, ದಯೆ, ಸ್ನೇಹ ಪ್ರೇಮಗಳಿಂದ ಪ್ರಜೆಗಳ ಪರಿಪಾಲನೆ ಮಾಡಿ, ಈ ಸಿಂಹಾಸನಕ್ಕೆ ತಗಲಿರುವ ರಕ್ತ ಕಲಂಕವನ್ನು ತೊಡೆಯ

ಬೇಕೆಂದು. ಸಿಂಹಾಸನವೆಂದರೆ ಏನೆಂದುಕೊಂಡಿರಿ ಲಿಂಗಣ್ಣನಾಯಕರೇ– ಅದು ನಿಮ್ಮ ಹಗೆತನದ ಮಲ್ಲಯುದ್ಧದ ಕಳವೇ? ರಾಜಮುಕುಟ, ನಿಮ್ಮ ಇದಿರಾಳಿಯ ಮೇಲೆ ಬಿದ್ದು, ಅವನನ್ನು ತೀರಿಸುವ ಬೇಟೆಯನಾಯಿಯೇ? ಹಾಗೆಂದು ನೀವು ಇದನ್ನು ಬಳಸಿದರೆ, ನಿಮ್ಮ ಅಧಿಕಾರವನ್ನು ಸದುಪ ಯೋಗಪಡಿಸಿದಂತಾಗುವುದಿಲ್ಲ. ದುರುಪಯೋಗಪಡಿಸಿದಂತಾಗುತ್ತದೆ. ಜನ ಇಂದು ನೀವು ಸಿಂಹಾಸನಕ್ಕೆ ಬರಬೇಕೆಂದು ಬಯಸಿದ್ದಾರೆ. ಅದಕ್ಕೆ ನೀವು ನೀಡುವ ಪ್ರತಿಫಲ ಇದಲ್ಲ. ನಿಮ್ಮ ದಾರಿಯಲ್ಲೇ ನೀವು ನಡೆದರೆ ಏನಾಗುತ್ತದೆ ಬಲ್ಲಿರಾ?"

—ಮಾತನ್ನು ಚಾಟಿಯ ಏಟಿನಂತೆ ಜಡಿದು ಕೇಳಿದರು ಗುರುಗಳು. ಅವರ ಮಾತಿನ ಪೆಟ್ಟಿನಿಂದ ಲಿಂಗಣ್ಣನಾಯಕ ಮೆತ್ತಗಾಗಿ ಕೇಳಿದ:

"ಏನಾಗುತ್ತದೆ?"

"ದುರ್ಗದ ರಾಜಕಾರಣದಲ್ಲಿ, ನಾವು ತಿಳಿದಂತೆ ಇಮ್ಮಡಿ ಮದಕರಿ ನಾಯಕರ ಕಾಲದಿಂದಲೂ ವಿಷಚಕ್ರವೊಂದು ಸುತ್ತುತ್ತಿದೆ. ನೀವೂ ಅದನ್ನೇ ಮುಂದಕ್ಕೆ ಉರುಳಿಸಿದಂತಾಗುತ್ತದೆ."

"ಅಂದರೆ........?"

"ಮದಕರಿನಾಯಕರ ಕಾಲದಲ್ಲಿ ಅನ್ಯಾಯವಾಯಿತು—ಓಬಣ್ಣ ನಾಯಕರ ಕೊಲೆ ಆ ಅನ್ಯಾಯದ ಫಲ. ಆ ವಿಷಚಕ್ರ ಅಲ್ಲಿಗೇ ಮುಗಿ ಯಲಿ. ಹಾಗಲ್ಲದೆ ನೀವು ಓಬಣ್ಣ ನಾಯಕರ ಕೊಲೆಯಿಂದ ಹೊತ್ತಿದ ಬೆಂಕಿಯನ್ನು ದಳವಾಯಿಗಳ ರಕ್ತ ಸುರಿದು ಆರಿಸಬೇಕೆಂದು ಬಯಸಿದರೆ, ಹಾಗಾಗುವುದೆಂದು ನಿರೀಕ್ಷಿಸಿದ್ದರೆ–ನಾವು ಹೇಳುತ್ತೇವೆ, ಕೇಳಿ, ಹಾಗಾಗು ವುದಿಲ್ಲ. ರಕ್ತದ ಬೆಂಕಿ ರಕ್ತದ ನೀರಿನಿಂದ ಆರುವುದಿಲ್ಲ. ದಳವಾಯಿಗಳ ಕೊಲೆ, ನಾಳೆ ನಿಮ್ಮ ತಲೆಯ ಬೇಟೆಯಾಡಬಹುದು, ಭರಮಣ್ಣನವರ ಮನೆಯನ್ನು ಮತ್ತೊಮ್ಮೆ ಆ ಮಾರಿ ಇಣುಕಿ ನೋಡಬಹುದು. ಅಲ್ಲದೆ– ಇದು ನಿಮ್ಮ, ದಳವಾಯಿಗಳ ಪ್ರಶ್ನೆಯೇ ಅಲ್ಲ. ನಿಮ್ಮ ನಿಮ್ಮ ಹಗೆತನ ದಲ್ಲಿ ಕೋಣನ ಹೋರಾಟ ಗಿಡುವಿಗೆ ಮೃತ್ಯುವಾಗುವಂತೆ, ಗಂಡಹೆಂಡಿರ ಜಗಳದಲ್ಲಿ ಕೂಸು ಬಡವಾಗುವಂತೆ ನಿರಪರಾಧಿಗಳಾದ ಪ್ರಜೆಗಳ ಪ್ರಾಣಕ್ಕೆ ಭೀತಿ ಮುತ್ತುತ್ತದೆ. ಮೊನ್ನೆ ನಡೆದ ಗದ್ದಲದಲ್ಲೇ ಈ ನೆಲ

ನಿರಪರಾಧಿಗಳ ರಕ್ತದಿಂದ ದೂಷಿತವಾಗಿದೆ. ನೀವು ಕಾಣಿರಿ, ಲಿಂಗಣ್ಣ ನಾಯಕರೇ, ಆದರೆ ಒಂದು ಹನಿ ನಿರಪರಾಧಿಗಳ ರಕ್ತ ಈ ದುರ್ಗದ ಪಾಲಿಗೆ ಕಾಳ್ಗಿಚ್ಚಾಗಬಹುದು. ಆದ್ದರಿಂದ, ಇಂಥ ಮಾರಿ ಬಯಕೆಯನ್ನು ಬಿಡಿ. ಪ್ರಜೆಗಳು ನೀವು ದೊರೆಯಾಗಬೇಕೆಂದು ಬಯಸುವುದು, ಈ ವಿಷದ ಲಡ್ಡುಗೆಯನ್ನು ತಿನಿಸುವುದಕ್ಕಲ್ಲ; ಅವರಿಗೆ ಶಾಂತಿ, ಸುಭದ್ರತೆ, ಸುವ್ಯವಸ್ಥೆಗಳ ವರವನ್ನು ಕರುಣಿಸಲು. ಅದನ್ನು ನೆನಪಿನಲ್ಲಿಟ್ಟು ನಡೆಯಿರಿ. ಜನ ಪ್ರೀತಿಯಿಂದ ನಿಮ್ಮ ನೆತ್ತಿಯ ಮೇಲೆರೆಯುವ ಅಭಿಷೇಕ ಜಲದಲ್ಲಿ ಈ ದ್ವೇಶಾಗ್ನಿ ಶಾಂತವಾಗಲಿ."

—ಕಂಚಿನ ಗಂಟೆಯ ನಾದದಂತೆ ನುಡಿಯುವ ಖಚಿತ ಸ್ವರದಲ್ಲಿ ಹೇಳಿದರು ಗುರುಗಳು. ಅವರು ಹೇಳಿದ ಮಾತನ್ನು ತಲೆತಗ್ಗಿಸಿ ಕೇಳಿದ ಲಿಂಗಣ್ಣನಾಯಕ. 'ರಕ್ತದ ಬೆಂಕಿ ರಕ್ತದ ನೀರಿನಿಂದ ಆರುವುದಿಲ್ಲ' ಎಂದ ಅವರ ಮಾತನ್ನು ಕೇಳಿದಾಗ, ಹಲವರ್ಷಗಳ ಹಿಂದೆ, ಒಬವ್ವ ನಾಗತಿ ಅವನಿಗೆ ಹೇಳಿದ ಮಾತು ನೆನಪಾಯಿತು. ದೂರದ ಘಂಟಾ ನಾದ ಗಾಳಿಯಲ್ಲಿ ಕ್ಷೀಣಶಬ್ದದ ಅಲೆಗಳಾಗಿ ತೇಲಿಬರುವಂತೆ ಕೇಳಿ ಬಂದಿತು.

"ಈ ಹಿಂಸೆ ರಕ್ತಬೀಜಾಸುರನ ರಕ್ತವಿದ್ದಂತೆ ಲಿಂಗಣ್ಣ, ಇದರ ಒಂದು ಹನಿ ಬಿದ್ದಲ್ಲಿ ಕೋಟಿ ಅಸುರರು ಅವತಾರ ಮಾಡುತ್ತಾರೆ....ಒಂದು ಜೀವದ ಹಿಂಸೆ, ಹತ್ತು ಜೀವದ ಬಲಿಬೇಡಿ ಪಿಶಾಚಿಯಂತೆ ಅಲೆಯುತ್ತದೆ.....ನಿನ್ನ ದಮ್ಮಯ್ಯ....ಈ ಹಿಂಸೆಗೆ ಮನಸ್ಸುಕೊಡಬೇಡ."

ಆ ಮಾತು ನೆನಪಿಗೆ ಬಂದು, ಲಿಂಗಣ್ಣನಾಯಕರ ಬಿರುಸಾದ ಹೃದಯ ಮೃದುವಾಗುತ್ತಿರುವಾಗಲೇ, ಆ ಮಾತು ಹೇಳಿದ ತಾಯಿಜೀವ ನೀರಿನ ಪಾಲಾದ ನೆನಪು ಅವನ ಮಿದುಳಿನಲ್ಲಿ ಸಿಡಿದು, ಅವನೆದೆಯಲ್ಲಿ ಭಯಂಕರ ನಿರಾಶೆಯ ಹಾಲಾಹಲ ಕೋಡಿ ಬಿದ್ದು ಹರಿಯಿತು. ಆ ನೆನಪೇ ಅವನ ಕಣ್ಣುಗಳಲ್ಲಿ ಹೊಳೆದಂತೆ, ಅವನ ಕಣ್ಣುಗಳು ಉಗ್ರವಾದವು. ಮುಖವೂ ಕರ್ಕಶವಾಯಿತು, ಆ ನಿರಾಶೆ, ನೋವುಗಳ ನಂಜು ತುಂಬಿ, ಎದೆ ಇರಿವ ಧ್ವನಿಯಲ್ಲಿ ಹೇಳಿದ—

"ಗುರುಗಳು ನನ್ನನ್ನು ಕ್ಷಮಿಸಬೇಕು. ನಿಮ್ಮ ಮಾತನ್ನು ನಾನು

ಸುಳ್ಳು ಎನ್ನುವುದಿಲ್ಲ. ಆದರೆ ಅದು ಈ ಕಾಲದ ಮಾತಲ್ಲ. ಕೃತಯುಗದ ಮಾತು. ಒಂದು ಕಾಲಕ್ಕೆ ನನ್ನ ತಾಯಿದೇವಿಯೂ ಇದೇ ಮಾತು ಹೇಳಿದ್ದಳು. ಆಗ ನಾನೂ ಅದನ್ನು ನಂಬಿದ್ದೆ. ಆದರೆ ಆ ಮಾತಿನ ಮಕರಂದವನ್ನು ನನ್ನೆದೆಗೆ ಎರೆದ ಜೀವಪುಷ್ಪ, ಈ ಹಿಂಸೆಯ ಅಗ್ನಿ ಕುಂಡದಲ್ಲಿ ಸುಟ್ಟು ಕರಿಕಾಗಿ ಹೋದಮೇಲೆ ನನಗೆ ಅಂಥ ಮಾತಿನ ಲ್ಲೆಲ್ಲಾ ನಂಬಿಕೆ ತಪ್ಪಿಹೋಗಿದೆ. ಅಂದೇ ನನಗೆ ಇಷ್ಟು ಬುದ್ಧಿ ಇದ್ದಿದ್ದರೆ ಆ ತಾಯನ್ನು ಉಳಿಸಿಕೊಂಡು, ಈ ಹಿಂಸೆಯ ಮೃಗವನ್ನು ಬೇಟೆಯಾಡಿ ಮುಗಿಸಿ ನಿಶ್ಚಿಂತನಾಗಿರಬಹುದಾಗಿತ್ತು. ಆಗ ಮೈಮರೆತು ಮೂರ್ಖ ನಾದೆ. ಈಗಲೂ ಸುಮ್ಮನಿರು ಎನ್ನುತ್ತೀರಾ? ಆ ಪಿಶಾಚಿಯನ್ನು ಜೀವಂತನಾಗಿ ಉಳಿಸಿ, ಈ ನೆಲವನ್ನಾಳಲೇ?"

ಉದ್ವೇಗ, ಆರ್ತತೆ, ನಿರಾಶೆ, ವ್ಯಥೆ, ಕ್ರೋಧ, ಪಶ್ಚಾತ್ತಾಪಗಳು ನಾನು ಮುಂದೆ ತಾನು ಮುಂದೆ ಎಂದು ಅವನ ಧ್ವನಿಯಲ್ಲಿ ನುಗ್ಗಿ ಹೊಯ್ದಾಡಿ, ಸುತ್ತ ಕುಳಿತವರ ಎದೆಯಲ್ಲೂ ಹಳೆಯ ನೆನಪಿನ ಉರಿ ಯನ್ನು ಕೆರಳಿಸಿತು. ಯಾರಿಗೂ ಅವನ ಮಾತಿಗೆ ಕೂಡಲೇ ಉತ್ತರ ಕೊಡಲು ತೋಚಲಿಲ್ಲ. ಎಲ್ಲರ ನಾಲಿಗೆಗೂ ಮೌನದ ಕಡಿವಾಣ ಬಿಗಿ ದಿತ್ತು. ಭೂತ ದರ್ಶನವಾದವರಂತೆ ನುಡಿ ಸತ್ತು ಕುಳಿತಿದ್ದರು. ಅಷ್ಟು ಹೊತ್ತು ಕಳೆದಮೇಲೆ, ಹಲಬಗೆಯ ಭಾವನೆಗಳಿಂದ ವಿಕಾರವಾದ ಲಿಂಗಣ್ಣನಾಯಕನ ಮೊಗವನ್ನೇ, ಸೂಕ್ಷ್ಮವಾಗಿ ನೋಡುತ್ತಿದ್ದ ಗುರು ಗಳೇ, ನಿರ್ವಿಕಾರವಾದ ಧ್ವನಿಯಲ್ಲಿ ಕೇಳಿದರು—

"ಹಾಗಾದರೆ ಇಷ್ಟುದಿನ, ಒಂದು ದಿನವಲ್ಲ, ಎರಡು ದಿನವಲ್ಲ, ಹನ್ನೆ ರಡು ವರ್ಷಗಳ ದೀರ್ಘಕಾಲ, ನಿಮ್ಮ ಪ್ರತೀಕಾರ ತೃಷೆಯ ಮೃಗವನ್ನು ಕಟ್ಟಿಹಾಕಿ ಸುಮ್ಮನೆ ಕುಳಿತಿದ್ದಿರೇಕೆ?"

"ಇಷ್ಟು ದಿನ.........ಇಷ್ಟು ದಿನ........ನನಗೇನೋ ದುಃಖದ ಗರ ಬಡಿದಿತ್ತು."

"ಈಗ?"

"ಈಗ—ನನ್ನ ಕಣ್ಣು ತೆರೆದಿದೆ."

"ಇಲ್ಲ, ಈಗಲೂ ನಿಮ್ಮ ಕಣ್ಣು ತೆರೆದಿಲ್ಲ. ಇಷ್ಟು ದಿನ ನಿಮಗೆ

ದುಃಖದ ಗರಬಡಿದಿತ್ತು, ಈಗ ಕ್ರೋಧದ ಭೂತ ಹಿಡಿದಿದೆ. ಆ ದುಃಖ, ಈ ಕ್ರೋಧ ಎರಡೂ ನಿಮ್ಮನ್ನು ತಪ್ಪುದಾರಿಯಲ್ಲಿ ನಡೆಸುವ ಮಾಯೆಗಳು. ಅವಕ್ಕೆ ಸೋಲಬೇಡಿ, ಲಿಂಗಣ್ಣನಾಯಕರೇ. ವಿವೇಚನೆ ವ್ಯಾಮೋಹದ ಆಳಾಗದಿರಲಿ. ಕರ್ತವ್ಯವನ್ನು ಕ್ರೋಧದ ಕುರುಡುಸಾರಥಿಗೆ ಒಪ್ಪಿಸಬೇಡಿ. ಅದರಿಂದ ನಿಮಗೆ ಒಳಿತಾಗದು; ಮೃತರ ಪವಿತ್ರ ಆತ್ಮಕ್ಕೆ ಶಾಂತಿ ದೊರೆಯದು."

"ಏನಾದರಾಗಲಿ, ನನಗೆ ರಾಜ್ಯ ಸಿಕ್ಕಿದ್ದೇ ಸಾಕು ಎಂದು ಸುಖದಿಂದ ಉಂಡುಟ್ಟು, ಈ ನರಕದ ಪಶುವಿನೊಂದಿಗೆ ನಲಿದು ರಾಜ್ಯವಾಳಿದರೆ, ಮೃತರ ಆತ್ಮಗಳಿಗೆ ಶಾಂತಿ ದೊರೆಯುತ್ತದೆಯೇ? ಕೊಲೆ, ಆತ್ಮಹತ್ಯೆಗಳ ಅಪಮೃತ್ಯುವಿಗೊಳಗಾಗಿ, ಅಲೆಯುತ್ತಿರುವ ಜೀವಗಳಿಗೆ ತೃಪ್ತಿಯಾದೀತೇ?"

"ಸತ್ತವರು ಭೂತಗಳಾಗಿ ಅಲೆಯುತ್ತಿದಾರೋ ಇಲ್ಲವೋ ಅದನ್ನು ಬಲ್ಲವರು ಯಾರೂ ಇಲ್ಲ. ಆದರೆ ಅವರಿಗೆ ರಕ್ತತೃಷೆಯನ್ನು ಆರೋಪಿಸಿ ನೀವಂತೂ ಅವರನ್ನು ಭೂತಗಳನ್ನಾಗಿ ಮಾಡುತ್ತಿದ್ದೀರ. ಇದು ಅವರನ್ನು ಗೌರವಿಸುವ ದಾರಿಯಲ್ಲ. ಅಲ್ಲದೆ ಆಗಬೇಕಾದ ಕೆಲಸವನ್ನು ನಡೆಸುವ ಜಾಣತನದ ದಾರಿಯೂ ಅಲ್ಲ. ನಾವು ಕೆರಳಿರುವುದನ್ನೆಲ್ಲವನ್ನೂ ಶಾಂತಗೊಳಿಸಿ ನಡೆಯುಬೇಕಾದ ಕಾಲದಲ್ಲಿ, ನೀವು ಹೇಗೋ ಶಾಂತವಾಗಿರುವುದನ್ನೂ ಕೆರಳಿಸಿ, ಎದುರಾಳಿಯಾಗಿ ಮಾಡಿಕೊಳ್ಳುವ ಬುದ್ಧಿಯನ್ನು ಬಿಡಿ. ಅದರಿಂದ ನಿಮಗೆ ಒಳಿತಾಗುವುದಿಲ್ಲಷ್ಟೇ ಅಲ್ಲ, ನಿಮ್ಮ ಪರವಾಗಿ ನಿಸ್ಪೃಹತೆಯಿಂದ ಕೆಲಸ ಮಾಡುತ್ತಿರುವವರಿಗೂ ಅನಗತ್ಯವಾಗಿ ಅಪಖ್ಯಾತಿ ಅಂಟಿಕೊಳ್ಳುತ್ತದೆ. ಅಲ್ಲವೇ ಪರಶುರಾಮಪ್ಪನವರೇ?"

—ಎಂದು ಗುರುಗಳು, ಅದುವರೆಗೂ ಅವರಿಬ್ಬರ ನಡುವಿನ ಮಾತುಕಥೆಯನ್ನು, ಯಾವ ಮಾತೂ ಆಡದೆ ತಲೆತಗ್ಗಿಸಿ ಕೇಳುತ್ತಾ ಕುಳಿತಿದ್ದ ಪರಶುರಾಮಪ್ಪನತ್ತ ನೋಡಿ ಹೇಳಿದರು.

"ಗುರುಗಳ ಮಾತು ನಿಜ. ಗತಿಸಿದ ತಂದೆಯವರ ಪಾದದಾಣೆ ಮಾಡಿ ಹೇಳುತ್ತೇನೆ—ನನಗೆ ಪ್ರಧಾನಿಪಟ್ಟದ ಬಯಕೆ ಎಳ್ಳುಕಾಳು

ಮುಳ್ಳು ಮೊನೆಯಷ್ಟೂ ಇಲ್ಲ. ನನಗೆ ಬೇಕಾಗಿರುವುದೊಂದೇ—ನಾಯಕರ ವಂಶದವರಿಟ್ಟ ಉಪ್ಪಿನಿಂದ ನಮ್ಮ ಮನೆತನ ಬೆಳೆದಿದೆ. ನಮಗೆ ಉಪ್ಪಿಟ್ಟ ವಂಶ ಅಲ್ಲಿಗೇ ಮೊಟಕಾಗಿ ಯಾರೋ ಈ ಸಿಂಹಾಸನದ ಮೇಲೆ ಕೂಡಬಾರದು. ಅವರ ನ್ಯಾಯವಾದ ಸಂತಾನವೇ ಈ ಸಿಂಹಾಸನದ ಮೇಲೆ ಕುಳಿತು, ಆಚಂದ್ರಾರ್ಕಸ್ಥಾಯಿಯಾದ ಕೀರ್ತಿಯಿಂದ ಮೆರೆಯಬೇಕು. ಅಷ್ಟೇ ನನಗಿರುವ ಬಯಕೆ. ನಾಯಕರು ಇಂದು ನನ್ನಲ್ಲಿಟ್ಟಿರುವ ವಿಶ್ವಾಸವನ್ನೇ ಕಡೆಯವರೆಗೂ ನಡೆಸಿಕೊಂಡು ಬಂದರೆ, ನನಗೆ ಕೋಟಿ ಪ್ರಧಾನಿ ಪದವಿ ಕೊಟ್ಟಂತಾಗುತ್ತದೆ. ದಳವಾಯಿ ಮುದ್ದಣ್ಣನವರಿಗೆ ಹೀಗೇ ಮಾಡಿ ಎಂದು ಹೇಳಲು ನಾನು ಶಕ್ತನಲ್ಲ, ಆದರೆ ನಾಯಕರಲ್ಲಿ ಬೇಡಿಕೊಳ್ಳುವ ಶಕ್ತಿ ಇದೆ. ಎಂತಲೇ ಅವರನ್ನೇ ಬೇಡಿಕೊಳ್ಳುತ್ತೇನೆ—ಈ ಸಣ್ಣ ಕೆಲಸಕ್ಕಾಗಿ ಅವರು ನಾಯಕರಾಗುವುದು ತಡವಾಗದಿರಲಿ. ಅದರಿಂದ ಬಹಳ ಅನಾಹುತಕ್ಕೆ ಕಾರಣವಾಗುತ್ತದೆ. ಹಾಗಾಗದೆ, ನಾಯಕರು ಹೇಗೋ ಒಪ್ಪಿ ಪಟ್ಟಕ್ಕೆ ಬಂದರೆ ನನಗೊಬ್ಬನಿಗೇ ಅಲ್ಲ—ದೇಶದ ಲಕ್ಷಾಂತರ ಪ್ರಜೆಗಳಿಗೆ ಸಂತೋಷವಾಗುತ್ತದೆ. ನಮ್ಮ ಬೇಡಿಕೆಯನ್ನು ನಾಯಕರು ಮನ್ನಿಸಬೇಕು."

ಪರಶುರಾಮಪ್ಪನ ಕಳಕಳಿಯ ಬೇಡಿಕೆಯನ್ನು ಕೇಳಿ ಲಿಂಗಣ್ಣ ನಾಯಕನಿಗೆ ಹಾಗಾಗುವುದಿಲ್ಲ ಎನ್ನಲು ಬಾಯಿಬರಲಿಲ್ಲ. ಆದರೆ ಆ ಮಾತುಗಳಾವುದರಿಂದಲೂ ಅವನಲ್ಲಿ ಉರಿದೆದ್ದ ಕ್ರೋಧ ಶಾಂತವಾಗಿರಲಿಲ್ಲ. ಆ ಕ್ರೋಧ ಈ ಬೇಡಿಕೆಗಳ ನಡುವೆ ಬಾಯಿಕಟ್ಟಿಹೋಗಿ ಯಾವ ಮಾತಾಡಲೂ ತೋಚದೆ, ಸುಮ್ಮನೆ ಕುಳಿತಿದ್ದ.

"ಏಕೆ ನಾಯಕರು ಸುಮ್ಮನೆ ಕುಳಿತುಬಿಟ್ಟಿರಲ್ಲ, ಪರಶುರಾಮಪ್ಪನವರ ಬೇಡಿಕೆಗೆ ಈ ಮೌನವೇ ನಿಮ್ಮ ಉತ್ತರವೇ ?"

—ಗುರುಗಳೇ ಕೇಳಿದರು.

"ನನಗೆ ಏನು ಹೇಳಲೂ ತೋಚುತ್ತಿಲ್ಲ; ಯಾವ ದಾರಿಯೂ ಕಾಣುತ್ತಿಲ್ಲ. ನಾನು ಬೆಳಕು ಎಂದು ತಿಳಿದುಕೊಂಡದನ್ನು ನೀವು ಅದು ಬೆಳಕಲ್ಲ, ಕತ್ತಲೆ ಎನ್ನುತ್ತಿದ್ದೀರ. ಆಯಿತು—ನನಗೇನೂ ತಿಳಿಯುವುದಿಲ್ಲ. ನೀವು ಹೇಗೆ ಹೇಳುತ್ತೀರೋ ಹಾಗೆ ಮಾಡುತ್ತೇನೆ."

"ಅಂದರೆ—ನಾವು ಬೆಳಕು ಎಂದುದು ಬೆಳಕೇ ಎಂದು ನಿಮಗೆ ನಂಬಿಕೆಯಿಲ್ಲವೇ?"

—ಸ್ವಾಮಿಗಳು ಒತ್ತಿ ಒತ್ತಿ ಕೇಳಿದರು.

"ನನ್ನ ಬಾಳಿನಲ್ಲಿ ಇಂದಾವ ನಂಬಿಕೆಯೂ ಇಲ್ಲ. ನಾನು ನಂಬಿದುದೆಲ್ಲಾ ಎಂದೋ ಮುರಿದು ಮಣ್ಣುಗೂಡಿ ಹೋದವು. ಆದರೆ ನೀವು ನನ್ನ, ನನಗಿಂತ ಹೆಚ್ಚಾಗಿ ದುರ್ಗದ ಹಿತೈಷಿಗಳೆಂದು ಬಲ್ಲೆ. ಹೇಗೆ ಬೇಕೋ ಹಾಗೆ ಮಾಡಿ."

—ಎಂದ ಲಿಂಗಣ್ಣನಾಯಕ ಸೋಲುತ್ತಾ.

"ನಾವೇನೋ ಹೇಳಬಲ್ಲೆವು—ನೀವು?"

"ನಾನು–ನೀವು ನಡೆಸಿದತ್ತ. ನೀವು ಹೇಳಿದಂತೆ ಮಾಡಲು ಸಿದ್ಧವಾಗಿದ್ದೇನೆ. ನೀವೇ ದಳವಾಯಿಯೊಂದಿಗೆ ಮಾತನಾಡಿ ಹೇಳಿ ಕಳುಹಿಸಿ. ಆದಷ್ಟೂ ಅವನ ಮುಖ ನೋಡುವುದು ನನಗೆ ಬೇಕಿಲ್ಲ. ಅಪ್ಪಣೆಯಾದರೆ ಬರುತ್ತೇನೆ."

—ಎಂದು ಲಿಂಗಣ್ಣನಾಯಕ ಗುರುಗಳಿಗೆ ಅಡ್ಡ ಬಿದ್ದು, ಅವರಿತ್ತ ಪ್ರಸಾದವನ್ನು ಸ್ವೀಕರಿಸಿ, ಅಲ್ಲಿರಲಾರದವನಂತೆ ಆಲ್ಲಿಂದ ಎದ್ದು ಹೋದ.

ಗುರುಗಳು ಹೋಗುತ್ತಿರುವ ಲಿಂಗಣ್ಣನಾಯಕನನ್ನೇ ದಿಟ್ಟಿಸಿ ನೋಡುತ್ತಿದ್ದರು. ಅವನು ಕಣ್ಣುಮರೆಯಾದ ಮೇಲೆ, ದೊಡ್ಡ ನಿಟ್ಟುಸಿರೊಂದು ಹೊರಬಿದ್ದಿತು. ಯಾವುದೋ ಚಿಂತೆ, ಏನೋ ಭೀತಿ, ಎಂಥದೋ ಕರುಣೆಯ ಮಿಶ್ರಭಾವನೆ ಅವರ ಮುಖದಲ್ಲಿ ಮೂಡಿತು.

"ಏನಾಗಬೇಕೆಂದು ಶಿವನಿಚ್ಛೆಯಿದೆಯೋ ಅದು ಹಾಗೇ ಆಗುತ್ತದೆ. ಬೇಡವೆನ್ನಲು, ಅಡ್ಡಬರಲು ನಾವು ಯಾವ ಲೆಕ್ಕದವರು."

—ಎಂದರು ಗುರುಗಳು ಶುಷ್ಕವಾದ ಧ್ವನಿಯಲ್ಲಿ.

ಅವರ ಮುಖ ಲಕ್ಷಣವನ್ನು ನೋಡಿ, ಅವರ ಮಾತನ್ನು ಕೇಳಿ, ಅಲ್ಲಿಯೇ ಕುಳಿತಿದ್ದ ಪರಶುರಾಮಪ್ಪ ಭರಮಣ್ಣನವರಿಗೆ ಅಚ್ಚರಿಯೂ ಆಯಿತು; ಏಕೋ, ಅವರ ಹೃದಯಗಳಲ್ಲಿ ಭೀತಿಯೂ ಕವಿದಿತು.

## ೧೪

"ಬರಬೇಕು, ಬರಬೇಕು........ಬಹಳ ಅಪರೂಪವಾಗಿ ಬಡವರ ಮನೆಯ ಬಾಗಿಲಿನಲ್ಲೇ ಭಾಗೀರಥೀ ದೇವಿ ಪ್ರತ್ಯಕ್ಷಳಾದಂತಾಯಿತು ತಾವು ಬಂದದ್ದು. ಕತ್ತಲ ಹೊತ್ತಿನಲ್ಲೇ ಬಂದುಬಿಟ್ಟರಲ್ಲಾ."

—ಎಂದು ವಿಶೇಷ ಉತ್ಸಾಹವನ್ನು ತೋರಿಸುತ್ತಾ, ತಾನೇ ಬಾಗಿಲ ವರೆಗೂ ಹೋಗಿ ಇರುಳು ಕವಿದ ಮೇಲೆ ಮನೆಬಾಗಿಲಿಗೆ ಬಂದ ಪರಶು ರಾಮುಪ್ಪನನ್ನು ಇದಿರುಗೊಂಡು, ಒಳಗೆ ಕರೆತಂದು ಆಸನದಲ್ಲಿ ಕುಳ್ಳಿರಿ ಸುತ್ತಾ ಹೇಳಿದ ಮುದ್ದಣ್ಣ.

ಆದರೆ ಪರಶುರಾಮುಪ್ಪನಿಗೆ ದಳವಾಯಿಯ ಸ್ವಾಗತ, ಉಪಚಾರ ಗಳಿಂದ ಸಂತುಷ್ಟಿಯಾಗದೆ, ಮನದಲ್ಲಿ ಅವನ ಬಗ್ಗೆಯಿದ್ದ ಅಸಹ್ಯ ಮತ್ತಷ್ಟು ಬೆಳೆದಿತು. ಹಿಂದೆ ಆ ಮನೆಯಲ್ಲಿ ನಡೆದ ಕೊಲೆಗೆಲಸವನ್ನು ನೆನೆದು, ಆ ಮನೆಯ ನೆಲದಮೇಲೆ ನಿಲ್ಲಲೂ ಆತನಿಗೆ ಬೆಂಕಿಯನ್ನು ತುಳಿದಂತಾಯಿತು. ಆದರೂ ಮನದಲ್ಲಿ ಮೂಡಿದ ಭಾವನೆಯನ್ನು ವ್ಯಕ್ತಗೊಳಿಸುವ ಸಮಯ ಅದಲ್ಲವಾದ್ದರಿಂದ, ಆ ಭಾವನೆಯನ್ನು ಹಾಗೆಯೇ ಹತ್ತಿಕ್ಕಿ, ಇಲ್ಲದ ಉತ್ಸಾಹ, ವಿನಯವನ್ನು ತಂದುಕೊಂಡು—

"ನಮ್ಮ ಬಗ್ಗೆ ಅದು ಬಹಳ ದೊಡ್ಡಮಾತು. ತಮ್ಮನ್ನು ಕಾಣು ವುದೇ ನಮಗೊಂದು ಭಾಗ್ಯ. ಏನೋ ಕಾರಣ ಒದಗಿ ತಮ್ಮನ್ನು ಕಾಣುವ ಯೋಗ ಬಂದದ್ದು ನಮ್ಮ ಪುಣ್ಯ" ಎಂದ.

"ಹಾಗೆಂದವರುಂಟೆ? ನಿಮ್ಮ ತಂದೆಯವರು ನಮ್ಮೆಲ್ಲರ ಪಾಲಿಗೂ ತಂದೆಗಳಂತಿದ್ದರು ಪರಶುರಾಮುಪ್ಪನವರೇ, ನೀವು ಕಾಣಿರಿ. ಈ ಹಾಳು ರಾಜಕೀಯದಲ್ಲಿ ಪರಸ್ಪರವಾಗಿ ಎಷ್ಟು ಗೌರವ, ಪ್ರೀತಿಗಳಿದ್ದರೂ, ಒಬ್ಬರಿಗೊಬ್ಬರು ವಿರೋಧಿಗಳಾಗಬೇಕಾದ ಪ್ರಸಂಗ ಬರುತ್ತದೆ. ಅದಕ್ಕೇ ನನಗೂ ಒಮ್ಮೊಮ್ಮೆ ಈ ರಾಜಕೀಯವನ್ನೆಲ್ಲಾ ಬಿಟ್ಟು, ಗುರುಗಳ ಹಾಗೇ ನಾನೂ ಸನ್ಯಾಸಿಯಾಗಿ ಹೊರಟುಹೋಗಬೇಕು, ಯಾವ ಲೋಕದ ಉದ್ಧಾರಕ್ಕೆ ಹೀಗೆ ಅವಿಶ್ವಾಸಗಳಿಸುವುದು ಎನಿಸುತ್ತದೆ. ಆದರೆ

ಉಂಡ ಉಪ್ಪಿನ ಋಣ ತೀರಿಸಬೇಕಲ್ಲ. ಅದಕ್ಕೆ ಕಟ್ಟುಬಿದ್ದು ಎಲ್ಲ ವನ್ನೂ ಮರೆತು, ತಲೆಯ ಮೇಲೆ ಬೇಡವಾದ ಭಾರ ಹೊತ್ತು ದಿನ ನೂಕ ಬೇಕಾಗಿದೆ. ಎಂದಿಗೆ ತಪ್ಪುವುದೋ ಈ ಜವಾಬುದಾರಿಯೆಲ್ಲ, ಎಂದು ನಾನೂ ನಾಲ್ಕು ಜನರಂತೆ, ಬೇಕಾದವರೊಂದಿಗೆ ವಿಶ್ವಾಸವಾಗಿ ಮಾತ ನಾಡುತ್ತಾ ಕಾಲ ಹಾಕುವ ದಿನ ಬರುವುದೋ?

—ಎಂದ ಮುದ್ದಣ್ಣ ಹಿಮಾಲಯದ ಭಾರ ಹೊತ್ತು ಬಳಲಿದವ ನಂತೆ ನಿಟ್ಟುಸಿರುಬಿಡುತ್ತಾ. ಅವನ ಮಾತಿನ ಕೃತಕತೆ, ಮಾತುಮಾತಿ ನಲ್ಲೂ ತಾನೇತಾನಾಗಿ ಕಾಣಿಸಿಕೊಂಡು, ಕೇಳುವ ಕಿವಿಯನ್ನಿರಿಯಿತು. 'ಇದೆಲ್ಲಾ ನಿನಗಷ್ಟು ಬೇಡವಾಗಿದ್ದರೆ ಬಿಟ್ಟು ಬಿಡು. ನಿನಗೆ ಬೇಕಾದ ಕಾವಿಯ ಬಟ್ಟೆ ಜೋಳಿಗೆ ನಾನು ಕೊಡುತ್ತೇನೆ' ಎಂದು ಹೇಳಬೇಕು ಎನ್ನುವ ಬಯಕೆ ಪರಶುರಾಮಪ್ಪನ ನಾಲಗೆಯ ತುದಿಯುವರೆಗೂ ಬಂದು ಹಿಂದಿರುಗಿತು. ತಾನೂ ಅವನಷ್ಟೇ ಕೃತಕವಾಗಿ ಮಾತನಾಡುತ್ತ ಹೇಳಿದ ಪರಶುರಾಮಪ್ಪ—

"ಉಂಟೆ—ನಿಮ್ಮಂಥ ಹಿರಿಯರೇ, ಸಮರ್ಥರೇ ಹಾಗೆ ಹೇಳಿದರೆ ನಾಳೆ ದುರ್ಗಕ್ಕೆ ಯಾರು ದಿಕ್ಕು? ನಿಮ್ಮಂಥವರು ನಾಲ್ಕು ಜನ ಇರು ವುದರಿಂದಲೇ ದುರ್ಗ ಸುತ್ತಲೂ ಶತ್ರುಪಾಳಯುವಿದ್ದೂ ಬದುಕಿದೆ."

"ಹಾಗಲ್ಲ ಪರಶುರಾಮಪ್ಪನವರೇ, ನಮ್ಮ ಸೇವೆ ದುರ್ಗಕ್ಕೆ ಸಲ್ಲ ಬೇಕಾದ ಕಾಲ ಒಂದಿತ್ತು. ಆಯಿತು—ಆ ದಿನ ಮುಗಿಯಿತು. ನಾನಿಲ್ಲದೆ ದುರ್ಗ ಬದುಕುವುದಿಲ್ಲ ಎನ್ನುವುದಕ್ಕೆ ನಾನೇನು ಭೂತನಾಥೇಶ್ವರನೇ? ಏನೋ ನಮಗೂ ವಯಸ್ಸಾಯಿತು. ಇನ್ನು ನಿಮ್ಮಂಥ ಚಿಕ್ಕವಯಸ್ಸಿನ ವರು, ರಕ್ತಬಿಸಿಯಾಗಿದ್ದು, ಬುದ್ಧಿ ಚುರುಕಾಗಿರುವವರು ಅಧಿಕಾರ ವಹಿಸಿ ಕೊಂಡರೆ ಒಳಿತು. ನಾವು ಅಧಿಕಾರಿಗಳು ದುರ್ಗಕ್ಕೆ ಕೋಟೆ ಇದ್ದ ಹಾಗೆ. ಹಳೆಯದು ಮುರಿದಾಗ ಅದನ್ನು ಕೆಡವಿ ಹೊಸದನ್ನು ಕಟ್ಟ ಬೇಕು. ಈ ಮಾತನ್ನೇ ಲಿಂಗಣ್ಣನಾಯಕರಿಗೆ ಹೇಳಬೇಕು ಎಂದು ಕೊಂಡಿದ್ದೇವೆ. ಅವರನ್ನು ಕಾಣುವ ಮೊದಲು ನಿಮ್ಮನ್ನೇ ಕಂಡದ್ದು ಒಳ್ಳೆಯದಾಯಿತು. ನಿಮ್ಮ ಸಲಹೆಯನ್ನು ಪಡೆದೇ ಕೆಲಸ ಮಾಡ ಬಹುದು."

"ನಾನು........ತಮಗೆ........ಸಲಹೆಕೊಡುವುದೇ? ಅಷ್ಟು ದೊಡ್ಡ ಮಾತಿಗೆ ನಾನು ಅರ್ಹನಲ್ಲ. ನನಗೆ ಹೇಳಬಹುದಾದ ಮಾತಾಗಿದ್ದರೆ ಹೇಳಿ. ಅದನ್ನು ಕೇಳಿದ ಮೇಲೆ ಏನಾದರೂ ಹೇಳಬಹುದೆಂದು ತೋಚಿದರೆ ಹೇಳುತ್ತೇನೆ."

"ನೋಡಿ ಪರಶುರಾಮಪ್ಪನವರೇ — ನಿಮ್ಮ ತಂದೆಯವರಿಗೂ ನಮಗೂ ಇದ್ದ ವಿಶ್ವಾಸ ಜನಕ್ಕೆ ತಿಳಿಯದು. ಓಬ್ಬಣ್ಣನಾಯಕರ ಕಾಲದಲ್ಲಿ ಎಲ್ಲರ ಕೈಯನ್ನೂ ಮೀರಿ, ಏನೋ ಆಗಬಾರದುದೆಲ್ಲಾ ಆಯಿತು. ಎಲ್ಲಕ್ಕಿಂತ ಹೆಚ್ಚಿನ ನಷ್ಟ—ಭುವನಪ್ಪನವರ ಮರಣ. ಏನು ಮಾಡಿಯೂ ತುಂಬಲಾದ ನಷ್ಟ ಅದು. ಎಷ್ಟು ಜನ್ಮ ಎತ್ತಿದರೂ, ಎಷ್ಟು ಲೋಕ ಹುಡುಕಿದರೂ ಇನ್ನೊಬ್ಬರು ಅಂತಹ ನಿಷ್ಠರು ಸಿಗುವುದಿಲ್ಲ. ಅವರ ಸಾವನ್ನು ನೆನೆಸಿಕೊಂಡಾಗ ನನಗಾಗುವ ವ್ಯಥೆಯನ್ನು ಶಿವನೊಬ್ಬನೇ ಬಲ್ಲ. ಆ ನೋವೇ ಸಾಲದು ಎಂಬಂತೆ, ಜನ ಅವರ ಸಾವಿಗೂ ನಾನೇ ಕಾರಣ ಎಂಬಂತೆ ಮಾತನಾಡುತ್ತಾರೆ. ಅಂಥ ಮಾತುಕೇಳಿ ನಮ್ಮದು ಇದ್ದ ಬದುಕಲ್ಲ, ಸತ್ತ ಸಾವಲ್ಲ ಎನಿಸಿದೆ. ಆದರೇನು ಮಾಡುವುದು— ಉಪ್ಪಿನ ಋಣಕ್ಕೆ ಕಟ್ಟುಬಿದ್ದು ಬಾಳು ಹೊರೆಯಬೇಕಾಗಿತ್ತು ಇಷ್ಟು ದಿನ. ಈಗ ಅದಕ್ಕೇ ಒಂದು ಯೋಚನೆ ಮಾಡಿದ್ದೇನೆ."

—ಅಪಾರ ದುಃಖದಿಂದ ವ್ಯಥಿತಾಂತಃಕರಣನಾದವನ ಧ್ವನಿಯಲ್ಲಿ ಹೇಳಿದ ಮುದ್ದಣ್ಣ. ಅವನ ಮಾತನ್ನು ಕೇಳಿ ಪರಶುರಾಮಪ್ಪನಿಗೆ ದಿಕ್ಕು ತೋಚದಷ್ಟು ಆಶ್ಚರ್ಯವಾಯಿತು. ಈ ಮಾತು ಯಾವ ಜಾಡಿನಲ್ಲಿ ಹೋಗುತ್ತಿದೆ, ಇದರ ಗುರಿ ಏನು, ಇದರ ಆಳದಲ್ಲಿ ಎಂಥ ಸುಳಿ ಸುತ್ತುತ್ತಿದೆ ಎಂಬುದಾವುದೂ ಅವನಿಗೆ ಅರಿವಾಗಲಿಲ್ಲ. ಆದರೂ ಮುರುಕು ಸೇತುವೆಯಮೇಲೆ ಹೆಜ್ಜೆಹೆಜ್ಜೆಯನ್ನು ಎಚ್ಚರಿಕೆಯಿಂದ ಇಡುತ್ತಾ ನಡೆಯುವವನಂತೆ, ಕೇಳಿದ:

"ಏನು ಯೋಚನೆ ಮಾಡಿದೀರಾ?"

"ಭುವನಪ್ಪನವರದು ಭೂಮಿತೂಕದ ಮನಸ್ಸು, ಅವರ ವಿಶ್ವಾಸ ಕಡಲಿದ್ದ ಹಾಗೆ. ಆ ವಿಶ್ವಾಸದಲ್ಲಿ ಅವರು ನಿಮಗೆ ವಂಶಪಾರಂಪರ್ಯವಾಗಿ ಬಂದಿದ್ದ ಪ್ರಧಾನಿಪಟ್ಟವನ್ನು ತಾವೇ ಲಿಂಗಣ್ಣನಾಯಕರಿಗೆ ಬಿಟ್ಟು

ಕೊಟ್ಟರು—ಅವರಿಗೆ ಹೆಚ್ಚು ಅನ್ಯಾಯವಾಗಬಾರದೆಂದು. ಆ ಬಳಿಕ ಚಿಕ್ಕಣ್ಣನಾಯಕರ ಕಾಲದಲ್ಲಿ ಅದು ನಮ್ಮದಾಯಿತು. ನಾನೂ ಆಗ ಎಷ್ಟೋ ಹೇಳಿದೆ: ಅದು ನ್ಯಾಯವಾಗಿ ನಿಮ್ಮದಾಗಬೇಕು ಎಂತ. ಆದರೆ ಅವರು ಕೇಳಲಿಲ್ಲ, ನೀವೇ ಇರಬೇಕು ಎಂದರು. ನಾಯಕರ ಚಿತ್ತ, ದೈವಸಂಕಲ್ಪ ಎರಡೂ ಒಂದೇ ಎಂದು ಅದಕ್ಕೆ ಒಪ್ಪಿಕೊಂಡೆ. ಈಗ ಅವರ ಕಾಲ ಮುಗಿಯಿತು. ಇನ್ನು ಲಿಂಗಣ್ಣನಾಯಕರು ನಾಯಕರಾಗುತ್ತಾರೆ. ಹೊಸನಾಯಕರೊಂದಿಗೆ, ಹೊಸ ಪ್ರಧಾನಿಗಳೂ ಬಂದರೆ ನಮ್ಮ ಸಂತೋಷ ಒಂದಕ್ಕೆ ಎರಡರಷ್ಟಾಗುತ್ತದೆ. ಆದ್ದರಿಂದ ತಾವು ಪ್ರಧಾನಿಯಾಗಲು ಒಪ್ಪಿಕೊಳ್ಳಬೇಕು. ಲಿಂಗಣ್ಣನಾಯಕರಿಗೂ ಒಮ್ಮೆ ಈ ಮಾತು ನಾನೇ ಹೇಳಿದ್ದೆ."

ಅತೀವ ವಿಶ್ವಾಸದಿಂದೆಂಬಂತೆ ಮುದ್ದಣ್ಣನಾಡಿದ ಆ ಮಾತುಗಳನ್ನು ಕೇಳಿ ಪರಶುರಾಮಪ್ಪನಿಗೆ ಒಂದು ಗಳಿಗೆ ತನ್ನ ಕಣ್ಣು, ಕಿವಿಗಳನ್ನು ನಂಬುವುದೂ ಅಸಾಧ್ಯವಾಯಿತು. ಅಬ್ಬಾ! ಎಂಥ ಪವಾಡದಂಥ ಪರಿವರ್ತನೆ ಎನಿಸಿತು--ಒಂದು ಗಳಿಗೆ. ಮರುಗಳಿಗೆಯೇ ಲಿಂಗಣ್ಣನಾಯಕ ಹಟ ಹಿಡಿದು ಮುದ್ದಣ್ಣನಿಗೆ ಹೇಳಿದ್ದ ಮಾತು ನೆನಪಾಗಿ, ಮುದ್ದಣ್ಣನ ವರ್ತನೆಯ ನಿಜಸ್ವರೂಪ ಬಯಲಾಗಿ "ಅಬ್ಬಾ! ಎಂಥ ಕೃತ್ರಿಮದ ಮನುಷ್ಯ" ಎನಿಸಿ ಹೇಸಿಗೆಯೂ ಆಯಿತು. "ನಾನು ಪ್ರಧಾನಿಯಾಗಬೇಕೆಂದು ಹೇಳಿದುದು ನೀನಲ್ಲ, ನಿನಗದು ಇಷ್ಟವೂ ಇರಲಿಲ್ಲ. ಆ ಮಾತನ್ನು ಹೇಳಿದವರು ಲಿಂಗಣ್ಣನಾಯಕರೇ!" ಎಂದು ಸತ್ಯವನ್ನು ಇವನ ಮುಖಕ್ಕೇ ರಾಚಿಬಿಡಲೇ ಎನಿಸಿತು. ಆದರೆ ಅಂಥ ನಿಷ್ಠುರ ನಡತೆಯಿಂದ ಕಾರ್ಯಸಾಧನೆಯಾಗದೆ, ಅದಕ್ಕಿಂತ ಹೆಚ್ಚಾಗಿ ಅಪಾಯವೇ ಆಗಬಹುದು ಎಂದು ಚಿಂತಿಸಿ, ಉಳಿದೆಲ್ಲ ಭಾವನೆಗಳನ್ನು ಹಿಂದೊತ್ತಿ ಬಂದ ಕಾರ್ಯವೊಂದನ್ನೇ ಮುಖ್ಯವಾಗಿಟ್ಟುಕೊಂಡು ಹೇಳಿದ:

"ನಿಜ. ಲಿಂಗಣ್ಣನಾಯಕರೂ ನನ್ನಲ್ಲಿ ಆ ಪ್ರಸ್ತಾಪ ಮಾಡಿದರು. ನಾನು ಬಂದದ್ದೂ ತಮ್ಮಲ್ಲಿ ಆ ವಿಷಯವಾಗಿ ಮಾತನಾಡಬೇಕೆಂದೇ."

"ನನ್ನ ಮನಸ್ಸು ಈಗಾಗಲೇ ನಿಮಗೆ ತಿಳಿದದ್ದು ಬಹಳ ಸಂತೋಷ, ಬಹಳ ಸಂತೋಷ. ತಮಗೆ ನಮ್ಮ ಮಾತು ಒಪ್ಪಿಗೆತಾನೆ?"

—ಪರಶುರಾಮಪ್ಪನ ಹೃದಯದ ಆಳವನ್ನೇ ಬೆದಕುವಂತೆ ನೋಡುತ್ತ ಕೇಳಿದ ಮುದ್ದಣ್ಣ.

"ಊ ಹೂ—ನನಗದು ಒಪ್ಪಿಗೆಯಿಲ್ಲ."

"ಆ........ಏಕೆ?"

—ಆಶ್ಚರ್ಯವನ್ನು ಅಭಿನಯಿಸಿ ಕೇಳಿದ ಮುದ್ದಣ್ಣ.

"ಆ ಪದವಿಯನ್ನು ಹೊರುವಷ್ಟು ಶಕ್ತಿ ನನಗಿಲ್ಲ. ಅದಕ್ಕೆ ತಮ್ಮಂಥ ಸಮರ್ಥರೇ ಶಕ್ತರು. ನಾನು ಪ್ರಧಾನಿಯಾಗಲು ನೀವೂ ಒಪ್ಪಬಹುದು, ನಾಯಕರೂ ಒಪ್ಪಬಹುದು; ನಾನೂ ಒಪ್ಪಬಹುದು. ಆದರೆ ನೋಡಿದ ಜನ ಒಪ್ಪಬೇಡವೇ? ನನ್ನ ವಯಸ್ಸೇನು—ಈ ಪದವಿ ಏನು—ಒಂದಕ್ಕೊಂದಕ್ಕೆ ಎಲ್ಲಿಯ ಸಂಬಂಧ? ಅದೂ ಅಲ್ಲದೆ ಹೊಸ ನಾಯಕರು ಅಧಿಕಾರಕ್ಕೆ ಬಂದಾಗ, ಅವರಿಗೆ ಸರಿಯಾದ ದಾರಿ ತೋರಿಸಲು, ತಮ್ಮಂಥ ರಾಜಕಾರಣದ ಸುಳುವು—ಹೊಳವುಗಳನ್ನರಿತ ಹಿರಿಯರು ಪದವಿಯಲ್ಲಿರುವುದೇ ಮೇಲು. ಆದ್ದರಿಂದ ತಾವೇ ಆ ಪದವಿಯಲ್ಲಿರಬೇಕು. ಆ ಮಾತನ್ನು ತಮಗೆ ಹೇಳಬೇಕು ಎಂತಲೇ ನಾನು ಬಂದದ್ದು."

"ನೀವೂ ಹಾಗೇ ಹೇಳುತ್ತೀರಾ?"

—ಪರಶುರಾಮಪ್ಪನ ಮಾತು ಕೇಳಿ ಆಳವಾದ ಚಿಂತೆಯಲ್ಲಿ ಬಿದ್ದವನಂತೆ ಕೇಳಿದ ಮುದ್ದಣ್ಣ.

"ನಿಜವಾಗಿಯೂ ನನ್ನ ಅಭಿಪ್ರಾಯವೇನೋ ಇಷ್ಟೆ."

"ಅಹುದು. ಆದರೆ ನಾಯಕರಿಗೆ ನಮ್ಮ ಮಾತು ಪಥ್ಯವಾಗಬೇಕಲ್ಲಾ. ಒಂದುವೇಳೆ ಅವರಿಗೇ ನಾನು ಈ ಪದವಿಯಲ್ಲಿರುವುದು ಬೇಡ ಎನಿಸಿದರೆ........"

"ಅವರಿಗೆ ಹಾಗೆಂದೂ ಎನಿಸುವುದಿಲ್ಲ. ರಾಜ್ಯದ ಹಿತಾಹಿತಗಳು ತಿಳಿಯದಂಥ ಹಸುಮಕ್ಕಳಲ್ಲ ನಾಯಕರು."

"ಅದೇನೋ ನಿಜ. ಆದರೆ ನಮಗೆ ಆಗದವರು ನಮ್ಮ ವಿರುದ್ಧ ಅವರಿಗೆ ಏನಾದರೂ ಹೇಳಿ, ಅದರಿಂದಾಗಿ ಅವರ ಮನಸ್ಸು ಕೆಟ್ಟು, ಬಳಿಕ ಪದವಿ, ಅವರ ವಿಶ್ವಾಸ ಎರಡನ್ನೂ ಕಳೆದುಕೊಳ್ಳುವುದಕ್ಕಿಂತ, ಈಗ

ನಾವೇ ಇದು ನಮಗೆ ಬೇಡ ಎನ್ನುವುದು ಮೇಲಲ್ಲವೇ? ಹತ್ತು ಜನರ ಕಣ್ಣನ್ನು ಕೆರಳಿಸುವಂಥ ಅಧಿಕಾರದಲ್ಲಿರಬಾರದು, ಪರಶುರಾಮಪ್ಪನವರೇ ಅಂಥ ಪದವಿಗಿಂತ ಹಾಲಾಹಲ ಮೇಲು."

"ಹಾಗೇನೂ ಆಗದು ದಳವಾಯಿಗಳೇ. ತಮ್ಮ ವಿರುದ್ಧ ಯಾರೂ ಚಾಡಿ ಹೇಳಲಾರರು. ಹೇಳಿದರೂ ನಾಯಕರು ನಂಬುವುದಿಲ್ಲ."

"ಹಾಗೆನ್ನುತ್ತೀರಾ?"

"ನಿಶ್ಚಯವಾಗಿಯೂ."

"ಅಂದರೆ—ನಾವೇ ಈ ಪದವಿಯಲ್ಲಿರಬೇಕೆಂದು ನಿಮ್ಮ ಅಪೇಕ್ಷೆ."

"ಹೌದು."

"ಆಯಿತು. ನಿಮ್ಮ ವಿಶ್ವಾಸಕ್ಕೆ ಕಟ್ಟುಬಿದ್ದು 'ಆಗಲಿ' ಎಂದೆ ಎನ್ನಿ. ಆದರೆ ಅದಕ್ಕೆ ಮೊದಲು ನೀವು ನಮಗೊಂದು ಮಾತು ಕೊಡಬೇಕು ಪರಶುರಾಮಪ್ಪನವರೇ?"

—ಪರಶುರಾಮಪ್ಪನ ಮುಂಗೈಗಳನ್ನು ಹಿಡಿದು ಕೇಳಿದ ಮುದ್ದಣ್ಣ.

"ಏನು ಹೇಳಿ?"

"ನೋಡಿ—ಯಾರು ಏನು ಹೇಳಿದರೂ ನಾನು ನಿಮ್ಮ ಮಿತ್ರ. ನೀವೂ ಬೇರೆಯವರು ಏನು ಹೇಳಿದರೂ ನಮ್ಮಲ್ಲಿ ಅನ್ಯಥಾ ಭಾವಿಸಬಾರದು. ಒಂದುವೇಳೆ ಹಿಂದೆ ನಮ್ಮಿಂದ ಆದುದು ಅವಿವೇಕವೇ ಎಂದರೂ ತಾವೂ, ದಳವಾಯಿ ಭರಮಣ್ಣನವರೂ ಅದನ್ನೆಲ್ಲಾ ಮರೆತು ನಮಗೆ ಈ ಜವಾಬುದಾರಿಯನ್ನು ನಿರ್ವಹಿಸಲು ನೆರವು ನೀಡಬೇಕು. ಹಾಗಾಗಬಹುದು ಎಂದರೆ ನಿಮ್ಮ ಮಾತು ಅಪ್ಪಣೆ ಎಂದು ಶಿರಸಾವಹಿಸಿ ನಡಸುತ್ತೇನೆ. ಸುತ್ತಲ ಹತ್ತು ಕಣ್ಣು ನಮ್ಮನ್ನು ಸಂಶಯದಿಂದಲೇ ನೋಡಿದರೆ, ನಾವು ಕೆಲಸ ಮಾಡುವುದಾದೀತೇ? ನೀವು ನಮ್ಮನ್ನು ನಂಬಬೇಕು, ನಾನು ನಿಮ್ಮನ್ನು ನಂಬಬೇಕು. ಹಾಗಾದರೆ ಈ ಕೆಲಸ ಸಾಧ್ಯ. ಅಲ್ಲವೆ?"

"ನಿಜ."

"ಹಾಗಾದರೆ ನಮ್ಮ ಬೆಂಬಲವಾಗಿ ನೀವಿರುತ್ತೀರಾ?"

"ನಾವು ನೀವು—ಇಬ್ಬರೂ ಇರುವುದು ದುರ್ಗಕ್ಕೆ ದುಡಿಯಲೆಂದೇ ಅಲ್ಲವೇ? ಹೀಗಿರುವಾಗ ನಮ್ಮ ನಮ್ಮಲ್ಲಿ ಪರಸ್ಪರ ಸಂಶಯದ ಮಾತೆಲ್ಲಿ

ಬಂತು ದಳವಾಯಿಗಳೇ. ನಾವೆಲ್ಲಾ ಎರಡು ಕಣ್ಣುಗಳಿದ್ದ ಹಾಗೆ. ಆ ಭಾವನೆಗೆ ಬಾಧಕ ಬಂದಾಗಲಲ್ಲವೇ ಬೇರೆಯ ಮಾತು. ಅದುವರೆಗೂ ಆ ಮಾತೇಕೆ? ಏನೋ ಇರುವವರೆಲ್ಲಾ ಒಂದಾಗಿರೋಣ, ಎಲ್ಲರೂ ಒಂದಾಗಿದ್ದು ನಾಯಕರು ತೋರಿದಂತೆ ನಡೆದುಕೊಂಡಿರೋಣವೆಂಬುದೇ ನನ್ನ ಬಯಕೆಯೂ. ನಮ್ಮಿಬ್ಬರ ಬಯಕೆಗಳೂ ಒಂದೇ ಆದಮೇಲೆ ಬರೀ ಬೆಂಬಲವೇನು—ನೀವು ಕೈಯಾಗಿ; ನಾವು ಕತ್ತಿಯಾಗುತ್ತೇವೆ. ಆಗ ಬಹುದೇ ?"

—ಎಂದ ಪರಶುರಾಮಪ್ಪ, ಯಾವ ಮಾತಿಗೂ ಒಪ್ಪದೆ, ಆದರೆ ಒಪ್ಪಲಿಲ್ಲವೆಂಬುದನ್ನು ತೋರಗೊಡದೆ. ಆತನ ಮಾತಿನ ಜಾಣತನ, ಆತನ ಮಾತನ್ನೇ ಮೈಯೆಲ್ಲಾ ಕಿವಿಯಾಗಿ ಆಲಿಸುತ್ತಿದ್ದ ಮುದ್ದಣ್ಣನಿಗೆ ಅರಿವಾಗದೆ ಹೋಗಲಿಲ್ಲ. ಅದನ್ನರಿತು ಅವನ ಮನಸಿಗೂ ಮುಳ್ಳು ತುಳಿದ ಹಾಗಾದರೂ ಅದನ್ನು ತೋರಗೊಡದೆ, ಪರಶುರಾಮಪ್ಪನ ಮಾತು ಗಳಿಂದ ಅತ್ಯಂತ ತೃಪ್ತಿಯಾದಂತೆಯೇ—

"ನಿಮ್ಮ ವಿಶ್ವಾಸ ಬಹಳ ದೊಡ್ಡದು, ಪರಶುರಾಮಪ್ಪ, ನಾವು ಭಾಗ್ಯವಂತರು" ಎಂದ.

"ಹಾಗಾದರೆ—ಆ ಮಾತೊಂದು ಇತ್ಯರ್ಥವಾದಂತಾಯಿತು. ಇನ್ನು ಮುಂದಿನ ಮಾತು ಆಡಬಹುದಲ್ಲ"

—ಎಂದ ಪರಶುರಾಮಪ್ಪ ಮುಂದಿನ ಮಾತನ್ನು ಆರಂಭಿಸಲು ಪೀಠಿಕೆ ಹಾಕಿ.

"ನಿಮ್ಮ ಅಭಿಮಾನದಿಂದ ನಮ್ಮ ಬಾಯಿಕಟ್ಟಿದ ಮೇಲೆ ಬದಲು ಹೇಳುವ ಶಕ್ತಿ ಎಲ್ಲಿದೆ ನಮಗೆ? ಆದಾಯಿತು. ಮುಂದಿನದೇನು ಹೇಳಿ?"

"ಈಗ ಉಳಿದಿರುವುದು ಇನ್ನೊಂದೇ ಮಾತು—ಆದಷ್ಟು ಬೇಗ ನಾಯಕರಿಗೆ ಪಟ್ಟವಾಗಬೇಕು. ಈಗಲೇ ಸಾಕಷ್ಟು ತಡವಾಗಿ ಜನ ಅಲ್ಲ ಸಲ್ಲದ ಮಾತಾಡಿಕೊಳ್ಳಲು ಅವಕಾಶವಾಗಿದೆ. ಇನ್ನೇಕೆ ತಡವಾಗ ಬೇಕು ?"

"ನಿಜ ನಿಜ. ಇನ್ನು ತಡವಾಗಬಾರದು. ಆದಷ್ಟು ಬೇಗ ಆ ಕೆಲಸ ಮಾಡೋಣ."

–ತನಗೂ ಆ ಕೆಲಸವನ್ನು ಬೇಗ ಮುಗಿಸುವ ಆತುರವಿರುವವನಂತೆ ಹೇಳಿದ ಮುದ್ದಣ್ಣ.

"ಅಂದರೆ ಯಾವಾಗ ಅದನ್ನು ಮುಗಿಸಬೇಕೆಂದು ನಿಮ್ಮ ಅಭಿಪ್ರಾಯ?"

"ನಾನು ಅತ್ತಕಡೆ ಗಮನ ಕೊಟ್ಟಿರಲಿಲ್ಲ. ನೀವು ಹೇಳಿ. ಹತ್ತು ಜನ ಯಾವಾಗ ಆಗಬೇಕೆಂದರೆ ಆಗ ನಡೆದು ಹೋಗಲಿ."

"ಏನೋ ನವರಾತ್ರಿ, ನಾಯಕರಿಲ್ಲದಿದ್ದರೂ ದುರ್ಗದಲ್ಲಿ ನವರಾತ್ರಿ ಉತ್ಸವ ಹೇಗೆ ನಡೆಯುತ್ತದೋ ನೋಡೋಣ ಎಂದು ಸುತ್ತಮುತ್ತಲ ಊರ ಜನವೆಲ್ಲಾ ನೆರೆದಿದೆ. ಅಲ್ಲದೆ ವಿಜಯದಶಮಿಯ ದಿನವೂ ಪಟ್ಟಾಭಿಷೇಕ ಮಹೋತ್ಸವಕ್ಕೆ ಬಹಳ ಪ್ರಶಸ್ತವಾಗಿದೆ ಎಂದು ನಾನು ಕೇಳಿದೆ. ಆ ದಿನ ನಡೆಯಲು ಏನಾದರೂ ಅನಾನುಕೂಲವಿದೆಯೇ?"

"ವಿಜಯದಶಮಿ ದಿನವೇ? ಇಂದಾಗಲೇ ಷಷ್ಠಿ. ಇನ್ನಿರುವುದು ನಾಲ್ಕೇ ದಿನ. ಅಷ್ಟರಲ್ಲಿ ಪಟ್ಟಾಭಿಷೇಕದಂಥ ಮಹತ್ವದ ಉತ್ಸವಕ್ಕೆ ಸಿದ್ಧತೆಗಳನ್ನು ಮಾಡಲಾದೀತೇ?"

"ಆದಷ್ಟು ವೈಭವದಿಂದ ಮಾಡುವುದು. ಆದಷ್ಟು ಜನಕ್ಕೆ ಹೇಳಿ ಕಳುಹಿಸುವುದು. ಬಂದಷ್ಟು ಜನ ಬರಲಿ. ವೈಭವವಾಗಲಿ, ಹೆಚ್ಚು ಜನ ಬರುವುದಾಗಲಿ ಈಗ ಮುಖ್ಯವಲ್ಲ. ಆದಷ್ಟು ಬೇಗ ಈ ಕೆಲಸ ಮುಗಿಯುವುದು ಮುಖ್ಯ. ಅಲ್ಲವೇ?"

—ಎಂದ ಪರಶುರಾಮಪ್ಪ ಆದಷ್ಟು ಬೇಗ ಆ ಮಾತು ಮುಗಿಸುವ ಆತುರದಿಂದ. ಮುದ್ದಣ್ಣನಿಗೂ ಆ ಆತುರದ ಹಿಂದಿನ ಅಂತರ್ಯ ಅರಿವಾಯಿತು. ಆದರೂ ಅದನ್ನು ತೋರಗೊಡದೆ, ತನಗೂ ಆ ವಿಷಯದಲ್ಲಿ ಅಷ್ಟೇ ಆತುರ, ಉತ್ಸಾಹಗಳಿರುವವನಂತೆ

"ಆಗಲಿ. ವಿಜಯದಶಮಿಯಂದೇ ಇದು ಆಗಲಿ. ಇದು ಬೇಗ ಆಗುವುದು ನಮಗೂ ಸಂತೋಷವೇ. ನಮ್ಮ ಹೆಗಲ ಮೇಲಿನ ಜವಾಬುದಾರಿಯೂ ಕಡಮೆಯಾಗುತ್ತದೆ" ಎಂದ.

"ನಿಮ್ಮ ಬಾಯಿಂದ ಈ ಮಾತು ಕೇಳಿ ಬಹಳ ಸಂತೋಷವಾಯಿತು ದಳವಾಯಿಗಳೇ. ಬರೀ ನೀರು ಕೇಳಿ ಬಂದವನಿಗೆ ಮೃಷ್ಟಾನ್ನ

ಭೋಜನವನ್ನು ಮಾಡಿಸಿದಿರಿ. ನನಗಿನ್ನು ಅಪ್ಪಣೆಯಾದರೆ ಹೊರಡು ತ್ತೇನೆ."

"ಇಷ್ಟೇಕೆ ಅವಸರ? ಕುಳಿತುಕೊಳ್ಳಿ. ಅಪರೂಪವಾಗಿ ಬಂದಿ ದೀರ. ಇನ್ನಷ್ಟು ಹೊತ್ತು ಇದ್ದು ಹೋದರೆ ಬಹಳ ಸಂತೋಷ ವಾಗುತ್ತದೆ."

"ಇನ್ನೂ ಅಷ್ಟು ಹೊತ್ತು ಇಲ್ಲಿರಬೇಕು, ನಿಮ್ಮೊಂದಿಗೆ ಮಾತನಾಡ ಬೇಕು ಎಂಬ ಬಯಕೆ ನನಗೂ ಇದೆ. ಆದರೆ ಈ ಸಂತೋಷದ ಸುದ್ದಿ ಯನ್ನು ಕೇಳಲು ಎಷ್ಟೋ ಜನ ಕಾತರರಾಗಿದ್ದಾರೆ. ಎಷ್ಟು ಬೇಗ, ಹಾರಿ ಹೋಗಿ ಅವರಿಗೆ ಈ ಸುದ್ದಿ ಹೇಳಿಯೇನೋ ಎಂಬ ಆತುರ ನನಗೂ ಇದೆ. ಆದುದರಿಂದ ನನ್ನ ಆತುರವನ್ನು ಮನ್ನಿಸಿ, ಅಪ್ಪಣೆ ಕೊಡಬೇಕು."

—ಎಂದ ಪರಶುರಾಮಪ್ಪ.

"ನಿಜ. ನಿಜ, ನಮ್ಮ ಚಪಲ ಇನ್ನೊಬ್ಬರ ಸಂತೋಷಕ್ಕೆ ಅಡ್ಡ ವಾಗಬಾರದು. ಹೋಗಿ ಬನ್ನಿ. ಆಗಾಗ ಬರುತ್ತಿರಿ ಪರಶುರಾಮಪ್ಪ, ನಮ್ಮನ್ನು ಮರೆತುಬಿಡಬೇಡಿ."

—ಎಂದು ಮುದ್ದಣ್ಣ, ಹೊರಡಲನುವಾದ ಪರಶುರಾಮಪ್ಪನನ್ನು ಹಿಂಬಾಲಿಸಿ, ತಲೆಬಾಗಿಲವರೆಗೂ ಬಂದು ಕತ್ತಲಲ್ಲಿ ಒಂಟಿಯಾಗಿ ಹೋಗಲನುವಾದ ಆತನನ್ನು ಕಂಡು—

"ಇದೇನು ಹೀಗೆ ಬಂದಿರಿ? ಪಂಜಿನವನಿಲ್ಲವೇ? ಕತ್ತಲಲ್ಲಿ ಹೀಗೆ ಹೋಗುವುದೇ? ಕೊಂಚ ತಡೆಯಿರಿ"

—ಎಂದು, ಅವರನ್ನು ಮನೆಯವರೆಗೂ ಬಿಟ್ಟು ಬರುವಂತೆ ದೀವಟಿ ಗೆಯವನಿಗೂ, ಅವರ ಬೆಂಗಾವಲಾಗಿ ಹೋಗುವಂತೆ ಸೈನಿಕನೊಬ್ಬನಿಗೂ ಅಪ್ಪಣೆ ಮಾಡಿ—

"ಹೋಗಿ ಬನ್ನಿ. ನೀವು ಆ ತಂದೆಗೆ ತಕ್ಕ ಮಕ್ಕಳು ಪರಶುರಾಮಪ್ಪ. ವಿಶ್ವಾಸದಲ್ಲೇ, ಹೂ ಮಾಲೆ ಹಾಕಿದಂತೆ, ಬೇಡವಾಗಿದ್ದ ಪ್ರಧಾನಿಪದವಿ ಯನ್ನು ನಮ್ಮ ಕತ್ತಿಗೆ ಮತ್ತೆ ಕಟ್ಟಿಬಿಟ್ಟಿರಿ. ಆಗಲಿ-ದೈವೇಚ್ಛೆ. ನಿಮ್ಮಂಥ ವರಿಗೆ ಸೋಲುವುದೂ ನಮಗೆ ಹೆಮ್ಮೆಯೇ—"

—ಎಂದ ನಗುತ್ತ.

"ಇದು ಸೋಲೋ ಗೆಲುವೋ ಶಿವನೆ ಬಲ್ಲ."

—ಎಂದು ಪರಶುರಾಮಪ್ಪ ಮುದ್ದಣ್ಣನಿಗೆ ನಮಸ್ಕಾರ ಮಾಡಿ ಪಂಜು ಹಿಡಿದು ಕಾದು ನಿಂತ ದೀವಟಿಗೆಯವನನ್ನು ಹಿಂಬಾಲಿಸಿ ಹೊರಟ.

ಅವರು ಅಷ್ಟು ದೂರ ಹೋಗಿ ಕಣ್ಣು ಮರೆಯಾಗುವವರೆಗೂ ಅವರನ್ನೇ ನೋಡುತ್ತಾ ನಿಂತಿದ್ದು ಬಳಿಕ ಮುದ್ದಣ್ಣ ನಗುತ್ತಲೇ ಒಳಗೆ ಹೋದ.

## ೧೫

"ಹ್ಹ ಹ್ಹಾ........ಹ್ಹ ಹ್ಹ ಹ್ಹಾ........ಹ್ಹೋ ಹ್ಹ ಹ್ಹಹ ?—ಸೋಲೋ ಗೆಲವೋ, ಗೆಲವೋ ಸೋಲೋ........ಶಿವನೆ ಬಲ್ಲ ರಾಯಣ್ಣಾ....ಶಿವನೇ ಬಲ್ಲ....ಹ್ಹ ಹ್ಹ ಹ್ಹಾ........"

—ಚಪ್ಪಾಳೆಯಿಕ್ಕಿ ಗಹಗಹಿಸುತ್ತಾ ಹೇಳಿದ ಮುದ್ದಣ್ಣ, ಒಳಗೆ ತಾನು ಬರುವುದನ್ನೇ ಕಾಯುತ್ತಿದ್ದ ತನ್ನ ತಮ್ಮಂದಿರು ರಾಯಣ್ಣ, ಚಿಕ್ಕಣ್ಣರಿಗೆ.

"ಪರಶುರಾಮಪ್ಪ ಏನೋ ಎಂದುಕೊಂಡಿದ್ದೆ ನಾನು. ಚಿಂತೆಯಿಲ್ಲ. ಇವನೂ ಪಾತಾಳಯಂತ್ರಿಯೇ !"

—ಎಂದ ಅವರ ಮಾತುಗಳನ್ನೆಲ್ಲಾ ಮರೆಯಲ್ಲಿ ಕೇಳಿಸಿಕೊಂಡ ರಾಯಣ್ಣ.

"ನನ್ನ ಮುಂದೆ....ಈ ಮುದ್ದಣ್ಣನ ಮುಂದೆ....ಯಾರ ಯಂತ್ರವೂ ನಡೆಯುವುದಿಲ್ಲ, ಯಾರ ತಂತ್ರವೂ ನುಡಿಯುವುದಿಲ್ಲ. ಎಲ್ಲವೂ ನನ್ನೊಬ್ಬ ನಿಚ್ಚೆಗೆ ಬಾಗಿ ನಡೆಯಬೇಕು. ಹೇಗಿದೆ ನೋಡಿದೆಯಾ ರಾಯಣ್ಣ–ಪ್ರಧಾನಿ ಪದವಿ ನಾನೇ ವಹಿಸಿಕೊಳ್ಳಬೇಕಂತೆ. ಏನೋ ತನ್ನಪ್ಪನ ಮನೆಯ ಆಸ್ತಿಯನ್ನು ನನಗೆ ಕೊಟ್ಟು ಉಪಕಾರ ಮಾಡುವವನ ಹಾಗೆ ಹೇಳುತ್ತಿದ್ದಾನೆ. ಇವನಲ್ಲ, ಲಿಂಗಣ್ಣನಾಯಕನಲ್ಲ, ಹರಿಹರಬ್ರಹ್ಮ ಬಂದರೂ ಪ್ರಧಾನಿ ಪದವಿಯನ್ನು ನನ್ನ ಕೈಯಿಂದ ಬಿಡಿಸಿಕೊಳ್ಳುವುದು ಸಾಧ್ಯವಿಲ್ಲ. ಪ್ರಧಾನಿ ಪದವಿಯ ಮಾತು ಹಾಗಿರಲಿ–ಈಗ ನಾನೇ ಆಗಲಿ ಎಂದು ಬಿಟ್ಟುಕೊಟ್ಟಿರುವ ನಾಯಕನ ಪದವಿಯನ್ನೇ ಅವರು ಉಳಿಸಿಕೊಳ್ಳಲಿ ನೋಡೋಣ."

—ಜಗತ್ತೇ ತನ್ನದೆಂಬಂತೆ ಠೀವಿಯಿಂದ ಸೆಡೆದುನಿಂತು ಹೇಳಿದ ಮುದ್ದಣ್ಣ.

"ನೀವು ಹೂ ಅಂದದ್ದೇ ತಡ. ಹೇಗೆ ಹಾರಿದ ಅವನು. ಎಲುಬಿನ ತುಂಡಿಗೆ ಹಾರುವ ಹಸಿದ ನಾಯಿಯಂತೆ ಹಾರಿದ—ಈ ಪಟ್ಟಾಭಿಷೇಕಕ್ಕೆ ! ಹ್ಞ"

—ಪರಶುರಾಮಪ್ಪನ ಬಗ್ಗೆ ತಾತ್ಸಾರವಾಗಿ ಹೇಳಿದ ಚಿಕ್ಕಣ್ಣ.

ಅವನ ಹಣೆಯಬರಹವೇ ಅಷ್ಟು—ಕುನ್ನಿಯ ಜಾತಿ. ಆದಿರಲಿ. ಇಷ್ಟು ಅವಸರದ ಪಟ್ಟಾಭಿಷೇಕಕ್ಕೆ ನೀವು ಒಪ್ಪಬಾರದಾಗಿತ್ತು ಅಣ್ಣ."

—ರಾಯಣ್ಣ ಹೇಳಿದ.

"ಏಕೆ ?"

"ನಾಯಕನಪಟ್ಟ ತನಗೇ ಸಿಗುತ್ತದೆ ಎಂದು ನಂಬಿಕೆಯಾದ ಮೇಲೆ ಲಿಂಗಣ್ಣನಾಯಕನ ತಲೆ, ಕಿವಿ ಎತ್ತಕಡೆಗೆ, ಹೇಗೆ ಹೇಗೆ ತಿರುಗುತ್ತದೆಯೋ ನೋಡಿಕೊಂಡು, ಆಮೇಲೆ ಹೇಗೆ ಸೂಕ್ತವೋ ಹಾಗೆ ಮಾಡಬಹುದಾಗಿತ್ತು."

"ನಾನು ಪ್ರಧಾನಿಯಾಗಿದ್ದು, ನೀವೆಲ್ಲಾ ದಳವಾಯಿಗಳಾಗಿರುವಾಗ ಅವನ ತಲೆ ಎತ್ತೆತ್ತ ತಿರುಗಿದರೆ ತಾನೇ ಏನು ? ತಿರುಗಬೇಕಾದ ಕಡೆ ತಿರುಗಿದರೆ ಅದು ಉಳಿಯುತ್ತದೆ, ಇಲ್ಲವಾದರೆ ಉರುಳುತ್ತದೆ."

—ನಿರ್ಧರದ ಧ್ವನಿಯಲ್ಲಿ ಹೇಳಿದ ಮುದ್ದಣ್ಣ.

"ಈ ತಲೆಯುಳಿದಿದ್ದೇ ಇಷ್ಟು ತಾಪತ್ರಯಕ್ಕೆ ಕಾರಣ. ಅದೇ ಇಲ್ಲದಿದ್ದರೆ ? ಚೆನ್ನಾಗಿತ್ತು ?

—ಎಂದ ಅದುವರೆಗೂ ಸುಮ್ಮನಿದ್ದ ಚಿಕ್ಕಣ್ಣ.

"ಹೋಗಲಿ ಬಿಡು. ಅದರ ಚಿಂತೆ ಅಷ್ಟೇಕೆ?"

—ಎಂದ ಮುದ್ದಣ್ಣ, ತಾನಾಡುವುದು ತಲೆಯ ಮಾತಲ್ಲ, ಕಸದ ಮಾತು ಎಂಬಷ್ಟು ತಾತ್ಸಾರವಾಗಿ.

"ಬೇಡ ಎಂದರೆ ಹೇಗೆ ಅಣ್ಣ, ನಮಗಿರುವುದು ಅದೊಂದೇ ಚಿಂತೆ. ಆ ತಲೆಯೊಂದೇ ನಮ್ಮ ದಾರಿಯಲ್ಲಿ ಅಡ್ಡಗಲ್ಲು. ಅದು ಉಳಿದಿರುವವರೆಗೂ ನಾವು ನಿಶ್ಚಿಂತರಾಗಿರುವುದೆಲ್ಲಿ ಬಂತು ?"

—ಚುಕ್ಕಣ್ಣ ಒತ್ತಾಯಮಾಡಿ ಕೇಳಿದ.

"ಹಾಗಲ್ಲ ಚುಕ್ಕಣ್ಣ. ಅದು ಉರುಳಬೇಕೆಂಬ ಆತುರ ನಿನಗಿರುವಷ್ಟೇ ನನಗೂ ಇದೆ. ಆದರೆ ಅದಕ್ಕೆ ಚಿಂತೆಯಾಗಿ ಮಾಡಿಕೊಳ್ಳುವಷ್ಟು ಬೆಲೆ ಕೊಡುವುದೇಕೆ?"

"ಬೇಡವೇ?"

"ಊ ಹೂ, ಅನಗತ್ಯ. ಅದು ಉಳಿಯುವ ತಲೆಯಾಗಿದ್ದಿದ್ದರೆ ಹೇಗೆ ಏನು ಎಂದು ಚಿಂತಿಸಬೇಕಾಗಿತ್ತು. ಎಂದಿದ್ದರೂ ಅದು ಉರುಳುವ ತಲೆಯೇ. ಆದುದರಿಂದ ಒಂದು ದಿನ ಹಿಂಚು ಮುಂಚಾದರೆ ನನಗೇನೂ ಅಷ್ಟು ಅದರ ಚಿಂತೆಯಿಲ್ಲ. ನನಗೀಗ ಇರುವ ಚಿಂತೆಯೇ ಬೇರೆ ಮಾತಿನದು."

"ಯಾವ ಮಾತಿನದು."

"ಈ ತಲೆ ಉರುಳಿದ ಮೇಲೆ ಈ ಸಿಂಹಾಸನಕ್ಕೆ ಬರುವ ಬೇರೆ ತಲೆ ಯಾರದು ಎಂತ."

"ಯಾರದು ಅಂದರೆ? ಅದು ಈಗಲೇ ನಿಶ್ಚಯವಾಗಿದೆಯಲ್ಲಾ."

—ಮುದ್ದಣ್ಣನ ಮಾತು ಕೇಳಿ ರಾಯಣ್ಣ ಆಶ್ಚರ್ಯದಿಂದ ಕೇಳಿದ.

"ಅಂದರೆ........"

—ಮುದ್ದಣ್ಣನೂ ಅದೇ ಬಗೆಯ ನೋಟ ಬೀರಿ ರಾಯಣ್ಣನತ್ತ ನೋಡಿದ.

"ಅಂದರೆ—ಈ ನಾಯಕನ ಬಳಿಕ ಮತ್ತೆ ನಾಯಕನೇ ಇಲ್ಲ. ದಳವಾಯಿ ಮುದ್ದಣ್ಣನವರೇ ನಾಯಕರು. ಹಾಗೆಂದು ಮೊದಲೇ ನಿಶ್ಚಯವಾಗಿದೆಯಲ್ಲಾ."

—ಶಾಸನವಾಕ್ಯವನ್ನು ಓದುವವನಂತೆ ಹೇಳಿದ, ರಾಯಣ್ಣ.

"ಹೂ. ಇಷ್ಟು ದಿನ ಹಾಗೆಂದುಕೊಂಡಿದ್ದೆವು. ಆದರೆ ಈಗ ಹಾಗಾಗುವುದು ಸರಿಯಾಗುವುದಿಲ್ಲ ಎನಿಸಿದೆ."

"ಅಂದರೆ—ನೀವು ಕಡೆಯವರೆವಿಗೂ ಹೀಗೇ ಇವರ ಊಳಿಗದಲ್ಲೇ ಇರಬೇಕೆಂಬುದೇ ನಿಮ್ಮ ನಿಶ್ಚಯವೇ?"

—ಆಶ್ಚರ್ಯ—ಆಲೋಚನೆಗಳೆರಡೂ ಸಮಸಮವಾಗಿ ಬೆರೆತ ಧ್ವನಿ

ಯಲ್ಲಿ ಕೇಳಿದ ಚಿಕ್ಕಣ್ಣ."

"ಛಿ! ಅದಂತೂ ಆಗದ ಮಾತು."

"ಮತ್ತೆ?"

—ಮುದ್ದಣ್ಣನ ಒಗಟಿನಂಥ ಮಾತು ಅರ್ಥವಾಗದೆ ಕೇಳಿದ ರಾಯಣ್ಣ.

"ನೀವು ಕಾಲವನ್ನು ಅರ್ಥಮಾಡಿಕೊಳ್ಳುತ್ತಿಲ್ಲ ರಾಯಣ್ಣ. ಅದೇ ನಿಮ್ಮಲ್ಲಿ ದೊಡ್ಡ ದೋಷ. ಕಾಲಕ್ಕೆ ತಕ್ಕ ಹಾಗೆ ಕೊಡೆ ಹಿಡಿಯಬೇಕು. ಈಗ ನಾವು ಕಟ್ಟಬೇಕಾದ ಆಟದ ರೀತಿಯೇ ಬೇರೆ."

"ಅಂದರೆ...."

—ಮೂವರೂ ಒಟ್ಟಾಗಿ ಕೇಳಿದರು.

"ನೋಡು ರಾಯಣ್ಣ. ಮೊನ್ನೆ ಗದ್ದಲ ನಡೆಯಿತಲ್ಲ. ಅದರ ಅರ್ಥ ಮಾಡಿಕೊಂಡಿದ್ದೀಯಾ ನೀನು?"

"ಏನು ಅದರ ಅರ್ಥ? ಬರೀ ಪುಂಡಾಟ ಅದು."

"ಹಾಗೆಂದುಕೊಂಡರೆ ಅದು ನಿನ್ನ ತಪ್ಪು."

"ಮತ್ತೇನು ಅದರ ಅರ್ಥ?"

"ಜನಕ್ಕೆ ಈ ನಾಯಕರ ಮೇಲೆ, ಈ ನಾಯಕರ ವಂಶದ ಮೇಲೆ ಎಷ್ಟು ಅಭಿಮಾನವಿದೆ ಎಂಬುದಕ್ಕೇ ಅದು ಕನ್ನಡಿ. ಲಿಂಗಣ್ಣನಾಯಕರು ಪಟ್ಟಕ್ಕೆ ಬರುವುದು ತಡವಾದುದಕ್ಕೇ ಇಷ್ಟು ಗದ್ದಲವಾಯಿತು. ಇನ್ನು ಆ ವಂಶವೇ ಮುಗಿದು ಹೋಯಿತು ಎನಿಸಿದರೆ ಜನ ನಮ್ಮನ್ನು ಉಳಿಸಿ ಯಾರೆ? ಆ ಹುಚ್ಚು ಹೊಳೆಯನ್ನು ಕೆಣಕಿ ಬದುಕುವುದು ಸಾಧ್ಯವಿಲ್ಲ."

"ಅದೇನೋ ನಿಜ. ಆದರೆ ಅವರು ತಾವಾಗಿಯೇ ಕುಣಿಯಲಿಲ್ಲ. ಯಾರೋ ಅವರಿಗೆ ಹಚ್ಚಿಕೊಟ್ಟು ಕುಣಿಸಿದರು. ಹಳ್ಳಿ ಹಳ್ಳಿಗಳಲ್ಲಿ ಈ ಅಪಪ್ರಚಾರ ಮಾಡಿದ ಆ ಹುಚ್ಚಿ ನಮ್ಮ ಕೈಗೆ ಸಿಕ್ಕಿದ್ದಿದ್ದರೆ, ಆಗ ಈ ನಾಟಕ ಕಟ್ಟಿದವರ ಬಣ್ಣ ಬದಲಾಗುತ್ತಿತ್ತು."

—ಹುಚ್ಚಿಯನ್ನು ಹುಡುಕಿ ಸೋತು ನಿರಾಶನಾದ ಚಿಕ್ಕಣ್ಣ ಕರ್ಕಶ ಧ್ವನಿಯಲ್ಲಿ ಹೇಳಿದ.

"ಅದನ್ನು ನಾನು ಇಲ್ಲ ಎನ್ನುವುದಿಲ್ಲ. ಆ ಹುಚ್ಚಿಯನ್ನು ಹುಡು

ಕದೆ ಬಿಡಬೇಕೆಂದೂ ನಾನಿಲ್ಲ. ಏನಾದರೂ ಮಾಡಿ ಅವಳ ಪತ್ತೆ ಹಚ್ಚಿ, ಈ ಸಂಚನ್ನು ಬಯಲಿಗೆಳೆಯಲೇಬೇಕು."

"ಅಷ್ಟು ಮಾಡಿ, ಈ ಸಂಚಿನ ಬೇರನ್ನು ಕಡಿದರೆ ಮುಗಿಯಿತಲ್ಲಾ

—ರಾಯಣ್ಣ ಕೇಳಿದ.

"ಅಷ್ಟು ಸುಲಭವಾಗಿ ಕಡಿಯುವಂಥ ಬೇರಲ್ಲ. ಇದು ಬಹಳ ಆಳವಾಗಿ ಹಬ್ಬಿದೆ. ಇದನ್ನು ಕಡಿಯುವ ರೀತಿಯೇ ಬೇರೆ"

—ಮುದ್ದಣ್ಣ ಶಾಂತನಾಗಿ, ಆದರೂ ಮನದ ಕಹಿ ಮಾತಿನಲ್ಲಿ ತುಳುಕುವ ರೀತಿಯಲ್ಲಿ ಹೇಳಿದ.

"ಅಂದರೆ........"

"ಅಂದರೆ-ಈ ಸಂಚಿನ ಬೇರು, ಜನಗಳಲ್ಲಿರುವ ನಾಯಕ ವಂಶದ ಪ್ರೇಮ, ಭಕ್ತಿ. ಜನರಲ್ಲಿ ಆ ಭಾವನೆ ಇದೆಯೆಂದಲ್ಲವೇ ಇವರು ಅದನ್ನು ಕೆರಳಿಸಿದ್ದು. ಆದ್ದರಿಂದ ಈ ವಿಷಕ್ಕೆ ಬೇರೆ ರೀತಿಯ ಮದ್ದೇ ಅರೆಯಬೇಕು."

"ಹೇಗೆ?"

"ನಾಯಕ ವಂಶಕ್ಕೆ ವಿಪತ್ತು ಬರುತ್ತದೆ ಎಂದರೆ ತಾನೇ ಇವರು ಇಷ್ಟು ಕೆರಳುವುದು. ಆದ್ದರಿಂದ ಲಿಂಗಣ್ಣನಾಯಕನ ಮರಣದ ಅನಂತರ ಇವರು ಕೆರಳಿ ನಮ್ಮ ಮೇಲೆ ಬೀಳದ ಹಾಗೆ, ಪಾಂಡವರು ಭೀಷ್ಮನನ್ನು ಕೊಲ್ಲಲು ಶಿಖಂಡಿಯನ್ನು ಎದುರಿಗೆ ನಿಲ್ಲಿಸಿಕೊಂಡ ಹಾಗೆ, ಇವರ ಕೋಪಕ್ಕೆ ಅಡ್ಡಿಯಾಗಿ, ಆ ಮನೆತನದ ತಲೆಯೊಂದನ್ನೇ ತರಬೇಕೆಂದು ಯೋಚಿಸುತ್ತಿದ್ದೇನೆ. ಹಾಗಾದರೆ ಯಾವ ಅಪಾಯವೂ ಇಲ್ಲದೆ, ನಮ್ಮ ಉದ್ದೇಶ ನೆರವೇರುತ್ತದೆ. ನೆಪಮಾತ್ರದ ನಾಯಕರು ಯಾರಾದರೇನು ಅಧಿಕಾರ ನಮ್ಮದಾದರೆ ಸರಿ, ಅಲ್ಲವೇ?"

"ನಿಜ, ನಿಜ. ನಿಮ್ಮ ಮಾತು ಸರಿಯಾಗಿದೆ ಅಣ್ಣ. ಅಂಥವರು ಯಾರಿದ್ದಾರೆ?"

—ರಾಯಣ್ಣ ಆತುರದಿಂದ ಕೇಳಿದ.

"ಇನ್ನೂ ಯಾರೂ ಕಂಡಿಲ್ಲ. ನಾನೂ ಹುಡುಕುತ್ತಿದ್ದೇನೆ."

"ಅವರಿವರನ್ನು ಹುಡುಕುವುದೇಕೆ—ಈ ನಾಯಕನಿಗೇ ಮೂಗು

ದಾರ ಹಾಕಿ ಕುಣಿಸುವುದು ಸಾಧ್ಯವಾಗದೇ?"

"ಅದು ಸಾಧ್ಯವೇ ಎಂದು ನಾನೂ ಲೆಕ್ಕ ಹಾಕುತ್ತಿದೀನಿ. ನೋಡೋಣ. ಅದು ಮುಂದಿನ ಮಾತು. ಆದರೆ ಈ ನಾಯಕ ನಮ್ಮ ಸೂತ್ರಕ್ಕೆ ಸುಲಭವಾಗಿ ಕುಣಿಯುವವನಲ್ಲ."

"ಕುಣಿಯುತ್ತಾನೆ ಎಂದೇ ತೋರುತ್ತದೆ"

—ಚಿಕ್ಕಣ್ಣ ಹೇಳಿದ.

"ಅದು ಹೇಗೆ ಹೇಳುತ್ತೀ?"

"ಪಟ್ಟ ಬೇಡವೆಂದ—ಆಮೇಲೆ ಇರಲಿ ಎಂದು ಸೋತ. ಬಳಿಕ ನೀವು ಪ್ರಧಾನಿಯಾಗುವುದು ಬೇಡ ಎಂದ—ಈಗ ಹಾಗೂ ಆಗಲಿ ಹೇಗಾದರೂ ತನಗೆ ಪಟ್ಟವಾದರೆ ಸಾಕು ಎನ್ನುವಂತಿದೆ ಪರಶುರಾಮಪ್ಪನ ಮಾತು ಕೇಳಿದರೆ; ಇಷ್ಟು ದೂರ ಒಪ್ಪಿದವನು, ನಾಳೆ ಕೈಗೊಂಬೆಯಾಗಲೂ ಒಪ್ಪಬಹುದು."

—ಚಿಕ್ಕಣ್ಣ ತನ್ನ ಊಹೆಗೆ ಕಾರಣವನ್ನು ವಿವರಿಸಿ ಹೇಳಿದ.

"ಚಿಕ್ಕಣ್ಣನ ಮಾತು ಕೇಳಿದರೆ, ನನಗೂ ಹಾಗೇ ಇರಬೇಕು ಎಂದು ತೋರುತ್ತದೆ. ಇಲ್ಲವಾದರೆ ಪಟ್ಟಾಭಿಷೇಕಕ್ಕೆ ಇಷ್ಟು ಆತುರ ಮಾಡುತ್ತಿರಲಿಲ್ಲ."

—ಚಿಕ್ಕಣ್ಣನ ಮಾತಿಗೆ ತನ್ನ ಒಪ್ಪಿಗೆ ಸೂಚಿಸುತ್ತಾ ಹೇಳಿದ ರಾಯಣ್ಣ.

"ಅಂದರೆ..........."

—ರಾಯಣ್ಣನ ಮಾತು ಅರ್ಥವಾಗದವನಂತೆ ಕೇಳಿದ ಮುದ್ದಣ್ಣ.

"ಮತ್ತೇನು. ಅವನು ಪಟ್ಟಕ್ಕೆ ಬರಲು ನೀವು ಒಪ್ಪುವುದೇ ಇಲ್ಲ ಎಂದು ಹೆದರಿದ್ದ. ಅದಕ್ಕೇ ಮೊದಲು, ನೀವೇ ಪ್ರಧಾನಿಗಳಾಗಿರುವುದಾದರೆ ಈ ಪಟ್ಟವೇ ನನಗೆ ಬೇಡ ಎಂದು ಠೇಂಕಾರಮಾಡಿದನು. ಈಗ ನೀವೇ ಪ್ರಧಾನಿಗಳಾಗಿ ನಾನು ನಾಯಕನಾದರೆ ಸಾಕು ಎನ್ನುತ್ತಿದ್ದಾನೆ. ಹಾಗೂ ಅದು ಬೇಗ ಆಗದಿದ್ದರೆ, ನೀವೆಲ್ಲಿ ಮನಸ್ಸು ಬದಲಾಯಿಸುವಿರೋ ಎಂಬ ಭೀತಿಯಿಂದ, ಇನ್ನು ನಾಲ್ಕು ದಿನಕ್ಕೇ ಅದನ್ನು ನಡೆಸಿಬಿಡಿ ಎಂದು ಹೇಳಿಕಳುಹಿಸಿದ್ದಾನೆ-ಹುಚ್ಚುಮುರುವ. ಅವನೇನು ಶುಕಮುನಿಯೇ?

ಸಿಂಹಾಸನ ಅಂದರೆ ಎಂಥವರೂ ಬಾಯಿ ಬಿಡುತ್ತಾರೆ. ಹಾಗಿರುವಾಗ ಇವನು ಜೋತು ಬೀಳುವುದು ಹೆಚ್ಚೇ. ಇಷ್ಟುದಿನ ಏನೋ ಸ್ಮಶಾನ ವೈರಾಗ್ಯದ ಬೂದಿ ಬಡಿದುಕೊಂಡಿದ್ದ. ಈಗ ಆ ಆಸೆ ಹತ್ತಿ ಹುಚ್ಚೆದ್ದು ಕುಣಿಯುತ್ತಿದ್ದಾನೆ. ಅಂಥವನು ನಾಳೆ ಅದನ್ನು ಉಳಿಸಿಕೊಳ್ಳಲು ನಿಮ್ಮ ತಾಳಕ್ಕೆ ತಕ್ಕ ಹಾಗೆ ಕುಣಿಯಲೊಪ್ಪುವುದು ಹೆಚ್ಚೇ?"

"ಅಷ್ಟೇ ಅನ್ನುತ್ತಿಯಾ?"

—ಮುದ್ದಣ್ಣ ವಿಚಿತ್ರ ಧ್ವನಿಯಲ್ಲಿ ಕೇಳಿದ.

"ಅಷ್ಟಲ್ಲದೆ ಮತ್ತೇನು?"

-ಮುದ್ದಣ್ಣನ ಪ್ರಶ್ನೆಯಿಂದ ಕೆಣಕಲ್ಪಟ್ಟವನಂತೆ ಹೇಳಿದ ರಾಯಣ್ಣ.

"ಹಾಗಾಗಲಾರದು ಎಂದು ನಾನು ಹೇಳುವುದಿಲ್ಲ. ಹಾಗಾಗಲೂ ಬಹುದು, ಹಾಗೆ ಆಗದೆಯೂ ಇರಬಹುದು."

"ಅಂದರೆ ಈ ಆತುರಕ್ಕೇನು ಅರ್ಥ?"

"ಅಯ್ಯೋ ಮೂರ್ಖ-ಎಷ್ಟುಬೇಗ ಅವರ ಬುದ್ಧಿಯನ್ನು ತಪ್ಪು ಅಳತೆ ಮಾಡುತ್ತೀ ನೀನು. ಅವನು ನೀನು ಅಂದುಕೊಂಡಷ್ಟು ಮೂರ್ಖನಲ್ಲ."

"ಮತ್ತೇನು"

"ನೀನು ಅಂದುಕೊಂಡುದಕ್ಕಿಂತಲೂ ಅವರು ಹೆಚ್ಚು ಬುದ್ಧಿವಂತರು. ನಾವು ಹೂ ಅಂದ ಗಳಿಗೆಯಲ್ಲೇ ಅವಸರವಾಗಿ ಪಟ್ಟಾಭಿಷೇಕ ಮುಗಿಸಿ, ಅಧಿಕಾರ ತಮ್ಮ ಕೈಯಲ್ಲಿ ತೆಗೆದುಕೊಂಡರೆ, ನಾಳೆ ಮೇಲುಗೈ ಅವರದು. ಅಲ್ಲದೆ ನಾವು ಹೂ ಎನ್ನುತ್ತಿದ್ದ ಹಾಗೇ ಪಟ್ಟಾಭಿಷೇಕ ನಡೆದುಹೋದರೆ, ಆ ಅವಸರದಲ್ಲಿ ನಮಗೂ ಏನೂ ಸಂಚುಮಾಡಲು ಅವಕಾಶವಿರುವುದಿಲ್ಲ. ನಮ್ಮನ್ನು ಓಡಿಸಿ ಈ ಪಂದ್ಯದಲ್ಲಿ ತಾವು ಗೆಲ್ಲಬೇಕು ಎಂದು ಮಾಡಿದ್ದಾರೆ. ಓಡಲಿ. ಅಷ್ಟೇ ಅಲ್ಲ—ಇವರು ಯಾರಿಗೂ ನಮ್ಮ ಬಗ್ಗೆ ಅಂತರ್ಯದಲ್ಲಿ ವಿಶ್ವಾಸವಿಲ್ಲ, ರೋಷವೇ ಇದೆ. ಲಿಂಗಣ್ಣನಾಯಕನಿಗೂ."

"ಅಂದರೆ—ಪಟ್ಟಕ್ಕೆ ಬಂದಮೇಲೂ ಅವನು ಹಿಂದಿನದನ್ನು ಮರೆಯದೆ ರೋಷವನ್ನೇ ಸಾಧಿಸುತ್ತಾನೆ ಎನ್ನುತ್ತೀರಾ ಅಣ್ಣಾ?"

—ಚಿಕ್ಕಣ್ಣ ಕೇಳಿದ.

"ನಾಯಕ ಮರೆಯುವನೋ ಬಿಡುವನೋ ಕಾದು ನೋಡಬೇಕು;

ಅದು ನಾಳಿನ ಮಾತು."

–ಎಂದ ಮುದ್ದಣ್ಣ, ಯಾವುದೋ ಚಿಂತೆಯ ಆಳಕ್ಕೆ ಇಳಿಯುತ್ತಾ. ಆತನ ಮಾತು ಕೇಳಿದ ಉಳಿದ ಮೂವರನ್ನೂ ಚಿಂತೆ ಆವರಿಸಿತು. ತೂಗು ದೀಪಗಳು ಚೆಲ್ಲಿದ ಅರೆಗತ್ತಲು–ಬೆಳಕಿನಲ್ಲಿ ಅವರ ಚಿಂತೆ ತುಂಬಿದ ಮೊಗಗಳ ಕತ್ತಲಿನಲ್ಲಿಯೇ ಕಡೆದಂತಿದ್ದವು. ಮೌನವಾಗಿ ಕುಳಿತಿದ್ದರವರು.

"ನಾಯಕರು ಮರೆತರೂ ನಾನು ಮರೆಯುವುದಿಲ್ಲ."

–ಇದ್ದಕ್ಕಿದ್ದ ಹಾಗೇ ತೆರೆದ ಕಿಟಕಿಯಿಂದ ಕರ್ಕಶವಾದ ಸ್ತ್ರೀಕಂಠವೊಂದು ಹೇಳಿತು.

ಅನಿರೀಕ್ಷಿತವಾಗಿ ಆ ಧ್ವನಿಯನ್ನು ಕೇಳಿದ ಆ ನಾಲ್ವರೂ ನೆಲದಿಂದ ಸಿಡಿದೆದ್ದು ವಾತಾಯನದತ್ತ ನೋಡಿದರು. ಹೊರಗೆ ಹರಡಿದ ಕತ್ತಲಿನಲ್ಲಿ ಸ್ಪಷ್ಟವಾಗಿ ಮುಖ ಕಾಣಿಸದ, ಕೆದರಿದ ಕೂದಲು ಹರಡಿದ, ನೋಡಿದ ಕೂಡಲೇ ಭೀತಿ ಕವಿಸುವ ಹೆಣ್ಣು ಮೊಗವೊಂದು, ಅವರನ್ನೇ ಇಣಿಕಿ ನೋಡುತ್ತಿತ್ತು—ತಿನ್ನುವಂತೆ. ಆ ನೋಟಕ್ಕೇ ಇವರ ನಾಲಿಗೆಯಲ್ಲಿದ್ದ ದ್ರವವೇ ಆರಿ ಹೋದಂತಾಯಿತು.

"ಯಾರು........ಯಾರು ನೀನು?"

—ಎರಡು ಗಳಿಗೆಗಳ ಬಳಿಕ ಆ ಆಶ್ಚರ್ಯದಿಂದ ಚೇತರಿಸಿಕೊಂಡು, ಅಬ್ಬರಿಸಿ ಕೇಳಿದ ಮುದ್ದಣ್ಣ.

"ನಾನೇ............ನಾನೇ............ನಾನು ನಿನ್ನ ಸಾವು!" ಎಂದು ಕರ್ಕಶವಾಗಿ ಹೇಳಿತು ಆ ಸ್ತ್ರೀ ಧ್ವನಿ ಮರುಗಳಿಗೆಯೇ ನಕ್ಕು—

"ನಾನು ನೀನು ಕೊಂದ ನಾಗತಿಯ ನೆರಳು."

—ಎಂದು ಕಿಲಕಿಲ ನಕ್ಕು ಕತ್ತಲೆಯಲ್ಲಿ ಹಾಗೇ ಕರಗಿಹೋಯಿತು. ಆ ನಗುವನ್ನು ಕೇಳಿ ಇವರ ಮೈಮೇಲೆ ಹಿಮಶೀತಲವಾದ ನೀರನ್ನು ಚೆಲ್ಲಿದಂತಾಗಿ, ಅಪ್ರಯತ್ನವಾಗಿ ಮೈನಡುಗಿದವು.

"ಅವಳೇ........ಅವಳೇ....ಆ ಹುಚ್ಚಿ....ಹಿಡಿಯಿರಿ ಅವಳನ್ನು."

—ಎಂದು ಚೀರುತ್ತಾ ಹೊರಗೆ ಓಡಿದ, ತಾನೂ ಚೇತರಿಸಿಕೊಂಡ ಚಿಕ್ಕಣ್ಣ. ಚಿಕ್ಕಣ್ಣನನ್ನು ಹಿಂಬಾಲಿಸಿ ರಾಯಣ್ಣನೂ ಓಡಿದ.

ಅರ್ಧ ಗಂಟೆಯ ಕಾಲ ಪಂಜುಗಳ ಬೆಳಕಿನಲ್ಲಿ ಜನ ಮನೆಯ

ಸುತ್ತಮುತ್ತ ಹುಡುಕಿದರು. ಬೇಟೆಯ ನಾಯಿಗಳ ಬೊಗಳುವಿಕೆಯ ಧ್ವನಿ ಇರುಳನ್ನೇ ಬೆದರಿಸುವಂತೆ ಕೇಳಿಸುತ್ತಿತ್ತು.

ಸ್ವಲ್ಪ ಹೊತ್ತಿನ ಬಳಿಕ ರಾಯಣ್ಣ ಒಬ್ಬನೇ ಒಳಗೆ ಬಂದ.

"ಸಿಕ್ಕಳೇ ಅವಳು ?"

—ರಾಯಣ್ಣ ಒಳಗೆ ಬರುತ್ತಿದ್ದ ಹಾಗೇ ಕೇಳಿದ ಮುದ್ದಣ್ಣ.

"ಊಹೂ—ಸಿಗಲಿಲ್ಲ, ಎಲ್ಲೋ ಮಾಯವಾಗಿ ಬಿಟ್ಟಳು."

"ಚಿಕ್ಕಣ್ಣ ಎಲ್ಲಿ?"

"ಬೇಟೆಯ ನಾಯಿಗಳೊಂದಿಗೆ ಅವಳನ್ನು ಹುಡುಕಲು ಹೋಗಿದ್ದಾನೆ."

—ಎಂದ ರಾಯಣ್ಣ, ಘೋರ ನಿರಾಶೆಯ ಕಹಿಧ್ವನಿಯಲ್ಲಿ.

ಆ ಮಾತು ಕೇಳಿ ಮುದ್ದಣ್ಣನಿಗೆ ವಾತಾಯನದ ಹೊರಗಿದ್ದ ಕತ್ತಲೆ ಹೊಳೆಯಾಗಿ, ಒಳಗೆ ಹರಿದು ಬಂದು ತನ್ನನ್ನು ಆವರಿಸುತ್ತಿದ್ದಂತೆ ತೋರಿತು. ಅವನ ನೆತ್ತಿಯೊಳಗೆ—ಹುಚ್ಚಿಯ ನೆತ್ತರು ಹೆಪ್ಪುಗಟ್ಟಿಸುವ ಕಿಲಕಿಲ ನಗು. "ನಾನು....ನಾನು....ನೀನು ಕೊಂದ ನಾಗತಿಯ ನೆರಳು" ಎಂದ ಮಾತುಗಳು ಚಕ್ರಾಕಾರವಾಗಿ ಸುತ್ತುತ್ತಿದ್ದವು.

ಗರಬಡಿದವನಂತೆ ನಿಂತಲ್ಲಿಯೇ ನಿಂತಿದ್ದ ಮುದ್ದಣ್ಣ.

---

೧

"ಆಶ್ವಯುಜ ಶುದ್ಧ ಮಹರ್ನವಮಿ ಬರಲಿ ಎಂದು
ಲೇಸಾಗಿ ಹರಸಿದೆವು ಬಾಲಕರು ಬಂದು"

—ಎಂದು ಕಾಲಿಗೆ ಗೆಜ್ಜೆ ಕಟ್ಟಿ, ಕೋಲು ಹುಯ್ಯುತ್ತಾ ಮನೆ ಮನೆಯ ಬಾಗಿಲಿಗೂ ಮಹರ್ನವಮಿಯ ಪದವನ್ನು ಹಾಡಿ, ಮನೆ ಮನೆಗೂ ನವರಾತ್ರಿಯ ಆನಂದವನ್ನು ಹಂಚಿ ಹೋದ ಹುಡುಗರ ಗುಂಪು, ಹಳ್ಳಿ ಹಳ್ಳಿಯಲ್ಲೂ, ವಿಜಯದಶಮಿಯ ದಿನ ದುರ್ಗದಲ್ಲಿ ಹೊಸ ನಾಯಕರಿಗೆ ಪಟ್ಟಾಭಿಷೇಕವಾಗುತ್ತದೆ ಎಂಬ ವಾರ್ತೆಯನ್ನು ಸಾರಿ ಹೋದರು. ವೇಗದ ಓಟದಿಂದ ಬಸವಳಿದು, ಮೈ, ಬಾಯಿಗಳಿಂದ ಬುರುಗು ನೊರೆ ಸೂಸುತ್ತಿರುವ ಕುದುರೆಗಳನ್ನೇರಿದ ಓಲೆಕಾರರು ಹಳ್ಳಿ ಹಳ್ಳಿಯ ಗೌಡರಿಗೂ "ವಿಭವಸಂವತ್ಸರ ಆಶ್ವಯುಜ ಶುದ್ಧ ವಿಜಯದಶಮಿಯ ಶುಭ ಮುಹೂರ್ತದಂದು ಲಿಂಗಣ್ಣನಾಯಕರ ಪಟ್ಟಾಭಿಷೇಕವಾಗುತ್ತದೆ. ಆದಿನದಂದು ತಾವು ದುರ್ಗಕ್ಕೆ ದಯಮಾಡಿಸಿ, ಹೊಸನಾಯಕರಿಗೆ ಸಲ್ಲಬೇಕಾದ ನಜರು, ಪಟ್ಟಾಭಿಷೇಕದ ಕಾಣಿಕೆ ಒಪ್ಪಿಸಿ, ಉತ್ಸವದಲ್ಲಿ ಭಾಗಿಗಳಾಗಬೇಕು" ಎಂಬ ನಿರೂಪವ ಪತ್ರವನ್ನು ತಲುಪಿಸಿ ಹೋದರು. ಗಾಳಿಯಲ್ಲಿ ಪರಿಮಳ ಹರಡುವಂತೆ, ವೇಗವಾಗಿ ಈ ಸುದ್ದಿ ದುರ್ಗದ ಸೀಮೆಯ ಮೂಲೆ ಮೂಲೆಗಳಿಗೂ ಹರಡಿ, ಕೇಳಿದ ಜನ ಹಿಗ್ಗಿತು.

ಎಂಥ ಪ್ರಳಯವೃಷ್ಟಿ ಕರೆಯುವುದೋ, ಮತ್ತೇನು ಅನಾಹುತ ಪರಂಪರೆಯಾಗುವುದೋ ಎಂದು ಹೆದರಿದ್ದ ಜನ ಪಟ್ಟಾಭಿಷೇಕದ ಖಂಡಿತ ವಾರ್ತೆಯನ್ನು ಕೇಳಿ, ಮೈಹಿಡಿದ ಛಳಿ ಬಿಟ್ಟಂತಾಗಿ, ಅವರ ಹರ್ಷಕ್ಕೆ ರೆಕ್ಕೆ ಮೂಡಿದಂತಾಯಿತು. ದುರ್ಗದ ಜನರಂತೂ ಆ ಸಂತೋಷದಲ್ಲಿ ನಾಲ್ಕು ತೋಳಾಗಿ, ಅವಸರದಲ್ಲಾದರೂ, ದುರ್ಗವನ್ನು ಆದಷ್ಟು ಸಿಂಗರಿಸತೊಡಗಿದ್ದರು. ಕೋಟೆ, ಪೇಟೆಗಳಲ್ಲೆಲ್ಲಾ ಆ ಉತ್ಸಾಹದ ಸಡಗರವೇ; ಎಲ್ಲೆಡೆಯಲ್ಲೂ ಅದರ ಗಡಿಬಿಡಿಯೆ.

ಪೇಟೆಯ ಮನೆಗಳಿರಲಿ, ಕೋಟೆಯ ಮೇಲಿನ ಕೋಡುಗಲ್ಲಿನ ಮೇಲೆ ನೆತ್ತಿಯನ್ನು ನಿಮಿರಿಸಿ ನಿಂತ ಬತೇರಿಗಳಿಗೂ ಬಣ್ಣದ ಪಟ್ಟಿಗಳ ಅಲಂಕಾರವಾಗಿ, ಹತ್ತು ಮೈಲಿ ದೂರಕ್ಕೆ ಅವು ಈ ಹರ್ಷದ ವಾರ್ತೆಯನ್ನು ಸಾರುತ್ತಿವೆ. ಕೋಟೆಯ ಬಾಗಿಲುಗಳೂ ಬಗೆ ಬಗೆಯ ಬಣ್ಣಗಳ ಚಿತ್ರಗೆಲಸಗಳಿಂದ ಅಲಂಕಾರವಾಗಿ, ಈಗತಾನೇ ಕಟ್ಟಿ ಮುಗಿಸಿದಷ್ಟು ಹೊಸದಾಗಿ ಕಾಣುತ್ತಿವೆ. ಇತ್ತ ಸಿದ್ದಯ್ಯನ ಬಾಗಿಲು–ಅತ್ತ ರಂಗಯ್ಯನ ಬಾಗಿಲು ಎರಡೂ, ಪಟ್ಟಾಭಿಷೇಕಕ್ಕೆಂದು ದುರ್ಗಕ್ಕೆ ಬರುವವರನ್ನು ಸ್ವಾಗತಿಸಲು ಕೈಚಾಚಿ ಕಾದು ನಿಂತವರಂತೆ, ದುರ್ಗದ ವೈಭವವನ್ನೆಲ್ಲಾ ಸೂಕ್ಷ್ಮವಾಗಿ ತಾನೇ ಸಾರಿ ಹೇಳುವಷ್ಟು ವೈಭವದಿಂದ ಅಲಂಕೃತವಾಗಿವೆ. ಆ ಎರಡು ಬಾಗಿಲುಗಳಿಂದಲೂ ಬಂದು, ಉತ್ಸವಾಂಬಾ ದೇವಾಲಯದ ಎದುರಿನಲ್ಲಿ ಕಲೆಯುವ ಎರಡು ರಾಜಮಾರ್ಗಗಳ ಇಬ್ಬದಿಗೂ ಸಾಲು ಹೊತೋರಣ ಕಟ್ಟಿ, ನಡುನಡುವೆ ಬಗೆ ಬಗೆಯ ಆಕಾರದ ಕೃತಕ ಗೋಪುರ, ಕಳಸ, ಕಮಾನುಗಳನ್ನು ನಿಲ್ಲಿಸಿ, ರಾಜಬೀದಿಯೋ ಅರಮನೆಯೋ ಎಂಬ ಭ್ರಾಂತಿಯನ್ನುಂಟುಮಾಡುವಂತಿದೆ. ಅವಸರದಲ್ಲಿ ನಡೆಯಬೇಕಾದ ಈ ಕೆಲಸಕ್ಕೆ ಕೆಲಸಗಾರರೇ ಸಾಲದೆ, ಸೆರೆಯಲ್ಲಿದ್ದ ಯುದ್ಧಖೈದಿಗಳನ್ನು ಈ ಕೆಲಸಕ್ಕೆ ಬಿಟ್ಟು, ಹಗಲಿರುಳೂ ದುಡಿಸಿ, ಸಂಜೆ ಬರಿ ಬೀದಿಯಂತಿದ್ದುದು, ಹಗಲಾಗುವ ವೇಳೆಗೆ ಇಂದ್ರನ ಅಮರಾವತಿಯಂತೆ ಕಾಣುವ ಹಾಗೆ ಮಾಡಿಸಿದ್ದಾರೆ.

ಪೇಟೆಯಲ್ಲಿ ವಾಸಿಸುವ ನಾಗರಿಕರೂ ಅವರೊಂದಿಗೆ ನಗರವನ್ನು ಸಿಂಗರಿಸುವುದರಲ್ಲಿ ಸ್ಪರ್ಧಿಸಿದ್ದಾರೆ. ಒಂದೊಂದು ಮನೆಯ ಮುಂದೂ ಒಂದೊಂದು ಬಗೆಯ ಅಲಂಕಾರ, ಚಪ್ಪರ. ಆ ಚಪ್ಪರ ಅದನ್ನು ಹಾಕಿಸಿದ ಮನೆಯವರ ಸಂಪತ್ತು, ಹಿರಿಮೆ, ಅಂತಸ್ತುಗಳ ಪ್ರದರ್ಶನ ಶಾಲೆಯಂತಿವೆ. ನೆಲಕ್ಕೆ ತಳಿದ ಕಸ್ತೂರಿ ಪನ್ನೀರಿನ ನೀರಿನಿಂದ ಗಾಳಿಯೇ ಗಮಗಮಿಸಿ ಓಡಾಡುವವರಿಗೆ ಮತ್ತು ಬರುವಂತಿದೆ. ನಡೆದಾಡುವವರ ಕಣ್ಣು ಕೋರೈಸಿ, ಚಿತ್ತ ಅಲ್ಲಕಲ್ಲೋಲವಾಗುವಂತೆ, ಆ ಸಾಲು ಕನ್ನಡಿ, ಜರಿ, ರೇಸಿಮೆಗಳ ಕಸೂತಿಗೆಲಸದ ವಸ್ತ್ರಗಳ, ತೂಗುದೀಪಗಳ ಅಲಂಕಾರ ವೈಭವ.

ಕೆಳದುರ್ಗದ ವೈಭವವೇ ಇಷ್ಟಾದರೆ ಮೇಲುದುರ್ಗದ ಶೃಂಗಾರ ಇದರ ಹತ್ತರಷ್ಟು. ಕಾಮನ ಹೊಂಡದ ಬಳಿಯ ಹುಲಿಮುಖದ ಬಾಗಿಲಿನಿಂದ ಹಿಡಿದು, ಏಕನಾಥೇಶ್ವರಿಯ ದೇವಾಲಯದ ಬಳಿಯ ಅಜ್ಜಿಯ ಬಾಗಿಲಿನವರೆಗಿನ ಮಾರ್ಗ, ದುರ್ಗದರಸುಗಳ ಕೀರ್ತಿ, ಪ್ರತಾಪಕ್ಕೆ ಎತ್ತಿದ ಧ್ವಜದಂತಿದೆ. ಉತ್ಸವದ ಉಡುಪು ಧರಿಸಿ, ಥಳಥಳಿಸುವ ಶಸ್ತ್ರಗಳನ್ನು ಬಿಸಿಲಿನಲ್ಲಿ ಥಳಥಳಿಸುವಂತೆ ಎತ್ತಿಹಿಡಿದು ಚಲಿಸದೆ ನಿಂತ ಸೈನಿಕರ ಸಾಲು, ಗೊಂಬೆಗಳ ಸಾಲನ್ನು ನಿಲ್ಲಿಸಿದಂತಿದೆ. ಪಟ್ಟಾಭಿಷೇಕ ಮುಗಿದನಂತರ ದರ್ಬಾರು ನಡೆವ, ಚಿಕ್ಕ ಅರಮನೆಯ ಬಳಿಯ ಬಣ್ಣದ ಚಾವಡಿಯ ಮುಂದಿನ ಬಯಲಲ್ಲಿ ಹಗಲು ಹರಿಯುತ್ತಿದ್ದ ಹಾಗೆ, ಆನೆ, ಒಂಟೆ, ಕುದುರೆಗಳನ್ನೇರಿದ ಸವಾರರು ಸಾಲುಸಾಲಾಗಿ ನಿಂತು, ಅವರು ಧರಿಸಿದ, ಚೆನ್ನಾಗಿ ಉಜ್ಜಿ ಮಿರುಗುಕೊಟ್ಟ ಲೋಹದ ಕವಚ ಶಿರಸ್ತ್ರಾಣಗಳು ಎಳೆಬಿಸಿಲಿನಲ್ಲಿ ಹೊಳೆದು, ಆ ಸೈನಿಕರೂ ಇವರು ಮನುಷ್ಯರಲ್ಲಿ ಲೋಹದ ಪುತ್ಥಳಿಗಳು ಎಂಬ ಭ್ರಾಂತಿಯನ್ನುಂಟುಮಾಡುತ್ತಿದ್ದಾರೆ.

ಪಟ್ಟಾಭಿಷೇಕ ನಡೆಯುವ ಸಂಪಿಗೆ ಸಿದ್ಧೇಶ್ವರನ ದೇವಾಲಯವಂತೂ ಕಣ್ಣಲ್ಲಿ ನೋಡಿದರೆ ಹಾಗೆಯೇ ಎದೆಯಲ್ಲಿ ಅದರ ಅಚ್ಚು ಮೂಡುವಂತೆ ಅಲಂಕೃತವಾಗಿದೆ. ದೇವಾಲಯದ ಮುಂದಿನ ಮೂರು ಅಂತಸ್ತಿನ ಗಾರೆಕೆಲಸದ, ಮಹಾದ್ವಾರದ ಗೋಪುರದಲ್ಲಿ ಕೆತ್ತಿದ ಬಗೆ ಬಗೆಯ ವಿಗ್ರಹಗಳಿಗೆ ಬಣ್ಣಕೊಟ್ಟು: ಅವು ವಿಗ್ರಹಗಳಲ್ಲ, ಜೀವಂತವಸ್ತುಗಳನ್ನೇ ಏನೋ ಮಾಡಿ, ಸೂಕ್ಷ್ಮಾಕಾರವಾಗಿಸಿ ಅಲ್ಲಿ ನಿಲ್ಲಿಸಿದಾರೆ ಎಂಬ ಭ್ರಾಂತಿ ಬರುವಂತಿದೆ. ದೇವಾಲಯದ ಒಳಭಾಗದಲ್ಲಿ, ಗೋಪುರದ ಇಬ್ಬದಿಯಲ್ಲೂ ನಿಲ್ಲಿಸಿದ, ಖಡ್ಗಧಾರಿಣಿಯರಾದ ಜೋಲುಕೆನ್ನಾಲಗೆಯ ನಕ್ತಂಚರಿಯರ ವಿಗ್ರಹಗಳೆರಡು, ಆ ಅಂಗಳವನ್ನು ಪ್ರವೇಶಿಸಿದವರ ಎದೆಯಲ್ಲಿ ಭಯವನ್ನು ಬಿತ್ತಿ, ಇದು ಎಚ್ಚರಿಕೆಯಿಂದ, ಭಕ್ತಿಯಿಂದ ನಡೆದುಕೊಳ್ಳಬೇಕಾದ ತಾಣ, ಇಲ್ಲಿ ಕೊಂಚ ಹೆಚ್ಚುಕಡಮೆಯಾದರೂ ತಲೆದಂಡ ಕೊಡಬೇಕಾದೀತು ಎಂದು ಸಾರುವಂತಿದೆ. ಆದರೆ ಅಲ್ಲೇ ಹೊರವಾಗಿ ಬೆಳೆದ ಕೆಂಡಸಂಪಿಗೆಯ ಮರಗಳಲ್ಲಿ ಹೂವರಳಿ, ಅದರ ಮಾದಕವಾದ ಕಂಪು, ಮೂಸಿದವನಿಗೆ ಮತ್ತನ್ನುಂಟುಮಾಡಿ, ಭಕ್ತಿಯ ಉತ್ಕಟ ಸ್ಥಿತಿಯ

ಅನುಭವವನ್ನು ನೆನಪಿಗೆ ತರುತ್ತದೆ. ಪೂರ್ವಾಭಿಮುಖವಾಗಿರುವ ಮೂಲೆಯ ಗವಿಯಲ್ಲಿ ಸ್ಥಾಪಿತವಾಗಿರುವ ಸಂಪಿಗೆ ಸಿದ್ಧೇಶ್ವರನ ದೇವಾಲಯದ ಇದುರಿನಲ್ಲಿ ಬೆಳೆದ ಹಲಸಿನ ಮರ ಎತ್ತರವಾಗಿ ಬೆಳೆದು ದೇವಾಲಯಕ್ಕೆ ಹಸಿರುಛತ್ರಿ ಹಿಡಿದಿದೆ. ಆ ಹಲಸಿನಮರಕ್ಕೆ ಕಟ್ಟಿರುವ ಜಗುಲಿಯ ಇದುರಿನಲ್ಲೇ ಪಟ್ಟಾಭಿಷೇಕ ಪೀಠ. ಅದರ ನೆತ್ತಿಯ ಮೇಲೆ ದೇವಾಲಯದ ಛಾವಣಿಯ ಬೋದಿಗೆಯಲ್ಲಿ ಕಲ್ಲಿನ ಕಮಲವನ್ನು ಕೆತ್ತಿ, ಅದರ ನಡುವನೆ ಕೊಂಡಿಗೆ ಶ್ವೇತಚ್ಛತ್ರವನ್ನು ತೂಗುಹಾಕಿದ್ದಾರೆ. ಅದಕ್ಕೆ ಸಮೀಪವಾಗಿಯೇ ಅರಮನೆಗೆ ಹೋಗುವ ಗುಪ್ತಮಾರ್ಗದ ಗವಿಯೊಂದಿದೆ. ದೇವಾಲಯದ ಮುಂದಿನ ಒಳ ಅಂಕಣದಲ್ಲಿ ಸಾಲ್ಕಾಬದಿಗೆ ನಿರ್ಮಿತವಾದ ಮಂಟಪದಲ್ಲಿ ಪಟ್ಟಾಭಿಷೇಕಕ್ಕೆ ಆಹ್ವಾನಿತರಾದವರು ಕುಳಿತುಕೊಳ್ಳಲು ಪೀಠಗಳನ್ನು ಹಾಕಿದ್ದಾರೆ. ಅಲ್ಲಿಯೂ ಸಾಲಾಗಿ ಕಾವಲು ಭಟರು ನಿಂತಿದ್ದಾರೆ. ಆ ಅಂಕಣದಲ್ಲಿ ನೆರೆದವರು ಧರಿಸಿರುವ ಉಡುಪು, ತೊಡಪುಗಳ ವೈಭವ ವಿನಾ ಬೇರಾವ ಅಲಂಕಾರವೂ ಇಲ್ಲ. ಅಲ್ಲಿಯ ಪವಿತ್ರ ವಾತಾವರಣಕ್ಕೆ ಸರಿದೂಗುವ ಸರಳತೆಯೇ ಒಡ್ಡೋಲಗ ಮಾಡುತ್ತಿದೆ.

ಸ್ವಲ್ಪ ಹೊತ್ತಿನಲ್ಲೇ ನಾಯಕರು ಅರಮನೆಯಿಂದ ಹೊರಬಂದರೆಂಬುದನ್ನು ಸೂಚಿಸುವ ಕಹಳೆ, ಕಹಳೆ ಬತೇರಿಯಿಂದ ಕೂಗಿ ಹೇಳಿದ ಕೂಡಲೇ, ದೇವಾಲಯದ ಗೋಪುರದ ಮೂರನೆಯ ಅಂತಸ್ತಿನಲ್ಲಿರಿಸಿದ್ದ ಭೇರಿಯೂ ಮೊರೆದು, ಅವರ ಪರಿವಾರ ದೇವಾಲಯದ ಬಳಿ ಬಂದಿತೆಂದು ಮೊರೆದು ನುಡಿದಿತು. ಮಂಗಳವಾದ್ಯಧ್ವನಿ ತುಂಬಿಸೂಸಿ, ಪಟ್ಟಾಭಿಷೇಕ ಮುಹೂರ್ತ ಸನ್ನಿಹಿತವಾಯಿತೆಂದು ಸಾರಿತು.

ಆಶೀರ್ವಾದ ಮಂತ್ರ ಪಠಿಸುತ್ತಿರುವ ಬ್ರಾಹ್ಮಣರು, ಕನ್ನಡಿ, ಕಲಶ ಮೊದಲಾದ ಮಂಗಳ ದ್ರವ್ಯಗಳನ್ನು ಹಿಡಿದ ಸುವಾಸಿನಿಯರು, ರಾಜ ಲಾಂಛನಗಳನ್ನು ಹಿಡಿದ ಆಳುಗಳು, ಪರಾಕು ಹೇಳುವ ಭಟರಾಜರು, ಮತ್ತು ಆಪ್ತರು ಅಂಗರಕ್ಷಕರೊಂದಿಗೆ ನಾಯಕರು ಪ್ರವೇಶಿಸಿದರು. ನೆರೆದವರೆಲ್ಲರೂ ಒಮ್ಮೆ ಎದ್ದುನಿಂತು ಮುಜರೆ ಮಾಡಿ, ಕುಳಿತುಕೊಳ್ಳಬಹುದೆಂದು ಸೂಚನೆಯಾದ ಮೇಲೆ ಕುಳಿತುಕೊಂಡರು.

ಬಳಿಕ ಪಟ್ಟಾಭಿಷೇಕ ಶಿಲೆಯ ಮೇಲೆ ಕುಳಿತುಕೊಂಡ ನಾಯಕರಿಗೆ ಪುರೋಹಿತರು ಮಂತ್ರೋಕ್ತವಾಗಿ ಪಟ್ಟಾಭಿಷೇಕ ಸ್ನಾನಮಾಡಿಸಿ, ಮಡಿಯುಡಿಸಿ, ಆ ಸಮಾರಂಭದಲ್ಲಿ ಮಾಡಬೇಕಾದ ಹೋಮ ಹವನಗಳನ್ನು ಮುಗಿಸಿದ ಬಳಿಕ ನಾಯಕರು ಪುರೋಹಿತರಿತ್ತ ಕಿರೀಟವನ್ನು ಧರಿಸಿ, ರಾಜದಂಡ, ಪಟ್ಟದ ಕತ್ತಿಗಳನ್ನು ಹಿಡಿದು, ರಾಜ್ಯ ಸ್ವೀಕಾರದ ಪ್ರಮಾಣ ವಚನಗಳನ್ನು ಹೇಳಿದ ಬಳಿಕ ಪುರೋಹಿತರು ಅವರ ಹಣೆಗೆ ಸಿದ್ಧರ ಪ್ರಸಾದವಾದ ದೆಸೆಗಟ್ಟಿನ ಧೂಳಿತವನ್ನು ಹಚ್ಚಿ ಲಿಂಗಣ್ಣನಾಯಕರು ದುರ್ಗದ ದೊರೆಗಳಾದರೆಂದು ಸಾರಿದರು. ಕೂಡಲೇ ದೇವಾಲಯದ ಹೊರಗಡೆಯಲ್ಲಿದ್ದ ತೋಪುಗಳು ಹಾರಿ, ಕಹಳೆ, ಭೇರಿ, ಪಟಹ ಆನಕಗಳು ಒಮ್ಮೆಲೇ ಮೊರೆದು ಲೋಕಕ್ಕೆಲ್ಲಾ ಆ ವಾರ್ತೆಯನ್ನು ಸಾರಿದವು. ಆ ಬಳಿಕ ಮುತ್ತೈದೆಯರಿಂದ ಆರತಿಯಾದ ಬಳಿಕ, ನಾಯಕರು ಪಟ್ಟದ ಆನೆ, ಕುದುರೆ, ಕತ್ತಿ ಮೊದಲಾದ ರಾಜ ಲಾಂಛನಗಳಿಗೆ ಪೂಜಿಸಿದ ಮೇಲೆ, ನಾಯಕರು ಸಿದ್ಧೇಶ್ವರನ ಮಂಗಳಾರತಿ, ತೀರ್ಥ, ಪ್ರಸಾದಗಳನ್ನು ಸ್ವೀಕರಿಸಿದರು. ಆ ಬಳಿಕ ಒಬ್ಬೊಬ್ಬರಾಗಿ ಪ್ರಧಾನಿಯಿಂದ ಹಿಡಿದು ಕರಣಿಕರವರೆಗಿನ ಸಂಸ್ಥಾನದ ಅಧಿಕಾರಿಗಳು ಒಬ್ಬೊಬ್ಬರಾಗಿ ಬಂದು, ಹೊಸನಾಯಕರಿಗೆ ನಜರು ಮುಜರೆಗಳನ್ನರ್ಪಿಸಿ ಹೋದರು.

ಆ ಕಾರ್ಯವೆಲ್ಲವೂ ಮುಗಿದು ಬಳಿಕ ನಾಯಕರು, ಇಕ್ಕೆಲದಲ್ಲಿ ದಾಸಿಯರು ಚಾಮರವಿಕ್ಕುತ್ತಿರಲು, ಶ್ವೇತಚ್ಛತ್ರದಡಿಯಲ್ಲಿ ನಡೆದು ಬಂದು ದೇವಾಲಯದ ಹೊರವಳಯದಲ್ಲಿ ನಿಲ್ಲಿಸಿದ ಪಟ್ಟದ ಆನೆಯ ಮೇಲಿನ ಸುವರ್ಣ, ರತ್ನಖಚಿತವಾದ ಅಂಬಾರಿಯಲ್ಲಿ ಕುಳಿತು ಮೆರವಣಿಗೆ ಹೊರಟರು.

ಅವರು ದೇವಾಲಯದಿಂದ ಹೊರಬಂದಕೂಡಲೇ ಅವರಿಗೆ ನೂರಾರುಮಂದಿ ದೃಷ್ಟಿದೋಷ ನಿವಾರಣಾರ್ಥವಾಗಿ ಇಡಿಗಾಯಿಗಳ ಇಳೆ ತೆಗೆದ ಮೇಲೆ, ಮೆರವಣಿಗೆ ಮೇಲುದುರ್ಗದಿಂದ ಕೆಳದುರ್ಗದತ್ತ ಹೊರಟಿತು. ನಾಯಕರು ಏಕನಾಥೇಶ್ವರಿಯ ದೇವಾಲಯದ ಮುಂದಿನ ಕನಕವ್ವ ನಾಗತಿಯ ಕಂಭಕ್ಕೆ ಸಲಿಸಬೇಕಾದ ಪೂಜೆಯನ್ನು ಸಲಿಸಿ, ಅಲ್ಲಿಯೇ ಏಕನಾಥೇಶ್ವರಿ, ಭೂತನಾಥೇಶ್ವರ, ಗೋಪಾಲಸ್ವಾಮಿ, ವಿನಾಯಕ ಮೊದ

ಲಾದ ದೇವತೆಗಳ ಅರ್ಚಕರಿಂದ ರಾಜಾಶೀರ್ವಾದ, ತೀರ್ಥ, ಪ್ರಸಾದ ಗಳನ್ನೂ ಸ್ವೀಕರಿಸಿ, ಅಜ್ಜಿಯ ಬಾಗಿಲನ್ನು ದಾಟಿ, ದುರ್ಗವನ್ನು ಇಳಿಯು ಲಾರಂಭಿಸಿದರು.

ಮೆರವಣಿಗೆ ಒಂದೊಂದು ಕೋಟೆಯ ಸಾಲನ್ನು ದಾಟುವಾಗಲೂ, ನಗಾರಿ, ನೌಬತ್ತುಗಳು ಮೊಳಗಿ, ಫಿರಂಗಿಗಳು ಹಾರಿ, ಕೋಟೆಯ ಬಾಗಿಲ ಮೇಲೆ ನಿಂತ ದಾಸಿಯರು ನಾಯಕರ ಮೇಲೆ ಪುಷ್ಪವೃಷ್ಟಿ ಮಾಡಿದರು ಇಕ್ಕೆಲದಲ್ಲೂ ನಿಂತ ಜನಸ್ತೋಮ, ಹುಚ್ಚುಹಿಡಿದಂತೆ ಜಯಘೋಷವನ್ನು ಚೀರುತ್ತಿತ್ತು.

ಮೆರವಣಿಗೆ ಕೆಳದುರ್ಗಕ್ಕೆ ಉತ್ಸವಾಂಬಾ ದೇವಾಲಯದ ಬಳಿ ಬಂದು, ಅಲ್ಲಿ ನಾಯಕರು ನೆರೆದ ಬರಗೇರಮ್ಮ, ತಿಪ್ಪಲಗಟ್ಟಮ್ಮ, ಉತ್ಸ ವಾಂಬಾ ಮೊದಲಾದ ದೇವತೆಗಳ ಪೂಜೆಮಾಡಿ, ಪ್ರಸಾದ ಸ್ವೀಕಾರ ಮಾಡಿದ ಬಳಿಕ ಕೆಳದುರ್ಗದಲ್ಲಿ ಮೆರವಣಿಗೆ ಆರಂಭವಾಯಿತು.

ಮನೆ ಮನೆಯ ಮುಂದೆಯೂ ಮುತ್ತೈದೆಯರಿಂದ ಆರತಿಯಾ ಯಿತು. ಪುರ ಪ್ರಮುಖರಿಂದ ನಜರು—ಮುಜರೆಗಳಾಯಿತು. ಜನರ ಪ್ರೀತಿವಿಶ್ವಾಸವನ್ನು ಕಂಡು ನಾಯಕರ ಗಂಟಲು ಬಿಗಿದರೆ, ಆ ಮೆರವಣಿ ಗೆಯ ವೈಭವವನ್ನು ಕಂಡು ಜನರ ಹೃದಯವೂ ತುಂಬಿ ಬಂದಿತು. ಅವರ ಕಣ್ಣುಗಳೂ ತೇವವಾದವು. ಅಂಥ ಉತ್ಸವವನ್ನು ಕಂಡು ಎಷ್ಟು ವರ್ಷಗಳಾಗಿತ್ತೋ ದುರ್ಗದ ಜನಕ್ಕೆ. ತಮ್ಮ ಕಣ್ಣಿನ ಬರ ಹೀರುವಂತೆ ಇಕ್ಕೆಲದಲ್ಲೂ ಕಿಕ್ಕಿರಿದು ನಿಂತು ನೋಡಿದರು.

ಉತ್ಸವಾಂಬಾ ದೇವಾಲಯದಿಂದ ಪೂರ್ವಾಭಿಮುಖವಾಗಿ ಹೊರಟ ಮೆರವಣಿಗೆ ರಂಗಯ್ಯನ ಬಾಗಿಲನ್ನು ದಾಟಿ, ಉತ್ತರಾಭಿಮುಖವಾಗಿ ತಿರುಗಿ ವೆಂಕಟರಮಣಸ್ವಾಮಿಯ ದೇವಾಲಯದತ್ತ ಹೊರಟಿತು.

ಆ ದಿನ ಪಟ್ಟಾಭಿಷೇಕೋತ್ಸವದೊಂದಿಗೆ ವೆಂಕಟರಮಣಸ್ವಾಮಿಯ ತೇರಿನ ಉತ್ಸವವೂ ಇದ್ದುದರಿಂದ, ದಾರಿಯುದ್ದಕ್ಕೂ ಹತ್ತಾರು ಹಳ್ಳಿಯ ಜನ ನೆರೆದು, ತಮ್ಮ ಹೊಸದೊರೆಗೆ ಜಯಘೋಷದ ಕಾಣಿಗೆ ಅರ್ಪಿಸಿತು.

ವೆಂಕಟರಮಣಸ್ವಾಮಿಯ ತೇರಿನ ಉತ್ಸವವಾದ ಬಳಿದ ನಾಯ ಕರು, ಅಲ್ಲಿಯೇ ಬನ್ನಿ ಮುಡಿದು, ಮತ್ತೆ ಮೆರವಣಿಗೆಯಲ್ಲಿ ಸಿದ್ದಯ್ಯನ ಬಾಗಿಲ ಬಳಿ ಬಂದರು-

ಸಿದ್ದಯ್ಯನ ಬಾಗಿಲ ಮೇಲೆ ವಿಸ್ತಾರವಾದ, ರಾಜೋಚಿತ ಮಂಟಪ ನಿರ್ಮಾಣವಾಗಿತ್ತು. ಅಲ್ಲಿ ಕುಳಿತು ನಾಯಕರು, ಕೋಟೆಯ ಬಾಗಿಲ ಮುಂದೆ ನಡೆದ ಬಗೆ ಬಗೆಯ ಮಲ್ಲಯುದ್ಧ, ಶಸ್ತ್ರಯುದ್ಧ, ಪ್ರಾಣಿ ಕಾಳಗಗಳನ್ನು ನೋಡಿ, ಅದರಲ್ಲಿ ಭಾಗವಹಿಸಿದ್ದವರೆಲ್ಲರಿಗೂ ಉಡುಗೊರೆ ಯಿತ್ತು, ಅಲ್ಲಿಂದ ಹೊರಟು, ಮತ್ತೆ ಮೇಲುದುರ್ಗದಲ್ಲಿಯ ಅರಮನೆ ಯನ್ನು ಸೇರಿದರು.

ಆ ದಿನ ಸಂಜೆ ಬಣ್ಣದ ಚಾವಡಿಯಲ್ಲಿ ನಾಯಕರು ಸಾಂಪ್ರ ದಾಯಿಕವಾದ ಓಲಗಗೊಟ್ಟು ಸೈನಿಕರಿಂದ ಮುಜರೆ ಸ್ವೀಕಾರಮಾಡಿದರು. ಬಳಿಕ ಸೀಮೋಲ್ಲಂಘನದ ಶಾಸ್ತ್ರವಾದ ಬಳಿಕ, ನೆರೆದ ಮುಖ್ಯಸ್ಥರಿಗೆಲ್ಲಾ ನಾಯಕರೇ ಉಡುಗೊರೆ ಶಮೀಪತ್ರವನ್ನು ಕೊಟ್ಟ ಬಳಿಕ ಸಭೆ ಬರ ಖಾಸ್ತಾಯಿತು.

ಸಭೆ ಮುಗಿದರೂ ಜನರ ಆನಂದ ಪ್ರದರ್ಶನ ರಾತ್ರಿಯೆಲ್ಲಾ ನಡೆ ಯಿತು. ಆ ದಿನ ದುರ್ಗದಲ್ಲಿ ನಡೆದ ದೀಪೋತ್ಸವದ ವೈಭವವನ್ನು ದುರ್ಗದ ಜನರಷ್ಟೇ ಅಲ್ಲ, ತಳಕು ನನ್ನಿವಾಳ ಮೊದಲಾದ ದೂರದೂರಿನ ಜನಗಳೂ ತಮ್ಮ ಊರಿನ ಗುಡ್ಡಗಳ ಮೇಲೆ ನಿಂತು ನೋಡಿ, ತಾವೂ ದುರ್ಗದಲ್ಲಿದ್ದಂತೆಯೇ ನಲಿದರು. ಆ ಗುಡ್ಡಗಳ ಮೇಲಿನ ದೀಪೋತ್ಸವ ವನ್ನು ಕಂಡು ದುರ್ಗದ ಜನಗಳು ಕೇಕೆ ಹಾಕಿದರು. ಸುತ್ತಲ ಗುಡ್ಡಗಳ ಮುಡಿಯ ಮೇಲೆಲ್ಲಾ ಸಾಲುದೀಪಗಳು ಉರಿದು ದುರ್ಗಕ್ಕೆ ಬೆಳಕಿನ ಕೋಟೆಯನ್ನು ಕಟ್ಟಿದಂತಿತ್ತು.

ಆ ದಿಪೋತ್ಸವ, ಲಿಂಗಣ್ಣನಾಯಕರು ನಾಯಕರಾದುದರಿಂದ ದುರ್ಗದ ಪ್ರಜೆಗಳ ಹೃದಯದಲ್ಲಿ ಮೂಡಿದ ಹೊಸ ಆಸೆಯ ಬೆಳಕಿನ ಕುಣಿತದಂತಿತ್ತು.

ಕತ್ತಲು ಮುಗಿದು ಹಗಲು ಬಂದಿತು ಎಂದುಕೊಂಡರು ಜನ—ಆ ಬೆಳಕಿನಲ್ಲಿ.

ಬಯಲುನಾಟಕ, ಕುಣಿತ, ಕೋಲಾಟ, ಲಾವಣಿಗಳ ರೂಪದಲ್ಲಿ ಜನ ತಮ್ಮ ಹರ್ಷವನ್ನು ಹಾಡಿನ ಹೊನಲಾಗಿ ಹರಸಿದರು.

ಲಿಂಗಣ್ಣನಾಯಕರು ಮುಮ್ಮಡಿ ಮದಕರಿನಾಯಕರೆಂದು ಪಟ್ಟಾಭಿ

ಷೇಕ ನಾಮಕರಣ ಮಾಡಿಸಿಕೊಂಡು, ದುರ್ಗದ ರಾಜ್ಯದ ಒಡೆಯ ರಾದರು.

ಎಲ್ಲರ ಕಣ್ಣು ಆ ಹಿಗ್ಗಿನಿಂದ ಹೂವಾಗಿ ಅರಳಿದವು. ದಳವಾಯಿ ಮುದ್ದಣ್ಣನ ಕಣ್ಣು ಮಾತ್ರ ಅರೆಮುಚ್ಚಿ ಎಲ್ಲವನ್ನೂ ನೋಡಿ, ತನಗೆ ತಾನೇ ಹೇಳಿಕೊಂಡಿತು.

"ನಡೆಯಲಿ—ಎರಡು ದಿನದ ಆಟ"

ಹಾಗೆಯೇ ಅವನ ಹೃದಯ ಮುಂದೊಂದು ದಿನ ತಾನು ಅದೇ ರೀತಿ ವೈಭವದಲ್ಲಿ ಮೆರೆಯಬಹುದೆಂಬುದನ್ನು ಊಹಿಸಿ ನಲಿಯಿತು.

## ೨

ಲಿಂಗಣ್ಣನಾಯಕ ದುರ್ಗದ ದೊರೆಯಾದುದರಿಂದ ಎಲ್ಲರಿಗೂ ಸಂತೋಷವಾಗಿದ್ದರೂ, ಲಿಂಗಣ್ಣನಾಯಕನಿಗೆ ಮಾತ್ರ ಆ ಸಂತೋಷ ವಿರಲಿಲ್ಲ. ಸುತ್ತ ನೆರೆದ ರಾಜ ಭೋಗಗಳ ಸಂತೆಯಲ್ಲೂ ಅವನ ಚಿತ್ತ ಉದಾಸೀನವಾಗಿತ್ತು. ಕೈಗೊಬ್ಬರು ಕಾಲಿಗೊಬ್ಬರು ಆಳುಗಳಿದ್ದರೂ, ನಿತ್ಯದ ಆಡಳಿತದ ವಿಷಯಗಳಲ್ಲಿ ಆತನಿಂದ ಸಲಹೆ ಪಡೆಯಲೆಂದು ಹತ್ತಾರು ಜನ ಬಂದು ಹೋಗುತ್ತಿದ್ದರೂ, ಆತನಿಗೇನೋ ತಾನೊಬ್ಬನೇ ಒಂಟಿ ಎಂದೇ ತೋರುತ್ತಿತ್ತು. ಪಟ್ಟಕ್ಕೆ ಬರುವ ಕೆಲವು ದಿನಗಳ ಮುಂಚೆ, ಹಿಂದಿದ್ದ ನಿರಸತೆ, ಜುಗುಪ್ಸೆಗಳು ಕಳೆದುಹೋಗಿ, ಸೇಡಿನ ದಳ್ಳುರಿ ಅವನೆದೆಯಲ್ಲಿ ದಹಿಸಿ ಸ್ಥಿರರೂಪವೇ ಇಲ್ಲದ ಅವನ ಬಾಳಿ ಗೊಂದು ಗುರಿಯಿತ್ತು. ಮತ್ತೆ ಅವನು ಸುತ್ತಲ ಬಾಳಿನಲ್ಲಿ ಆಸಕ್ತಿ ವಹಿಸುವಂತೆ ಮಾಡಿತ್ತು. ಆ ಉದ್ದೇಶಸಾಧನೆಗೆಂದೇ ಅವನು ಸಿಂಹಾ ಸನದ ಹೊರೆಹೊರಲು ಒಪ್ಪಿಕೊಂಡಿದ್ದ. ಆದರೆ ಉಗ್ರ ಚನ್ನವೀರ ಸ್ವಾಮಿಗಳು, 'ಸಿಂಹಾಸನ ಪ್ರತೀಕಾರಾಸ್ತ್ರವಲ್ಲ; ಪಟ್ಟಾಭಿಷೇಕ ಪ್ರತೀ ಕಾರ ತೃಷಾಗ್ನಿಗೆ ಆಜ್ಯಾಹುತಿಯಲ್ಲ' ಎಂದು ಹೇಳಿ, ಸೇಡಿನ ಜಾಡಿನಲ್ಲಿ ಓಡುತ್ತಿದ್ದ ಬುದ್ಧಿಗೆ ಅಡ್ಡನಿಂತು ಮತ್ತೆ ಅವನ ಬೆನ್ನೆಲುಬನ್ನು ಮುರಿದು, ಅವನ ಬಾಳನ್ನು ಗೊತ್ತರಿಯದ ವರ್ತಮಾನ, ಗುರಿಯರಿಯದ ಭವಿಷ್ಯದ ಬಂದಿಯನ್ನಾಗಿ ಮಾಡಿದ್ದರು.

ನಿಂತಲ್ಲಿ ಕುಳಿತಲ್ಲಿ "ಇದು ಏಕೆ" "ಇದರಿಂದ ಏನು ಸಾರ್ಥಕ" ಎಂಬ ಉತ್ತರ ಕಾಣದ ನಿತ್ಯ ಪ್ರಶ್ನೆ ಬೆಂತರನಂತೆ ಅವನ ಮಿದುಳನ್ನು ಕಾಡುತ್ತಿತ್ತು. ಕೆಲಸ ಬೇಕೆನಿಸಿದವನಿಗೆ ರಾಜ್ಯಾಡಳಿತದಲ್ಲಿ ಮೈ-ಮಿದುಳು ಮುಳುಗುವಷ್ಟು ಕೆಲಸವಿತ್ತು; ಸುಖೋಪಭೋಗ ಬಯಸಿದವನಿಗೆ ಆ ಸುಖವಿಲಾಸದ ಸುಪ್ಪತ್ತಿಗೆಯನ್ನೇ ಹಾಸಲು ಸಿದ್ಧವಾಗಿತ್ತು ಅರಮನೆ; ಹೆಬ್ಬಯಕೆಯ ಹಕ್ಕಿ ಹಾರಲು ದುರ್ಗಾಧಿಪತ್ಯದ ಮುಗಿಲು ಸಾಕಷ್ಟು ವಿಶಾಲವಾಗಿತ್ತು. ಆದರೆ ಅದಾವುದೂ ಇಲ್ಲದ ಲಿಂಗಣ್ಣನಾಯಕನ ಪಾಲಿಗೆ ಮಾತ್ರ ಅದು ಸೆರೆಮನೆಯಾಗಿತ್ತು.

ಯಾವ ಗೊತ್ತುಗುರಿಯೂ ಇಲ್ಲದೆ, ನಿತ್ಯ ಡೋಲಾಯಮಾನವಾದ ಚಿತ್ತದಲ್ಲಿ, ತನ್ನದಾದ ಅರಮನೆಯಲ್ಲಿಯೂ, ಯಾರದೋ ಪರರ ಮನೆಯಲ್ಲೆಂಬಂತೆ ಅಲೆವ ಲಿಂಗಣ್ಣನಾಯಕನನ್ನು ಕಂಡು, ಬಯಸಿ ಬಯಸಿ ಅವನನ್ನು ಪಟ್ಟಕ್ಕೆ ತಂದ ಅವನ ಹಿತೈಷಿಗಳಿಗೆ ಎದೆಯನ್ನು ಇರಿದಂತಾಗುವುದು. ಆದರೆ ನಾಯಕನ ಅನಿಶ್ಚಿತ ಚಿತ್ತವೃತ್ತಿಯನ್ನೇ ಉಪಯೋಗಪಡಿಸಿಕೊಂಡು ದಿನ ದಿನಕ್ಕೆ ಗರಿಕೂಡಿ ಬಲವಾಗುತ್ತಿರುವ ದಳವಾಯಿ ಮುದ್ದಣ್ಣನನ್ನು ಕಂಡು ಅವರಿಗೆ ಹೆದರಿಕೆಯೂ ಆಗುವುದು.

ನಾಯಕನ ನಿರುತ್ಸಾಹ ಮುದ್ದಣ್ಣನ ಹೆಬ್ಬಯಕೆಯ ಪಾಲಿಗೆ, ತಾನೇ ಬೆಳೆಯುವ ಕಳೆಗೆ ಗೊಬ್ಬರ ಹಾಕಿ ನೀರು ಕಟ್ಟಿದಂತಾಗಿತ್ತು. ಅವರು ಮಾಡಿದುದಕ್ಕೆಲ್ಲ ನಾಯಕನ ಸಮ್ಮತಿ ದೊರಕದಿದ್ದರೂ ಪ್ರತಿಭಟನೆ ಇರುತ್ತಿರಲಿಲ್ಲ. ಇದು ಮುದ್ದಣ್ಣ ಬಯಸಿದ ಪರಿಸ್ಥಿತಿ. ತನ್ನ ದಾರಿಯಲ್ಲಿ ನಾಯಕ ಅಡ್ಡಬಂದರೆ ಅವನ್ನು ಮುರಿದಾದರೂ ಮುಂದುವರಿಯಬೇಕೆಂಬ ಅವನ ಹಟ, ಪ್ರತಿಭಟನೆಯೇ ಇಲ್ಲದೆ ಬೀಗುತ್ತಿತ್ತು. ನಾಯಕನ ನಿರುತ್ಸಾಹವನ್ನು ಕಂಡುಕೊಂಡ ಮುದ್ದಣ್ಣ ಯಾವ ಕೆಲಸವನ್ನಾದರೂ ಮಾಡಿ ಮುಗಿಸಿದ ಬಳಿಕ ನೆಪಕ್ಕೆಬಂದಂತೆ ನಾಯಕನ ಕಿವಿಯ ಮೇಲೆ ಹಾಕಿ ಸುಮ್ಮನಾಗುತ್ತಿದ್ದ. ನಾಯಕನೂ ನನ್ನನ್ನು ಕೇಳದೆ ಏಕೆ ಮಾಡಿದೆ ಎಂದು ಟೀಕಿಸುತ್ತಿರಲಿಲ್ಲ. ಇದರಿಂದಾಗಿ ಮುದ್ದಣ್ಣನ ಸೆರಗು ಕಂಡರೂ ಲಿಂಗಣ್ಣನಾಯಕನ ಮನಸ್ಸಿನಲ್ಲಿ ಅಸಹ್ಯ ಕಡೆಯುತ್ತಿದ್ದರೂ, ಸುತ್ತಲಿನವರೆಲ್ಲರಿಗೂ ನಾಯಕರು ದಳವಾಯಿಯ ಕೈಗೊಂಬೆ; ಆತ ಪಟ್ಟಕ್ಕೆ ಬಂದದ್ದು

ಮುದ್ದಣ್ಣನ ಕೃಪೆಯಿಂದ, ಆದ್ದರಿಂದ ನಾಯಕ ಬರೀ ಉತ್ಸವಮೂರ್ತಿ, ಮುದ್ದಣ್ಣನೇ ಮೂಲವಿಗ್ರಹ ಎಂಬ ಭಾವನೆ ಬಂದು, ದಿನದಿನಕ್ಕೆ ಮುದ್ದಣ್ಣನ ಮಾತು ರಾಜಾಜ್ಞೆ ಎಂಬ ಬುದ್ಧಿ ಬೆಳೆಯಲಾರಂಭಿಸಿತು. ಮುದ್ದಣ್ಣನೂ ಇದು ಸುಳ್ಳು ಎಂದು ಹೇಳದೆ, ತನ್ನ ಗುರಿಸಾಧನೆಗೆ ಈ ಪರಿಸ್ಥಿತಿಯನ್ನು ಉಪಯೋಗಿಸಿಕೊಳ್ಳುತ್ತಿದ್ದ. ಇದು ನಾಯಕನ ನಿರುತ್ಸಾಹ ತುಂಬಿದ ಕಣ್ಣುಗಳಿಗೆ ಕಾಣದಿದ್ದರೂ, ಮುದ್ದಣ್ಣನ ಚಲನವಲನವನ್ನು ಹದ್ದಿನ ಕಣ್ಣಿನಿಂದ ನಿರೀಕ್ಷಿಸುತ್ತಿದ್ದ ಪರಶುರಾಮಪ್ಪ, ಭರಮಣ್ಣನವರ ಕಣ್ಣುಗಳಿಗೆ ಕಾಣದೆ ಹೋಗಲಿಲ್ಲ. ಇದನ್ನು ಕಂಡು ಗಾಬರಿಯಾಗಿ ಅವರು ನಾಯಕನಿಗೇ ಹೇಳಿದರು.

"ನೀವು ಹೀಗಿದ್ದರಾಗದು."

"ಏಕೆ? ಏನಾಗಿದೆ? ಎಲ್ಲವೂ ಸರಿಯಾಗಿ ನಡೆಯುತ್ತಿಲ್ಲವೇ?"

"ಎಲ್ಲವೂ ನಡೆಯುತ್ತಿದೆ ನಿಜ. ಆದರೆ ಹೇಗೆ ನಡೆಯಬೇಕೋ ಹಾಗೆ ನಡೆಯುತ್ತಿಲ್ಲ?"

"ಅಂದರೆ—"

–ಅವರ ಮಾತು ಅರ್ಥವಾಗದವನಂತೆ ಕೇಳಿದ ಲಿಂಗಣ್ಣನಾಯಕ.

"ಅಂದರೆ, ನೀವು ನಾಯಕರಾಗಿದ್ದು ರಾಜ್ಯ ಹೇಗೆ ನಡೆಯಬೇಕಾಗಿತ್ತೋ ಆ ರೀತಿ ನಡೆಯುತ್ತಿಲ್ಲ."

"ಇರಬಹುದು. ನಾನು ಮೊದಲೇ ಹೇಳಲಿಲ್ಲವೇ—ಈ ರಾಜ್ಯಾಡಳಿತ ಕಾರ್ಯಕ್ಕೆ ನಾನು ಯೋಗ್ಯನಲ್ಲವೆಂದು."

—ಅವರು ಏನು ಹೇಳುತ್ತಿದ್ದಾರೆ, ಏಕೆ ಹೇಳುತ್ತಿದ್ದಾರೆ ಎಂಬುದನ್ನು ತಿಳಿದುಕೊಳ್ಳುವ ಆಸಕ್ತಿಯೂ ಇಲ್ಲವೆಂಬಂತೆ ನೀರಸವಾದ ಧ್ವನಿಯಲ್ಲಿ ಹೇಳುವನು—ಅವನ ಮಾತು ಅವನನ್ನು ಕೇಳಿ, ಮಾತನಾಡಿಸಿದವರ ಕರುಳು ಕುದಿಯುವಂತೆ.

"ನಮ್ಮ ಅಭಿಪ್ರಾಯ ಅದಲ್ಲ. ತಾವು ತಪ್ಪು ತಿಳಿದುಕೊಳ್ಳಬಾರದು."

"ಹಾಗಾದರೆ ಏನು ಆಗಬಾರದುದು ಆಗಿವೆ, ಏನಾಗಬೇಕಿತ್ತು ಎಂದಾದರೂ ಹೇಳಿ."

"ತಾವು ಮುದ್ದಣ್ಣನ ಸ್ವಭಾವವನ್ನು ತಿಳಿದೂ ಅವನು ಪ್ರಬಲಿಸಲು ಅವಕಾಶ ಕೊಡಬಾರದು."

"ನಿಜ. ಆತ ತಾನೇ ಪ್ರಬಲಿಸುತ್ತಿದ್ದಾನೆ—ನಮ್ಮ ಪ್ರೋತ್ಸಾಹ ವಿಲ್ಲದೆಯೇ. ಅದಕ್ಕೇನು ಮಾಡಬೇಕು?"

"ನೀವು ಅವನಿಗೆ ಪ್ರೋತ್ಸಾಹಕೊಡುತ್ತಿಲ್ಲವೆಂಬುದು ನಿಜ. ಆದರೆ ಆಡಳಿತ ವಿಚಾರದಲ್ಲಿ ನಿಮ್ಮ ನಿರುತ್ಸಾಹವೇ ಅವನ ಪಾಲಿಗೆ ಪ್ರೋತ್ಸಾಹ ವಾಗದಂತೆಯೂ ನೀವು ಎಚ್ಚರ ವಹಿಸಬೇಕು. ದುರ್ಗವಾಳುತ್ತಿರುವವರು ನೀವು, ಅವನಲ್ಲ ಎಂಬುದು ಅವನಿಗೂ ಅರಿವಾಗುವಂತೆ ನಡೆದುಕೊಳ್ಳ ಬೇಕು. ಹೀಗೇ ಆಗಬೇಕೆಂದು ನೀವು ಹೇಳಬೇಕು."

"ಒಂದು ವೇಳೆ ಆತ ನಮ್ಮ ಮಾತು ಕೇಳದಿದ್ದರೆ—"

"ಕೇಳುವಹಾಗೆ ಮಾಡಬೇಕು ಪ್ರಭು. ಅಲ್ಲಿಗೂ ಕೇಳದಿದ್ದರೆ, ನಾಯಕರ ಮಾತು ಮೀರಿದವರ ತಲೆ ಭುಜದ ಮೇಲೆ ಬಹುಕಾಲ ನಿಲ್ಲು ವುದಿಲ್ಲ ಎಂಬುದು ಮನವರಿಕೆಯಾಗುವಂತೆ ನೀವು ಬಿಗಿಯಾಗಬೇಕು."

"ಅಲ್ಲಿಗೂ ನಮ್ಮ ಮಾತು ಕೇಳದಿದ್ದರೆ ತಲೆಯನ್ನೇ ತೆಗೆಯಬೇಕು- ಅಲ್ಲವೇ?"

—ವಿಚಿತ್ರ ಧ್ವನಿಯಲ್ಲಿ ಆ ಪ್ರಶ್ನೆಯನ್ನು ಕೇಳಿದ ಲಿಂಗಣ್ಣ ನಾಯಕ.

"ಅಗತ್ಯವಿದ್ದರೆ ಅದಕ್ಕೂ ಹಿಂಜರಿಯಬಾರದು."

—ಭರಮಣ್ಣ ಸತ್ಯವನ್ನು ಸಾರುವ ನಿಷ್ಠುರ ಧ್ವನಿಯಲ್ಲಿ ಹೇಳಿದ.

"ನಮಗೇನೋ ಆ ಕೆಲಸ ಅಪ್ರಿಯವಾಗಿಲ್ಲ. ಆದರೆ ನಿಮ್ಮ ಗುರು ಗಳೇ ಹೇಳಲಿಲ್ಲವೇ—ಆ ರೀತಿ ಮಾಡಿದರೆ ಅದಕ್ಕೆ ತಮ್ಮ ಬೆಂಬಲವಿಲ್ಲ ಎಂದು. ಅವರು ನಿಮ್ಮ ಗುರುಗಳು. ಅವರ ಮಾತು ನಿಮ್ಮ ಮಾತೇ ಎಂದು ತಿಳಿದುಕೊಂಡಿದ್ದೆ. ಈಗ ಅವರೂ ನಿಮ್ಮ ಹಾಗೆಯೇ ಹೇಳುವ ರೇನೋ ಕೇಳಿ."

—ಎಂದು ತನ್ನ ಆ ಮಾತಿಗೆ ಅವರು ಮರುಮಾತು ಹೇಳಲೂ ಅವಕಾಶಕೊಡದೆ ಎದ್ದುಹೋದ. ಅವನು ಎದ್ದುಹೋದ ರೀತಿಯನ್ನು ಕಂಡು ಅವರಿಗೆ ತಮ್ಮ ಮಾತನ್ನು ತಮ್ಮ ಮುಖಕ್ಕೇ ರಾಚಿದಂತಾಗಿ,

ಕಾಲ ಕೆಳಗಿನ ನೆಲ ಕುಸಿದಂತಾಯಿತು. ಹತಾಶರಾಗಿ ಅರಮನೆಯಿಂದ ಅವರು ಹಿಂದಿರುಗಿದರು. ಅಂದಿನಿಂದ ಮತ್ತೊಮ್ಮೆ ಅವರ ಮೊಗದ ಮೇಲೆ ಚಿಂತೆಯ ಭೂತ ರಣಗುಣಿತ ಕುಣಿಯಲಾರಂಭಿಸಿತು.

ಲಿಂಗಣ್ಣನಾಯಕನಿಗೆ ಪಟ್ಟವಾದಂದು ಗೆಲುವಾದ ಅವರ ಮೊಗದ ಮೇಲಿನ ಕಳೆ ದಿನದಿನಕ್ಕೆ ಬಾಡಿ ಕುಂದುತ್ತಿರುವುದು ಸ್ವಾಮಿಗಳ ಕಣ್ಣಿಗೂ ಕಾಣದೆ ಹೋಗಲಿಲ್ಲ. ಇವರಾಗಿ ತಮ್ಮ ಚಿಂತೆಯ ಕಾರಣವನ್ನು ಅವರಲ್ಲಿ ತೋಡಿಕೊಳ್ಳದಿದ್ದರೂ, ಕಡೆಗೊಂದು ದಿನ ಅವರೇ ಕೇಳಿದರು—

"ಏನು ಪರಶುರಾಮಪ್ಪನವರೇ—ನಿಮಗೂ ಚಿಂತೆಗೂ ಘಟಸ್ಫೋಟ ವಾಯಿತೆಂದಿದ್ದೆವು. ಆದರೆ ಈಗ ನೋಡಿದರೆ ಮತ್ತಾವುದೋ ಹೊಸ ಚಿಂತೆಯ ಕೈಹಿಡಿದಂತೆ ಕಾಣುತ್ತದೆಯಲ್ಲ."

"ಗುರುಗಳು ಒಮ್ಮೆ ಭಕ್ತಿಯ ವಿಚಾರ ಹೇಳುತ್ತ ಬಸವಣ್ಣನವರ ಒಂದು ಮುತ್ತಿನಂಥ ಮಾತನ್ನು ಹೇಳಿದ್ದಿರಿ........"

"ಯಾವ ಮಾತು ?"

"ಭಕ್ತಿಯೆಂಬುದ ಮಾಡಬಾರದಯ್ಯಾ. ಹೋದತ್ತ ಬಂದತ್ತ ಕೊಯ್ಯುವುದು ಗರಗಸದಂತೆ" ಎಂದು ಬಸವಣ್ಣನವರು ಭಕ್ತಿಗೆ ಹೇಳಿದ ಮಾತು ಈ ರಾಜಕಾರಣಕ್ಕೂ ಅನ್ವಯಿಸುತ್ತದೆ ಎಂದು ನಾನು ತಿಳಿದಿರ ಲಿಲ್ಲ. ಈಗ ನೋಡಿದರೆ ಇದೂ ಭಕ್ತಿಯ ಅಣ್ಣನೋ, ತಮ್ಮನೋ ಎಂದೇ ಕಾಣುತ್ತದೆ. ಏನಾದರೂ ನಮಗೆ ಮಾತ್ರ ಚಿಂತೆ ತಪ್ಪುವಂತೆ ಕಾಣುವುದಿಲ್ಲ."

—ನಿರಾಶೆಯ ಆಳದಲ್ಲಿ ಮುಳುಗಿ, ಎದೆಯ ವ್ಯಥೆಯನ್ನೆಲ್ಲಾ ಮಾತಾಗಿ ಹರಿಸಿ ಹೇಳಿದ ಪರಶುರಾಮಪ್ಪ.

"ನೀವನ್ನುವುದೇನೂ ಸುಳ್ಳಲ್ಲ. ನಿಮ್ಮಂಥವರ ರಾಜಕಾರಣ, ಶರಣರ ಭಕ್ತಿ ಎರಡೂ ಒಂಪೇ ಜಾತಿಯದೇ. ಈಗೇನಾಯಿತು ?"

"ಏನಾಗಬಾರದೆಂದು ಬಯಸಿದ್ದೆವೋ, ಏನಾಗಬಹುದೆಂದು ಹೆದರಿದ್ದೆವೋ—ಅದೇ ಆಗುತ್ತಿರುವಂತಿದೆ."

"ಅಂದರೆ............"

—ಪರಶುರಾಮಪ್ಪನ ಮಾತು ಕೇಳಿ, ಗುರುಗಳ ಚಿತ್ತವೂ ಕಲಕಿ ಕೊಂಚ ಉದ್ವಿಗ್ನರಾಗಿ ಕೇಳಿದರು.

"ಲಿಂಗಣ್ಣನಾಯಕರು ಪಟ್ಟಕ್ಕೆ ಬಂದೂ ಮುದ್ದಣ್ಣನೇ ನಾಯಕ ನಾದಂತಿದೆ ಇಂದಿನ ಆಡಳಿತ."

"ಈ ಮಾತನ್ನು ನೀವು ನಾಯಕರನ್ನು ಎಚ್ಚರಿಸಿ ಹೇಳಬೇಕಾ ಗಿತ್ತು."

"ಹೇಳಿಯಾಯಿತು."

"ನೀವೇ ಹೇಳಿದಿರಾ? ಅದಕ್ಕೆ ಅವರು ಏನು ಹೇಳಿದರು?"

"ನಮ್ಮ ಮಾತು ಕೇಳಿದರು. ಆದರೆ ಅವರಿಗೆ ಏನು ಹೇಳುವುದೂ ಇಷ್ಟವಿದ್ದಂತಿಲ್ಲ. ಏನೋ ನಮ್ಮ-ನಿಮ್ಮ ಬಲವಂತಕ್ಕಾಗಿ ಪಟ್ಟಕ್ಕೆ ಬಂದವರ ಹಾಗೆ ಮಾತನಾಡುತ್ತಾರೆ. ಆಡಳಿತದಲ್ಲಿರಲಿ, ನಮ್ಮ ಮಾತಿ ನಲ್ಲೂ ಅವರಿಗೆ ಆಸಕ್ತಿಯಿದ್ದಂತಿಲ್ಲ."

—ದಳವಾಯಿ ಭರಮಣ್ಣ ಕೊಂಚ ಖಾರವಾಗಿ ಹೇಳಿದ.

"ಹಾಗೆಂದು ನೀವು ಬೇಸರಗೊಂಡರೆ ನಿಮ್ಮ ಶ್ರದ್ಧೆಗೇನು ಬೆಲೆ? ಶ್ರದ್ಧೆಗೆ, ಭಕ್ತಿಗೆ ಸ್ವಾಭಿಮಾನದ ಬೆಲೆ ಕಲ್ಪಿಸಬಾರದು ದಳವಾಯಿಗಳೇ. ಅವರೇನು ಹೇಳಿದರು ಹೇಳಿ?"

—ಗುರುಗಳು ಕೆರಳಿದ ಭರಮಣ್ಣನನ್ನು ಸಂತೈಸುತ್ತಾ ಕೇಳಿದರು. ಅವರ ಪ್ರಶ್ನೆಗೆ ಉತ್ತರವಾಗಿ ಪರಶುರಾಮಪ್ಪನೇ ತಮ್ಮ ತಮ್ಮಲ್ಲಿ ನಡೆದ ಮಾತುಗಳನ್ನು ಹೇಳಿ—

"ಅವರು ಹೀಗಿರುವ ತಪ್ಪಿನ ಹೊಣೆಗಾರಿಕೆ ನಮ್ಮದೇ ಎಂಬಂತೆ ಮಾತನಾಡಿದರು. ನಿಮ್ಮ ಮಾತು ಕೇಳಿ ಪ್ರತೀಕಾರದ ಉದ್ದೇಶವನ್ನು ಕೈಬಿಟ್ಟ ಅವರಿಗೆ ಬಾಳಿನಲ್ಲಿ ಬೇರಾವ ಗುರಿಯೂ ಇದ್ದಂತೆಯೇ ಕಾಣು ವುದಿಲ್ಲ. ಇದಕ್ಕೆ ಹೇಗೆ ಮಾಡಬೇಕೋ, ಏನು ಮಾಡಬೇಕೋ ನಮಗೂ ಯಾವುದೂ ತೋಚುತ್ತಿಲ್ಲ. ಈ ಆಕಸ್ಮಿಕ ಕತ್ತಲಲ್ಲಿ ನೀವೇ ದಾರಿ ತೋರಿಸಬೇಕು."

—ಎಂದ ಅಸಹಾಯನಾಗಿ. ಆತನ ಮಾತು ಕೇಳಿ ಗುರುಗಳು ಒಂದು ಗಳಿಗೆ ಅರೆಗಣ್ಣು ಮುಚ್ಚಿ ಮೌನವಾಗಿ ಕುಳಿತಿದ್ದು, ಬಳಿಕ ನಿಟ್ಟುಸಿರು ಬಿಟ್ಟು, ನೀರಸವಾದ ಸಣ್ಣ ನಗು ನಕ್ಕು ಹೇಳಿದರು—

"ನಮ್ಮದು ಎಂಥ ಹುಚ್ಚುತನ ಪರಶುರಾಮಪ್ಪನವರೇ. ಪರಮೇಶ್ವರನ ಚಿತ್ತ ಅಲಂಘ್ಯವಾದುದು ಎಂದು ತಿಳಿದು ತಿಳಿದೂ, ನಾವು ಏನೋ ಮಾಡುತ್ತೇವೆ, ಏನೋ ತಡೆಯುತ್ತೇವೆ, ನಮ್ಮ ಬುದ್ಧಿಗೆ ದೈವ ಚಿತ್ತವೂ ಮಣಿಯಬೇಕು ಎಂದುಕೊಳ್ಳುತ್ತೇವಲ್ಲಾ–ಎಂಥ ಮೂರ್ಖರು ನಾವು ! ನಾವು ಎಷ್ಟು ತಿಳಿದಿದ್ದೇವೆ ಎಂದುಕೊಂಡು ಅಹಂಕಾರ ಪಡುತ್ತೇವೋ ನಮ್ಮ ತಿಳಿವು ಅಷ್ಟೂ ಅಲ್ಪ ಎಂಬುದನ್ನು ಶಿವ ಹೆಜ್ಜೆ ಹೆಜ್ಜೆಗೂ ತೋರಿಕೊಡುತ್ತಾನೆ. ಕುಣಿಯುವವರು ನಾವು ಎಂದುಕೊಂಡು ಕುಣಿದಾಡಿದುದಕ್ಕೆ ನಮಗೆ ದಕ್ಕುವ ಫಲ ದಣಿದ ಕಾಲೊಂದೇ. ಕಡೆಗೆ ನಡೆಯುವುದು ಆತನ ಇಚ್ಛೆಯೇ. ಏನಾಗಬೇಕೋ ಆಗಲಿ."

—ಗುರುಗಳಾಡಿದ ಆ ಮಾತಿನಲ್ಲಿ ಹಿಂದೆಂದೂ ಅವರ ಮಾತಿನಲ್ಲಿ ಕಂಡುಬರದ ಹೃದಯ ವಿದ್ರಾವಕವಾದ ನಿರಾಶೆಯನಂಜು ಹೊಗೆಯಾಡುತ್ತಿತ್ತು. ಅದು ಅರಿವಾಗಿ,ಏನೋ ಪರಶುರಾಮಪ್ಪನಿಗೆ ಕಣ್ಣಿನೆದುರೇ ಜ್ವಾಲಾಮುಖಿ ಬಾಯ್ದೆರೆದಂತಾಗಿ ಗಾಬರಿಯಾಯಿತು. ಆ ದಿಗಿಲಿನಲ್ಲೇ ಕೇಳಿದ.

"ತಮ್ಮ ಮಾತು ನನಗೆ ಅರ್ಥವಾಗಲಿಲ್ಲ."

"ಎಷ್ಟೋ ವೇಳೆ ಅರ್ಥವಾಗುವುದಕ್ಕಿಂತ ಅರ್ಥವಾಗದಿರುವುದೇ ಮೇಲು, ಪರಶುರಾಮಪ್ಪನವರೇ. ಅರ್ಥಮಾಡಿಕೊಂಡ ಬುದ್ಧಿ ಮುಂಬರುವ ಅಪಾಯವನ್ನು ಕಾಣದೆ, ಆ ಗಳಿಗೆಯಿಂದಲೇ ತಲ್ಲಣಿಸ ತೊಡಗುತ್ತದೆ. ಆ ತಲ್ಲಣದಿಂದ ಉಪಯೋಗವೂ ಆಗುವುದಿಲ್ಲ. ನಮಗೇ ಒಂದು ಗಳಿಗೆ ಚಪಲವಾಗಿತ್ತು. ದ್ವೇಷವನ್ನುಂಡು ಬೆಳೆಯುವ ದೋಷದ ವಿಷಬಳ್ಳಿಯನ್ನು ಎಲ್ಲಿಯಾದರೂ ಕತ್ತರಿಸಲೇಬೇಕು—ಲೋಕ ಬದುಕಬೇಕೆಂದರೆ. ಅದು ಇಲ್ಲಿಯೇ ಕತ್ತರಿಸಿ ಹೋಗಲಿ ಎಂಬ ಚಪಲ ನಮಗಿತ್ತು. ಆದರೆ ಲಿಂಗಣ್ಣನಾಯಕರಿಗೆ ಆ ಶಕ್ತಿಯಿಲ್ಲ. ಅವರ ಒಳ್ಳೆಯತನಕ್ಕೆ ಆ ಬಲವಿಲ್ಲ-"

"ನಾಗತಿಯರ ಆತ್ಮಹತ್ಯ ಅವರನ್ನು ಅಷ್ಟು ದುರ್ಬಲಗೊಳಿಸಿದೆ. ಈಗ ನೀವು ಹೇಳಿದಂತೆ ಅವರಲ್ಲಿ ಬಲವಿಲ್ಲವೆಂಬುದು ನಮಗೂ ಕಾಣಿಸುತ್ತದೆ. ಅವರಲ್ಲಿ ಉಳಿದಿರುವುದು ಒಳ್ಳೆಯತನವೊಂದೇ."

"ಅಂಥ ಬೆನ್ನುಮೂಳೆಯಿಲ್ಲದ ಒಳ್ಳೆಯತನದಿಂದ ಉಪಯೋಗ ವೇನು ಪರಶುರಾಮಪ್ಪನವರೇ? ಲಿಂಗಣ್ಣನಾಯಕರ ರೀತಿಯನ್ನು ನೀವು ಅರ್ಥಮಾಡಿಕೊಂಡಿಲ್ಲ. ಅದೇ ಒಂದು ಜಾತಿ."

"ಅಂದರೆ—"

"ಅದರ ರೀತಿ ಒಳ್ಳೆಯದು. ಅದು ಬೆಳೆಯಬೇಕೆಂದರೆ ಸದಾ ಆಲಂಬನವೊಂದಿರಲೇಬೇಕು. ತನ್ನ ದಾರಿಯಲ್ಲಿ ತಾನೇ ಬೆಳೆದು ನಿಲ್ಲುವ ಚೈತನ್ಯ ಅದಕ್ಕಾಗುವುದಿಲ್ಲ. ಸಸ್ಯ ಜಾತಿಯಲ್ಲಿ ಅದಕ್ಕೂ ಬೆಲೆ ಇರಬಹು ದೇನೋ! ಮನುಷ್ಯವರ್ಗದಲ್ಲಿ ಅಂಥದಕ್ಕೆ ತುಂಬಾ ಕಡಮೆ ಬೆಲೆ."

"ತಾವು ಲಿಂಗಣ್ಣನಾಯಕರ ಬಗ್ಗೆ ತಪ್ಪು ತಿಳಿದುಕೊಂಡಂತಿದೆ."

—ಗುರುಗಳಾಡಿದ ಮಾತನ್ನು ಕೇಳಿ ನೊಂದು ನುಡಿದ ಪರಶು ರಾಮಪ್ಪ.

"ಇಲ್ಲ. ಅವರನ್ನು ನಾನು ತಪ್ಪುತಿಳಿದುಕೊಂಡಿಲ್ಲ, ಪರಶುರಾಮಪ್ಪ. ಸರಿಯಾಗಿಯೇ ತಿಳಿದುಕೊಂಡಿದ್ದೇನೆ. ಆದರೆ ನನ್ನ ಅಭಿಪ್ರಾಯದಲ್ಲಿ ಅವರು ಕೆಟ್ಟವರು ಎಂದೇನೂ ಅಲ್ಲ; ಒಳ್ಳೆಯವರೇ. ಆದರೆ ಅವರ ಒಳ್ಳೆಯತನ ಎದ್ದುನಿಲ್ಲಲು ಅದಕ್ಕೇ ಶಕ್ತಿ ಇಲ್ಲ, ಓಬವ್ವ ನಾಗತಿಯವರು ಇರುವವರೆಗೂ, ಅವರ ಮೇಲಿನ ಪ್ರೇಮದ ಆಲಂಬನದಿಂದ ಎದ್ದು ನಿಂತಿತ್ತು ಅವರ ಒಳ್ಳೆಯತನ. ಅವರು ತೀರಿಕೊಂಡ ಮರುಗಳಿಗೆಯೇ ಅದು ಕುಸಿದುಬಿತ್ತು. ಮತ್ತೆ ಅದು ಎದ್ದು ನಿಲ್ಲಲು ಸೇಡಿನ ಭಾವನೆ ಅಷ್ಟು ದಿನ ಊರೆಗೋಲಾಗಿತ್ತು. ಅದು ಸರಿಯಾದ ಊರೆಗೋಲಲ್ಲ. ಅದು ಬೇಡ ಎಂದೆವು. ಮತ್ತೆ ನಾಯಕರು ಕುಸಿದು ಬಿದ್ದರು. ಇಂಥ ಒಳ್ಳೆಯತನದಿಂದ ಏನು ಲೋಕಕಲ್ಯಾಣದ ಕೆಲಸ ನಡೆದೀತು ಹೇಳಿ. ಸಣ್ಣ ಗಾಳಿಗೂ ಹೊಯ್ದಾಡುವ ದೀಪ, ದೀಪವೇ. ಆದರೂ ಯಾರಿಗೆ ದಾರಿ ತೋರಿಸೀತು ಅದು?"

"ಅಂದರೆ ಅವರನ್ನು ಪಟ್ಟಕ್ಕೆ ತಂದದ್ದರಿಂದ ಉಪಯೋಗವೇ? ಹಾಗಾದರೇನು ಮಾಡುವುದು?"

—ಮತ್ತೊಮ್ಮೆ ಕರಾಳ ನಿರಾಶೆಯ ಆಳಕ್ಕೆ ಮುಳುಗುತ್ತಾ ಕೇಳಿದ ಪರಶುರಾಮಪ್ಪ.

"ಈ ಹಾಳು ಮುದ್ದಣ್ಣ ಉಳಿದಿರುವುದರಿಂದಲೇ ಇಷ್ಟೆಲ್ಲಾ ದುರವಸ್ಥೆ. ಅವನ ತಲೆಯನ್ನೇ ತೆಗೆದುಬಿಟ್ಟರೆ ಈ ಚಿಂತೆಯೇ ಇರುವುದಿಲ್ಲ."

—ನಿರಾಶೆಯ ತುತ್ತುತುದಿಯಲ್ಲಿ ಕುಡಿಯೊಡೆದ ಕರ್ಕಶತೆಯನ್ನು ಕಕ್ಕುತ್ತಾ ದ್ವೇಷದಿಂದ ಹೇಳಿದ ಭರಮಣ್ಣ.

"ಅದೇ ಆಗಬೇಕೆಂದಿದ್ದರೆ ಅದೂ ಆಗುತ್ತದೆ ಭರಮಣ್ಣನವರೇ. ಆದರೆ ಅದಕ್ಕೆ ಅಷ್ಟು ಆತುರ ಪಡಬೇಡಿ, ಅದಕ್ಕೂ ಮುಂಚೆ, ಆ ಪರಿಸ್ಥಿತಿಯೇ ಅಗತ್ಯವಾದಂತೆ ಮಾಡಬಹುದಾದ ಕೆಲಸವೂ ಇದೆ.

"ಈಗೇನು ಮಾಡಬೇಕು ನೀವೇ ಹೇಳಿ?"

—ಗುರುಗಳಾಡಿದ ಮಾತನ್ನು ಕೇಳಿ ಹೇಳಿದ ಪರಶುರಾಮಪ್ಪ.

"ಲಿಂಗಣ್ಣನಾಯಕರಿಂದ ಏನಾಗಬೇಕೆಂದು ನೀವು ಬಯಸಿದಿರೋ, ಆ ಬಯಕೆ ಸಾರ್ಥಕವಾಗಲು ಏನಾಗಬೇಕೋ ಅದನ್ನು ಮಾಡಿ."

"ಅಂದರೆ—?"

"ಲಿಂಗಣ್ಣನಾಯಕರು ಪಟ್ಟಕ್ಕೆ ಬಂದು, ದುರ್ಗದ ಸಿಂಹಾಸನ ತಿಮ್ಮಣ್ಣನಾಯಕರ ಸಂತಾನಕ್ಕೇ ಉಳಿಯಬೇಕೆಂದಲ್ಲವೇ ನಿಮ್ಮ ಆಸೆ. ಅದಕ್ಕಾಗಿಯೇ ಅಲ್ಲವೆ ಸಿಂಹಾಸನವೇ ಬೇಡವೆಂದ ಲಿಂಗಣ್ಣನಾಯಕರನ್ನು ಒತ್ತಾಯಮಾಡಿ ಪಟ್ಟಕ್ಕೆ ತಂದುದು?"

"ಅಹುದು?"

"ಆಯಿತು—ನಿಮ್ಮ ಬಯಕೆಗೆ ಅವರೊಂದು ನಿಮಿತ್ತವಾದರು. ಆದರೆ ಅವರು ಪಟ್ಟಕ್ಕೆ ಬಂದಮಾತ್ರಕ್ಕೇ ನಿಮ್ಮ ಬಯಕೆ ತೀರಿದಂತಾಗಲಿಲ್ಲವಲ್ಲಾ........"

—ಅರ್ಥ ಸ್ಪಷ್ಟವಾಗದ ಧ್ವನಿಯಲ್ಲಿ ಹೇಳಿದರು ಸ್ವಾಮಿಗಳು.

"ಅಂದರೆ—ನಾವೇನು ಮಾಡಬೇಕು?"

"ಹಿಂದೆ ಬಂದಂಥ ಪರಿಸ್ಥಿತಿ ಮತ್ತೆ ಬರದಂತೆ ಮಾಡಬೇಕು. ನಾಯಕರ ಮನೆತನವನ್ನು ಮುಗಿಸಿ, ತಾವೇ ನಾಯಕರಾಗಬೇಕೆಂಬ ದಳವಾಯಿಗಳ ಆಳಿಯಾಸೆ ಈಡೇರದಂತೆ ಮಾಡಬೇಕು. ಎಂದರೆ–ಲಿಂಗಣ್ಣನಾಯಕರನ್ನು ಪಟ್ಟಕ್ಕೆ ತಂದಮಾತ್ರಕ್ಕೆ ಅದನ್ನು ಸಾಧಿಸಿದಂತಾಗುವುದಿಲ್ಲ. ಈ ನಾಯಕರಿಗೆ ಗಂಡುಸಂತಾನವಾದರೆ, ಆಗ ದಳವಾಯಿಗಳ ಕೈಗಟ್ಟಿ

ದಂತಾಗುತ್ತದೆ. ಆದ್ದರಿಂದ ಇನ್ನೂ ಅವಿವಾಹಿತರಾಗಿಯೇ ಇರುವ ಲಿಂಗಣ್ಣನಾಯಕರಿಗೆ ಒಳ್ಳೆಯ ಹೆಣ್ಣು ನೋಡಿ ವಿವಾಹ ಪ್ರಯತ್ನ ಮಾಡಿ ಪರಶುರಾಮಪ್ಪನವರೇ. ಒಂಟಿ ದೊರೆ ಸಿಂಹಾಸನದ ಮೇಲೆ ಶೋಭಿಸುವುದಿಲ್ಲ. ಅಲ್ಲದೆ ಅದರಿಂದ ನಾಯಕರು ಮತ್ತೆ ಎದ್ದು ನಿಲ್ಲು ವುದು ಸಾಧ್ಯವಾಗಬಹುದು. ಯಾವುದು ನಮಗೆ ಪ್ರಿಯವಾಗಬೇಕಾದರೂ, ಯಾವುದರಲ್ಲೂ ನಮಗೊಂದು ಆಸಕ್ತಿ ಮೂಡಬೇಕಾದರೂ ಅದಕ್ಕೊಂದು ಸ್ವಾರ್ಥದ ಕಾರಣ ದೊರೆತರೆ, ಅದು ಬೇಗ ಪ್ರಿಯವಾಗುತ್ತದೆ."

—ಗುರುಗಳಿತ್ತ ಸಲಹೆ ಕೇಳಿ ಪರಶುರಾಮಪ್ಪ ಚಿಂತೆಗೊಳಗಾದ. ಭರಮಣ್ಣನೂ ಅಹುದು ಅಲ್ಲ ಎಂದು ಹೇಳದೆ ಸುಮ್ಮನೆ ಕುಳಿತಿದ್ದ. ಅದನ್ನು ಕಂಡು ಗುರುಗಳೇ ಕೇಳಿದರು—

"ಏಕೆ ನಮ್ಮ ಸೂಚನೆ ನಿಮಗೆ ಸರಿಯೆಂದು ತೋರುವುದಿಲ್ಲವೇ ?"

"ತಮ್ಮ ಸೂಚನೆಯೇನೋ ಸರಿಯಾದದ್ದೇ. ಆದರೆ ನಾಯಕರು ಇದಕ್ಕೆ ಒಪ್ಪುವರೇ? ನಿಮ್ಮಷ್ಟು ಆಳವಾಗಿ ಯೋಚಿಸದಿದ್ದರೂ ಈ ಯೋಚನೆ ನನಗೂ ಹಲವಾರುಬಾರಿ ಬಂದಿತ್ತು. ಆದರೆ ಇದನ್ನು ನಾಯಕರ ಬಳಿ ಪ್ರಸ್ತಾಪ ಮಾಡಲಾಗದೆ ಸುಮ್ಮನಾಗಿದ್ದೆ"

"ಏಕೆ ?"

"ಜೀವನದಲ್ಲೇ ಯಾವ ಆಸಕ್ತಿಯೂ ಇಲ್ಲದಂತಿರುವ ಅವರಿಗೆ ಇಷ್ಟು ವರ್ಷದ ಮೇಲೆ ಲಗ್ನಮಾಡಿಕೊಂಡು ಸಂಸಾರದ ನೊಗಕ್ಕೆ ಹೆಗಲು ಕೊಡಿ ಎಂದು ಹೇಗೆ ಹೇಳಲಿ ?"

"ನಾಯಕರಿಗೀಗ ಎಷ್ಟು ವಯಸ್ಸಾಯಿತು ?"

"ಹೆಚ್ಚು ಕಡಮೆ ನಲವತ್ತರ ಹತ್ತಿರ ಬಂದಿರಬೇಕು."

"ಹೆಚ್ಚೇನೂ ಆಗಲಿಲ್ಲ ?"

"ನಿಜ. ಲಗ್ನವಾಗಲು ಯಾವ ಆತಂಕವೂ ಇಲ್ಲ—ಅವರು ಒಪ್ಪುವು ದೊಂದೇ ಯೋಚನೆ."

"ಅವರಿಗೆ ಬೇಡವಾದ ಸಿಂಹಾಸನಕ್ಕೆ ಬರಲು ಹೇಗೆ ಒಪ್ಪಿಸಿದಿರೋ ಹಾಗೇ ಇದಕ್ಕೂ ಒಪ್ಪಿಸಬೇಕು. ಅವರು ಒಪ್ಪುವ ರೀತಿಯಲ್ಲಿ ಹೇಳ ಬೇಕು. ಒಂದು ಸಲವಲ್ಲವಾದರೆ, ಹತ್ತು ಸಲ ಹೇಳಬೇಕು; ಹತ್ತು ಕಡೆಯಿಂದ ಹೇಳಿಸಬೇಕು."

ಅದೇನೋ ಆಗಬಹುದು. ಆದರೆ ಮುದ್ದಣ್ಣನವರ ದರಬಾರಿನಲ್ಲಿ ಅಷ್ಟು ಸಲೀಸಾಗಿ ಅರಮನೆಗೆ ಹೋಗಿ ಬರುವುದು ನಮಗೂ ಕಷ್ಟದ ಮಾತಾಗಿದೆ."

"ಹಾಗೇನು ನಮಗೆ ತಿಳಿದಿರಲಿಲ್ಲ."

"ಪರಶುರಾಮಪ್ಪ ಹೇಳಿದುದನ್ನು ಕೇಳಿ ಚಕಿತರಾಗಿ ಕೇಳಿದರು ಗುರುಗಳು.

"ನಿಜ. ಅದನ್ನು ಕೇಳಲು ನಮಗೇ ನಾಚಿಕೆಯಾದರೂ ಹೇಳದೆ ವಿಧಿಯಿಲ್ಲ. ಮನಸ್ಸಿದ್ದೋ ಇಲ್ಲದೆಯೋ ನಾಯಕರು ದಳವಾಯಿಗಳ ಕೈಗೊಂಬೆಯಾಗಿದ್ದಾರೆ. ಮುದ್ದಣ್ಣನ ಕೊನೆಯ ತಮ್ಮ ಚುಕ್ಕಣ್ಣ ಈಗ ಅರಮನೆಯ ಕಾರ್ಯಭಾರಿ. ಆತನ ಅನುಮತಿ ಪಡೆಯದೆ ಯಾರೂ ಅರಮನೆಗೆ ಹೋಗುವಂತಿಲ್ಲ; ಅವನಿಗೆ ತಿಳಿಯದೆ ಅರಮನೆಯಲ್ಲಿ ಕಡ್ಡಿಯೂ ಚಲಿಸುವಂತಿಲ್ಲ."

"ಅಂದರೆ—ನೀವು ಹೋಗಿಬರಲೂ ಅಡ್ಡಿ ಮಾಡುತ್ತಾನೆಯೇ ?"

"ಇನ್ನೂ ಅಷ್ಟು ಧೈರ್ಯ ಬಂದಿಲ್ಲ. ಆದರೂ ಮೊದಲು ಅವನಿಗೆ ಚೀಟಿ ಕಳುಹಿಸಿ, ಅವನ ಅನುಮತಿ ಪಡೆದು ನಾವು ಅರಮನೆಗೆ ಹೋಗಬೇಕು. ನೀವು ಬರಬೇಡಿ ಎಂದು ಹೇಳದೆ ಹೋದರೂ, ನಾವು ಮೇಲಿಂದ ಮೇಲೆ ಬರುವುದರಿಂದ ನಾಯಕರಿಗೆ ತೊಂದರೆಯಾಗುತ್ತದೆ ಎಂಬ ಮಾತಿನಲ್ಲಿ ತನ್ನ ಅಸಮ್ಮತಿ ಸೂಚಿಸುತ್ತಾನೆ. ಆದರಿಂದ ನಾವೇ ಆದಷ್ಟು ಅರಮನೆಗೆ ಹೋಗಿಬರುವುದನ್ನು ಕಡಮೆ ಮಾಡಿದ್ದೇವೆ. ಹೀಗಿರುವಾಗ ಈಗ ಇದಕ್ಕಾಗಿ ಮೇಲಿಂದ ಮೇಲೆ ಹೋದರೆ ಹೇಗೋ ಏನೊ!"

"ಚೆನ್ನಾಯಿತು ? ಆಗಲಿ. ಒಂದು ಕೆಲಸ ಮಾಡಿ."

"ಏನು ?"

"ಒಮ್ಮೆ ನಾಯಕರನ್ನು ಕಂಡು, ಅವರಿಗೇನೂ ಅಭ್ಯಂತರವಿಲ್ಲದಿದ್ದರೆ, ನಮ್ಮನ್ನು ಒಂದುಬಾರಿ ಕಂಡು ಹೋಗುವಂತೆ ಕೇಳಿದೆವೆಂದು ಹೇಳಿ. ಅವರು ಬಂದರೆ, ನೀವಾಡಬೇಕಾದ ಮಾತನ್ನು ನಾವೇ ಹೇಳುತ್ತೇವೆ. ಹಾಗೆಯೇ ಮದುವೆಯ ವಿಷಯ ನಾವು ಗಂಡಸರಾಡುವುದಕ್ಕಿಂತ ಹೆಂಗಸರು ಹೇಳುವುದು ಮೇಲು. ನಾಗತಿಯವರಿಗೂ ಒಂದು ಮಾತು ಹೇಳುವಂತೆ ಕೇಳುತ್ತೇವೆ."

"ಆಯಿತು—ತಮ್ಮ ಮಾತನ್ನು ಹೇಗಾದರೂ ನಾಯಕರಿಗೆ ಮುಟ್ಟಿಸುತ್ತೇವೆ."

"ಅಷ್ಟು ಮಾಡಿ. ಮುಂದೆ ಶಿವನಿಚ್ಛೆ ಹೇಗಿದೆಯೋ ಹಾಗಾಗಲಿ"

ಗುರುಗಳಾಡಿದ ಮಾತನ್ನು ಕೇಳಿ, ಅವರಲ್ಲಿ ತಮ್ಮ ಎದೆಗುದಿಯನ್ನು ಹೇಳಿಕೊಂಡುದರಿಂದ ಪರಶುರಾಮಪ್ಪ, ಭರಮಣ್ಣನವರ ಮನಸ್ಸಿನ ಬಿಗಿತವೂ ಕೊಂಚ ಕಡಿಮೆಯಾಗಿತ್ತು. ಬಂದಾಗ ಇದ್ದುದಕ್ಕಿಂತ ಹೋಗುವಾಗ ಅವರ ಹೃದಯ ಹಗುರಾಗಿತ್ತು.

೩

ನಾಗತಿಯ ಮನಸ್ಸು ಸಣ್ಣಗೆ ಕೆರಳಿತ್ತು.

ಪರಶುರಾಮಪ್ಪನ ಮುಂದೆ, ತಾವು, ನಾಗತಿಗೆ ಹೇಳುವುದಾಗಿ ಹೇಳಿದ ಮಾತನ್ನು, ಗುರುಗಳು ಪ್ರಾಸಂಗಿಕವಾಗಿ ನಾಗತಿಗೆ ಹೇಳಿ, ಆ ಕಾರಣದಿಂದಲೇ ನಾಗತಿಯ ಮನಸ್ಸಿನಲ್ಲಿ ಕಿಡಿ ಕೆದರಿ ಹೊಗೆಯಾಡಲು ಕಾರಣವಾಗಿತ್ತು. ಸಣ್ಣ ಮಾತನ್ನೇ ಹಿರಿದಾಗಿ ಮಾಡಿಕೊಂಡು ಮುನಿಯುವ ಹೆಣ್ಣು ಬುದ್ಧಿ ಕೆರಳಿತ್ತು.

ಗುರುಗಳೆದುರು "ತಮ್ಮಪ್ಪಣೆಯಂತೆ ಮಾಡುತ್ತೇನೆ" ಎಂದು ವಿನಯವಾಗಿ ಹೇಳಿ ಬಂದರೂ, ಆಕೆಯ ಮನಸ್ಸು ಆ ಕೆಲಸ ಮಾಡಲು ಒಪ್ಪಿರಲಿಲ್ಲ. ಅಷ್ಟೇ ಅಲ್ಲ—ಆ ಬೇಡಿಕೆಯ ವಿರುದ್ಧ ಸಿಡಿದೆದ್ದು 'ಮಾಸಿದ ಬಟ್ಟೆ ಹೊರುವ ಹೇಸರಗತ್ತೆಯಂತಾಯಿತು ನಮ್ಮ ಬಾಳು. ಚಾಕರಿಗೆ ಬೇಕಾದಾಗ ಮಾತ್ರ ಬಾ. ಉಳಿದಾಗ ಹುಲ್ಲು ಹಾಕಿದಲ್ಲಿ ಬಿದ್ದಿರು. ಎಲ್ಲರ ಪಾಲಿಗೂ ನಾವು ಅಷ್ಟೇ ಆದಂತಾಯಿತು. ಅಗತ್ಯಬಿದ್ದಾಗ ಎಲ್ಲರೂ ನಮ್ಮನ್ನು ಮಾತನಾಡಿಸುತ್ತಾರೆ. ಉಳಿದ ಹೊತ್ತಿನಲ್ಲಿ ಮಾತ್ರ ನಾವು ಯಾರಿಗೂ ಬೇಡ. ನನಗೇನು—ಅವರವರ ಉರಿಯಲ್ಲಿ ಅವರೇ ಬಿದ್ದು ಸಾಯಲಿ' ಎಂದುಕೊಂಡಿತ್ತು.

ಆಕೆಯ ಮನಸ್ಸಿನಲ್ಲಿ ಆ ಭಾವನೆ ಮೂಡಲು ಕಾರಣವಿಲ್ಲದೆಯೂ ಇರಲಿಲ್ಲ.

ನಾಗತಿ ಯಾರ ಮುಂದೂ ತನ್ನ ಮನಸ್ಸಿನಲ್ಲಿದ್ದ ಮಾತನ್ನು ಹೇಳಿ

ಕೊಂಡಿರದಿದ್ದರೂ, ಆಕೆಯ ಮನಸಿನಲ್ಲಿ ಮಾತ್ರ "ಈ ನಾಯಕ ಪಟ್ಟಕ್ಕೆ ಬಂದದ್ದು, ನಾನು ಆ ಮಾತಿನಲ್ಲಿ ಪ್ರವೇಶಿಸಿ, ಇವರ ಹಕ್ಕನ್ನು ಎತ್ತಿ ಹಿಡಿದದ್ದರಿಂದ ತಾನೇ. ಇಷ್ಟು ದಿನವಂತೂ ಯಾರಿಗೂ ಬೇಡದವಳಾಗಿ ದೂರ ಇದ್ದದ್ದಾಯಿತು. ಇನ್ನಾದರೂ ಮತ್ತೆ ಅರಮನೆಯಲ್ಲಿ ನನ್ನ ಮಾತು ನಡೆಯುವಂತಾಗಬಹುದು. ಎಲ್ಲರ ಕಣ್ಣಿನಲ್ಲಿ ನಾನೂ ಮತ್ತೆ ಒಬ್ಬ ಮನುಷ್ಯಳಾಗಿ, ಅದಕ್ಕಿಂತ ಹೆಚ್ಚಾಗಿ, ಅರಮನೆಯಲ್ಲಿ ಹಿರಿಯ ಹೆಂಗಸಾಗಿರಬಹುದು. ಲಿಂಗಣ್ಣನಾಯಕನೂ ಕೃತಘ್ನನಾಗಿ, ತನ್ನ ಕೆಲಸ ವಾದ ಕೂಡಲೇ ನನ್ನನ್ನು ಮರೆಯದಿರಬಹುದು."

—ಎಂದುಕೊಂಡಿದ್ದಳು. ಚಿಕ್ಕಣ್ಣನಾಯಕರ ಕಾಲದಲ್ಲಿ ಸ್ವಲ್ಪ ದಿನ ಅನುಭವಿಸಿ ಬಳಿಕ ತಪ್ಪಿಹೋದ ಅರಮನೆಯ ಜೀವನದ ಬಯಕೆ ಆಕೆಯಲ್ಲಿ ಮತ್ತೆ ಚಿಗುರಿತ್ತು.

ಆದರೆ ಆಕೆ ಏನಾಗದಿರಬಹುದು ಎಂದುಕೊಂಡಿದ್ದಳೋ, ಅದೇ ಆಗಿತ್ತು. ಪಟ್ಟಾಭಿಷೇಕದಲ್ಲಾಗಲಿ, ಆ ಬಳಿಕವಾಗಲಿ ಆಕೆಗೆ ಎಲ್ಲೂ ಹಿರಿಯತನ ದೊರೆತಿರಲಿಲ್ಲ. ಆಕೆಯೂ ಹತ್ತು ಜನರಲ್ಲಿ ಹನ್ನೊಂದನೆ ಯವಳಾಗಿ ಓಡಾಡಿದಳು. ಪಟ್ಟಾಭಿಷೇಕದ ನಂತರ, ಲಿಂಗಣ್ಣನಾಯಕ ದೊಡ್ಡ ಅರಮನೆಯಲ್ಲಿ ವಾಸಮಾಡಲಾರಂಭಿಸಿದ ಮೇಲಾದರೂ ತನ್ನನ್ನು ಜ್ಞಾಪಿಸಿ ಕೊಂಡು, ತನ್ನನ್ನು ಅರಮನೆಯಲ್ಲೇ ಇರಲು ಕರಸಿಕೊಳ್ಳ ಬಹುದು ಎಂದುಕೊಂಡಿದ್ದಳು. ಆದರೆ ಆ ನಿರೀಕ್ಷೆಯೂ ವಿಫಲವಾಗಿತ್ತು. ಲಿಂಗಣ್ಣನಾಯಕ ಆಕೆಯನ್ನು ಅರಮನೆಗೆ ಕರೆಸುವುದಿರಲಿ, ಆಕೆಯನ್ನು ನೋಡಲೇ ಬಂದಿರಲಿಲ್ಲ. ನಾಯಕ ಹಾಗಾದರೆ, ಪರಶುರಾಮಪ್ಪನಾಗಲಿ, ಭರಮಣ್ಣನಾಗಲಿ ಮತ್ತೆ ಆಕೆಯಲ್ಲಿ ಯಾವ ರಾಜಕಾರಣವನ್ನು ಚರ್ಚಿ ಸಲು ಬಂದಿರಲಿಲ್ಲ. ಒಂದುಗಳಿಗೆ ದೊಡ್ಡ ತಲೆಯಾಗಿ ಓಡಾಡಿದ ನಾಗತಿ ಮತ್ತೆ ಮೂಲೆಗುಂಪಾಗಿದ್ದಳು. ಇದರಿಂದ ಮುಗಿಲಿನಲ್ಲಿ ವಿಹರಿಸುತ್ತಿದ್ದ ಆಕೆಯ ಬಯಕೆ ಪಕ್ಷಿ, ರೆಕ್ಕೆಕತ್ತರಿಸಿ ಕೆಲದಲ್ಲಿ ಕೆಡದಂತಾಗಿತ್ತು. ಹೃದ ಯದಲ್ಲಿ ನಿರಾಶೆ, ಕ್ರೋಧಗಳು ತೆರೆಯುಕ್ಕಿ ಹರಿದು ಮತ್ತೆ ಹೆಪ್ಪುಗಟ್ಟಿ ಮಲಗಿದ್ದವು.

ಈಗ ಲಿಂಗಣ್ಣನಾಯಕನ ವಿವಾಹ ವಿಷಯದಲ್ಲಿ ತಾನು ಮತ್ತೆ

ಆಸಕ್ತಿ ವಹಿಸಬೇಕೆಂಬುದನ್ನು ಕೇಳಿದಾಗ, ಹೆಪ್ಪುಗಟ್ಟಿದ ಭಾವನೆಗಳೆಲ್ಲವೂ ಕರಗಿ, ಕೆರಳಿ, ಆಕೆಯ ಚಿತ್ತ ಪ್ರಕ್ಷುಬ್ಧವಾಗಿತ್ತು. 'ಈ ನಾಯಕ ಮದುವೆ ಯಾದರೆಷ್ಟು, ಬಿಟ್ಟರೆಷ್ಟು. ಈ ಮನೆತನವೇ ಹಾಳಾಗಿ ಹೋದರೆ ತಾನೇ ನನಗಾದ ನಷ್ಟವೇನು? ಸಾಯಲಿ' ಎಂದುಕೊಂಡಿದ್ದಳು. ಆದರೆ ಹಾಗೆಂದುಕೊಂಡು ತೆಪ್ಪಗೆ ಮಲಗಲೂ ಅವಳ ಮನಸ್ಸು ಸಿದ್ಧವಾಗಿರಲಿಲ್ಲ. 'ಆಗಂತೂ ಯಾವುದೋ ಮಬ್ಬಿಗೆ ಬಿದ್ದು ಸುಮ್ಮನೆ ಅವರು ಹೇಳಿದಹಾಗೆ ಕುಣಿದುಬಂದೆ. ಈಗ ಮತ್ತೊಮ್ಮೆ ಅವಕಾಶ ಬಂದಿದೆ. ಈಗಲಾದರೂ ನಿನ್ನ ಸ್ಥಾನವನ್ನು ಬಿಗಿಮಾಡಿಕೋ' ಎಂದಿತು ಅವಳ ಮನಸ್ಸು.

ಆ ಚಪಲಕ್ಕೆ ವಶವಾದ ಮನಸ್ಸು, ಹೇಗೆ ಅದನ್ನು ಸಾಧಿಸುವುದು ಎಂದು ಚಿಂತಿಸಿ, ಚಿಂತಿಸಿ ಕಡೆಗೊಂದು ದಾರಿಯನ್ನು ಕಂಡುಕೊಂಡಿತು. ತನ್ನ ಮಾತು ಕೇಳುವ, ನಾಯಕನನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳ ಬಲ್ಲಂಥ ತನ್ನ ಕಡೆಯ ಹುಡುಗಿಯೊಬ್ಬಳನ್ನು ತಂದು ನಾಯಕನಿಗೆ ವಿವಾಹಮಾಡಿದರೆ, ಆ ಮೆಟ್ಟಿಲ ಮೂಲಕವಾದರೂ, ತಾನು ಮತ್ತೆ ಅರಮನೆಯಲ್ಲಿ ಹಿರಿಯನಾಗತಿಯ ಪಟ್ಟಕ್ಕೆ ಹತ್ತಿ, ಹತ್ತುಜನ ತನ್ನ ಮಾತು ಕೇಳುವಂತೆ ಮಾಡಬಹುದು ಎಂದುಕೊಂಡು, ಅದಕ್ಕೆ ತಕ್ಕ ಹೆಣ್ಣು ಯಾರು, ತನ್ನ ಬಳಗದಲ್ಲಿಯ ಯಾವ ಹೆಣ್ಣು ಈ ಉದ್ದೇಶ ಸಾಧನೆಗೆ ಸರಿಹೋಗಬಹುದು ಎಂದು ಚಿಂತಿಸಿ 'ಹಟ್ಟಿಯಲ್ಲಿದ್ದ ತನ್ನ ತಂದೆಗೆ ಸುದ್ದಿ ಕಳಿಸಿದರೆ, ಸರಿಯಾದ ಸಲಹೆ ಕೊಡುತ್ತಾನೆ. ಮೊದಲು ನಾಯಕನನ್ನು ಮದುವೆಗೆ ಒಪ್ಪಿಸಿ, ಬಳಿಕ ಆ ಕೆಲಸ ಮಾಡಬಹುದು' ಎಂದುಕೊಂಡಳು

ಆದರೆ ಮರುಗಳಿಗೆಯೇ ಮತ್ತೊಂದು ಸಂಶಯ ಇಣಿಕಿ ಹಾಕಿತು. 'ನೀನೇನೋ ನಾಯಕರು ಇಂಥವರನ್ನು ಮದುವೆಯಾಗಬಹುದು ಎಂದು ಹೇಳಬಹುದು. ಆದರೆ ಅದಕ್ಕೆ ಉಳಿದವರೂ ಒಪ್ಪುವರೆಂಬ ಭರವಸೆ ಏನು?' ಆ ಚಿಂತೆಯಲ್ಲಿ ಅಷ್ಟುಹೊತ್ತು ತೊಳಲಾಡಿ ಕೊನೆಗೆ ಈ ವಿಷಯದಲ್ಲಿ ನಾಯಕರು ನನ್ನ ಮಾತಿಗೆ ಬೆಲೆಕೊಡುವುದಾದರೇ ನಾನು ಈ ವಿಷಯ ದಲ್ಲಿ ಪ್ರವೇಶಿಸುತ್ತೇನೆ ಎಂದು ಖಂಡಿತವಾಗಿ ಹೇಳಿದರೆ, ತಾವೇ ದಾರಿಗೆ ಬರುತ್ತಾರೆ.' ಎಂದು, ಮತ್ತೊಮ್ಮೆ ಈ ವಿಷಯವನ್ನು ಅವರೇ ಎತ್ತಿದರೆ

ಹಾಗೇ ಹೇಳುವುದು' ಎಂದು ನಿರ್ಧರಮಾಡಿಕೊಂಡು, ಮತ್ತೆ ಅವರೇ ಆ ಪ್ರಶ್ನೆಯನ್ನು ಎತ್ತುವುದನ್ನೇ ಕಾಯುತ್ತಾ ಕುಳಿತಳು.

ತಾವೇ ಹೇಳಿದರೂ ನಾಯಕರ ವಿವಾಹ ವಿಷಯದಲ್ಲಿ ನಾಗತಿ ಯಾವ ಆಸಕ್ತಿಯನ್ನೂ ತೋರ್ಪಡಿಸದಿದ್ದುದನ್ನು ಕಂಡು, ಗುರುಗಳೇ ಮತ್ತೊಮ್ಮೆ ಆ ವಿಷಯವನ್ನು ನೆನಪಿಸಿ ಹೇಳಿದರು.

"ನಮ್ಮ ಮಾತು ಮರೆತುಹೋಯಿತೇನೋ. ಆದರೆ ಇದು ಮರೆತು ಹೋಗುವಂಥ ವಿಷಯವಲ್ಲ."

"ಯಾವ ವಿಷಯ?"

—ಗುರುಗಳು ಹೇಳಿದ ವಿಚಾರ ತನಗೆ ನೆನಪೇ ಇಲ್ಲದಿರುವಂತೆ ಕೇಳಿದಳು ನಾಗತಿ.

"ನಾಯಕರ ಲಗ್ನದ ವಿಷಯ......"

"ಅದೇ, ಅದು ನೆನಪಿದೆ. ಆದರೆ ನಾಯಕರು ನಮಗೆ ಸಿಗಬೇಕಲ್ಲ.

"ಆಗಬೇಕಾದ ಕೆಲಸಕ್ಕೆ ಅವರು ಬರಲಿ, ಇವರು ಬರಲಿ ಎಂದು ಕಾದು ಕುಳಿತುಕೊಳ್ಳುವುದೇಕೆ? ಅವರೇ ಬಂದಿದ್ದರೆ ಆಗಿತ್ತು ಎನ್ನುವುದು ಸರಿ. ಅವರು ಬರಲಿಲ್ಲ, ಆದ್ದರಿಂದ ನೀವೇ ಅಲ್ಲಿಯವರೆಗೂ ಹೋಗಿ ಈ ವಿಷಯವನ್ನು ಎತ್ತಿಕೊಂಡು ಒಂದು ಮಾತು ಹೇಳಿಬಂದಿದ್ದರೂ, ಬಳಿಕ ಉಳಿದವರಾದರೂ ಅವರಲ್ಲಿ ಈ ಪ್ರಸ್ತಾಪ ಮಾಡಲು ಅನುವು ದೊರೆಯುತ್ತಿತ್ತು."

"ಅದೇನೋ ಸರಿ. ಆದರೆ ಇದುವರೆಗೂ ನಾವು ಅರಮನೆಗೆ ಹೋಗುವ ಪ್ರಸಂಗವೇ ಬಂದಿಲ್ಲವಲ್ಲ. ಅವರು ಕರೆಕಳುಹಿಸದೆ ಹೋದರೆ ನಮಗೇನು ಮರ್ಯಾದೆ?"

"ನಮ್ಮ ಮನೆಗೆ ನಾವು ಹೋಗುವುದಕ್ಕೂ ಕರೆಕಳುಹಿಸುವ ಮರ್ಯಾದೆ ಯನ್ನು ನಿರೀಕ್ಷಿಸಬೇಕೇ? ಅಲ್ಲದೆ ನಾವು ಹೋಗುವುದು ಮರ್ಯಾದೆ ಪಡೆಯ ಬೇಕೆಂದಲ್ಲ; ಕಾರ್ಯ ಸಾಧಿಸಲು. ಆದುದರಿಂದ ತಮ್ಮ ಸಂಕೋಚಕ್ಕೆ ನಮಗೇನೂ ಕಾರಣ ಕಾಣುವುದಿಲ್ಲ."

"ಆದರೂ ನಾವಾಗಿಯೇ ಮೇಲೆಬಿದ್ದು ಹೋದರೆ 'ಕರೆಯದೆ ಬಂದವರನ್ನು ಬಾಗಿಲಲ್ಲೆ ಕಳಿಸು' ಎಂಬಂತಾದರೆ. ಈ ಜೀವನದಲ್ಲಿ

ಅಂಥ ಅವಮಾನ ಉಂಡು ಉಂಡು ಈ ಜೀವಕ್ಕೆ ಸಾಕಾಗಿ ಹೋಗಿದೆ ಬುದ್ದಿ. ಈಗ ನಾನಾಗಿಯೇ ಎಲ್ಲವೂ ತಪ್ಪಿ, ಯಾರಿಗಾದರೂ ಬೇಕಾಗಿಯೋ ಬೇಡವಾಗಿಯೋ ನಮ್ಮ ಪಾಡಿಗೆ ನಾವು ಇರುವ ಅವಕಾಶ ಇರುವಾಗ, ನಾನಾಗಿಯೇ ಹೋಗಿ ಅಂಗೈ ತೋರಿಸಿ ಅವಲಕ್ಷಣ ಎನ್ನಿಸಿಕೊಳ್ಳಲೆ? ಅಲ್ಲದೆ ಇದೆಲ್ಲದರಿಂದ ನನಗೆ ಆಗಬೇಕಾದುದೇನು? ದುರ್ಗಕ್ಕಾಗಲಿ, ನಾಯಕರಿಗಾಗಲಿ ನಮ್ಮ ಮೇಲಿರುವ ಅಭಿಮಾನ ಅಷ್ಟರಲ್ಲಿಯೇ ಇದೆ. ಅಥವಾ ಇವರಿಂದ ನಮಗಾಗಬೇಕಾದುದೂ ಅಷ್ಟೇ ಇದೆ. ನಾಯಕರೇನು ನನ್ನ ತೌರು ಕಡೆಯವರನ್ನು ಮದುವೆಯಾಗಬೇಕಾಗಿದೆಯೇ? ಏನೋ—ಯಾರಿಗೆ ಇದರಲ್ಲಿ ಆಸಕ್ತಿಯೋ ಅವರು ಒದ್ದಾಡಲಿ. ನಮಗೇನು?"

ನಾಗತಿಯಾಡಿದ ಮಾತುಗಳನ್ನು ಕೇಳ ಕೇಳುತ್ತಾ ಗುರುಗಳ ಪ್ರಸನ್ನವಾಗಿದ್ದ ಮುಖ ಗಂಭೀರವಾಯಿತು ಅಂದೇ ಮೊದಲಬಾರಿಗೆ ನಾಗತಿಯನ್ನು ನೋಡುವವರಂತೆ ನೋಡುತ್ತಾ ನೀರಸವಾದ ಧ್ವನಿಯಲ್ಲಿ ಹೇಳಿದರು—

"ನಿಮ್ಮ ಮಾತು ಸರಿ ಎನ್ನುವುದಾದರೆ, ಈ ವಿಷಯದಲ್ಲಿ ನಾವು ಆಸಕ್ತಿವಹಿಸುವುದೂ ತಪ್ಪೇ ಎಂದಾಗುತ್ತದಲ್ಲಾ."

"ತಪ್ಪೋ ಅಲ್ಲವೋ ತಮಗೆ ಹೇಳುವಷ್ಟು ಶಕ್ತಿ ನಮಗೆಲ್ಲಿಯದು ಬುದ್ದಿ. ಆದರೆ ಇಷ್ಟಂತೂ ನಿಜ. ಈ ಪ್ರಸಂಗದಲ್ಲಿ ಕೈಹಾಕಿ ತಾವು ಕೆಲವರ ದೃಷ್ಟಿಯಲ್ಲಾದರೂ ಕೆಟ್ಟವರಾದಿರಿ. ಅಷ್ಟಕ್ಕಿಂತ ಹೆಚ್ಚು ಲಾಭ ತಮಗೂ ಏನೂ ಆಗಲಿಲ್ಲ. ಇಷ್ಟು ನೀವು ಅವರ ವಿಷಯದಲ್ಲಿ ದುಡಿದದ್ದಕ್ಕೆ ಆ ಉಪಕಾರವನ್ನಾದರೂ ನೆನಸಿಕೊಂಡರೇ ನಾಯಕರು? ಪಟ್ಟಾಭಿಷೇಕ ಕಾಲವಲ್ಲಿ ತಮ್ಮನ್ನು ಅರಮನೆಗೆ ಕರಸಿ ಪಾದಪೂಜೆ ಮಾಡಬಹುದಾಗಿತ್ತು. ಹಿಂದಿನ ನಾಯಕರ ಕಾಲದಲ್ಲಿ ನಿಮಗೆ ಅಷ್ಟುದಿನ ನಡೆದು ನಿಂತುಹೋದ ರಾಜಮರ್ಯಾದೆಗಳನ್ನೆಲ್ಲಾ ಮತ್ತೆ ನಡೆಸಬಹುದಾಗಿತ್ತು. ಅದೆಲ್ಲಾ ಹೋಗಲಿ—ನಿಮ್ಮ ಅನುಗ್ರಹ, ಆಶೀರ್ವಾದದಿಂದ ಪಟ್ಟಕ್ಕೆ ಬಂದವರು, ಸಿಂಹಾಸನಕ್ಕೆ ಬಂದಮೇಲೆ ಇತ್ತಕಡೆ ಒಂದು ಬಾರಿಯಾದರೂ ತಲೆಹಾಕಿ ನೋಡಲಿಲ್ಲ. ನೀವು ಬದುಕಿದ್ದೀರಾ, ಇಲ್ಲವೇ ಎಂದು

ನೋಡಿ, ಮಾತನಾಡಿಸಲೂ ಇಲ್ಲ. ಬಂದು ಮಾತಾಡಿಸಿದ್ದರೆ ಮುತ್ತು ಸುರಿದು ಹೋಗುತ್ತಿತ್ತೇ? ಇಂಥ ಉಪಕಾರ ಸ್ಮರಣೆ ಇಲ್ಲದವರಿಗಾಗಿ ತಾವೇಕೆ ವೃಥಾ ಬಳಲುತ್ತೀರಿ ಬುದ್ಧಿ? ದುರ್ಗದ ಚಿಂತೆ ಮಾಡಲು ನೀವು ರಾಜಗುರುಗಳೂ ಅಲ್ಲ, ನಾಯಕರು ತಮ್ಮ ಶಿಷ್ಯರೂ ಅಲ್ಲ. ನಮಗೂ ಅವರಿಗೂ ಯಾವ ಬಾಂಧವ್ಯವೂ ಇಲ್ಲ."

ತನ್ನೆದೆಯೊಳಗೆ ಬಹುದಿನಗಳಿಂದ ಸಂಗ್ರಹಿಸಿಟ್ಟುಕೊಂಡಿದ್ದ ಕಹಿ ಭಾವನೆಗಳನ್ನೆಲ್ಲಾ ಒಂದೇ ಬಾರಿ ಹೊರಚೆಲ್ಲುವವಳಂತೆ ದ್ವೇಷದಿಂದ ನುಡಿದಳು ನಾಗತಿ. ಅವಳ ಉದ್ರಿಕ್ತ ಸ್ಥಿತಿಯಲ್ಲಿ ತಾನು ಮಾತನಾಡು ತ್ತಿರುವುದು ಗುರುಗಳ ಎದುರಿಗೆ ಎಂಬುದೂ ಮರೆತು ಹೋದಂತಿತ್ತು. ಆಕೆಯ ಮಾತನ್ನು ಕೇಳುತ್ತಾ ಗಂಭೀರವಾಗಿದ್ದ ಗುರುಗಳ ಮುಖದಲ್ಲಿ ಮೆಲ್ಲಗೆ ನೋವು ಅಡಿಯಿಟ್ಟಿತು.

"ಒಂದು ವೇಳೆ....ಒಂದು ವೇಳೆ.....ನಾಯಕರು ನಮ್ಮನ್ನು ರಾಜ ಗುರು ಎಂದು ಕರೆದಿದ್ದರೆ, ನಮ್ಮಿಂದ ಲಿಂಗದೀಕ್ಷೆ ಪಡೆದು ಶಿಷ್ಯರಾಗಿ ದ್ದರೆ.....ಆಗ....ಆಗ....ನಾವು ಅವರ ವಿಷಯದಲ್ಲಿ ಆಸಕ್ತಿವಹಿಸಿ....ದುಡಿ ದುದು ಸರಿಯಾಗುತ್ತಿತ್ತೇ?"

ಹೊರಬರಲಾರೆನೆನ್ನುವ ಮಾತನ್ನು ಬಲವಂತವಾಗಿ ಹೊರಗೆ ಎಳೆದು ತಂದು, ಅದನ್ನು ತಡೆತಡೆದು ಆಡುತ್ತಾ, ನಾಗತಿಯನ್ನು ಪರೀಕ್ಷಿ ಸುವವರಂತೆ ಕೇಳಿದರು ಸ್ವಾಮಿಗಳು.

"ಖಂಡಿತವಾಗಿಯೂ."

ನಾಗತಿ ಅವರ ಮಾತಿನ ರೀತಿಯನ್ನು ಅರ್ಥಮಾಡಿಕೊಳ್ಳದೆ, ತನ್ನೆದೆಯ ರೋಷದಲ್ಲಿ ಕುರುಡಾಗಿ ಹೇಳಿದಳು.

"ಒಂದು ವೇಳೆ—ಆಗಲೂ—ನಾಯಕರು, ತಮ್ಮ ಕೆಲಸ ಆದ ಮೇಲೆ ನಮ್ಮನ್ನು—ಮರೆತು ಬಿಟ್ಟಿದ್ದರೆ?"

"ಏನಿಲ್ಲವಾದರೂ, ಸ್ವಧರ್ಮೀಯರಿಗಾಗಿ ಅಷ್ಟು ಕೆಲಸ ಮಾಡಿ ದೆವು ಎಂಬ ಸಮಾಧಾನವಾದರೂ ಇರುತ್ತಿತ್ತು."

"ಅಂದರೆ ಸ್ವಧರ್ಮೀಯರಲ್ಲದವರಿಗೆ, ಪರಧರ್ಮೀಯರಿಗೆ ನಾವು ದುಡಿಯುವುದು ಸಲ್ಲದು. ಅಲ್ಲವೇ?"

ಅವರ ಮೃದುವಾದ ಮಾತಿನ ರೀತಿಯಲ್ಲಿ ಏನೋ ಒಂದು ಬಗೆಯ ಹೊಸ ಹರಿತವಿತ್ತು.

"ತಮ್ಮ ಚಿತ್ತ ಹೇಗೋ ಕಾಣೆ. ಆದರೆ ನಮಗೇನೋ ಅದು ಸಲ್ಲದು ಎಂದೇ ತೋರುತ್ತದೆ ಬುದ್ಧಿ. ಊರದನ ಕಾದು ದೊಡ್ಡಬೋರ ಎನ್ನಿಸಿಕೊಂಡರೆ ಯಾವ ದೇವರಿಗೆ ಪ್ರೀತಿ? ಆಕಾಶಕ್ಕೆ ಛತ್ರಿ ಹಿಡಿದವರು ಯಾರನ್ನೂ ನಾವು ಕಾಣೆವು."

ನಾಗತಿ ನಿರ್ದಾಕ್ಷಿಣ್ಯದ ಸ್ವರದಲ್ಲಿ ಆಡಿದ ಮಾತನ್ನು ಕೇಳಿ ಗುರುಗಳ ಮುಖ ಕಪ್ಪಿಟ್ಟಿತು. ಯಾತನೆಯ ಪಶುತುಳಿತದಿಂದ ಅವರ ಮುಖ ವಿಕಾರವಾಯಿತು. ಕಣ್ಣರೆಪ್ಪೆ ಯಾವುದೋ ಭಾರಹೊತ್ತು ಬಳಲಿದಂತೆ ನಿಮೀಲಿತವಾಯಿತು. ಒಂದು ಗಳಿಗೆ ಸುಮ್ಮನಿದ್ದು, ಬಳಿಕ ಯಾವುದೋ ಆಯಾಸದಿಂದಜಡವಾದ ಧ್ವನಿಯಲ್ಲಿ ಕೇಳಿದರು--

"ಯಾವುದೋ ಒಂದು ಧರ್ಮಮಾರ್ಗ ಕೆಟ್ಟು, ಕಲುಷಿತವಾಗಿ, ದೂಷಿತವಾಗಿ ಅಡ್ಡದಾರಿ ಹಿಡಿಯುವುದು ಏಕೆ ಗೊತ್ತೇ?"

"ಏಕೆ?"

—ಇದ್ದಕ್ಕಿದ್ದ ಹಾಗೇ ಗುರುಗಳು ಕೇಳಿದ ಧರ್ಮವಿಷಯದ ಪ್ರಶ್ನೆಗೆ ಕಾರಣವನ್ನರಿಯದೆ ಚಕಿತಳಾಗಿ ಕೇಳಿದಳು ನಾಗತಿ.

"ನಿಮ್ಮಂಥ ಶಿಷ್ಯರಿಂದ"

ತಟಕ್ಕನೆ ಚಾಟಿಯಿಂದ ಜಡಿದಂತೆ ಹೇಳಿದರು ಗುರುಗಳು. ಆ ಮಾತಿನ ಕಶಾಘಾತದಿಂದ ನಾಗತಿ ತಲ್ಲಣಿಸಿ, ಆಕೆಯ ನಾಲಗೆಯಲ್ಲಿನ ದ್ರವ ಆರಿಹೋಯಿತು. ಆ ಆಘಾತದಿಂದ, ಆಕೆ ಚೇತರಿಸಿಕೊಳ್ಳಲೂ ಅವಕಾಶಕೊಡದೆ ತಮ್ಮ ಮಾತನ್ನು ಮುಂದುವರಿಸಿ ಹೇಳಿದರು ಗುರುಗಳು—

"ಧರ್ಮವೆಂದರೆ ಏನೆಂದುಕೊಂಡೆ ಮಗಳೇ. ನಿನ್ನ ದುರಭಿಮಾನದಲ್ಲಿ ಅದನ್ನು ಎಂಥ ದುರ್ಗತಿಗೆ ತಂದೆ. ಧರ್ಮ ಮಾರುಕಟ್ಟೆಯಲ್ಲ, ಗುರು ವ್ಯಾಪಾರಿಯಲ್ಲ. ನೀನು ಶಿಷ್ಯತ್ವದ ಬೆಲೆಕೊಟ್ಟರೆ, ನಿನಗೆ ನನ್ನ ಅನುಗ್ರಹದ, ಆಶೀರ್ವಾದದ ಮಾಲುಕೊಡುತ್ತೇನೆ ಎನ್ನುವ ಕ್ಷುದ್ರ ವ್ಯಾಪಾರವೇ ಧರ್ಮ? ನಾಯಕರು ಸ್ವಧರ್ಮೀಯರಲ್ಲ; ಅದಕ್ಕಾಗಿ ನಾವು ಅವರಿಗಾಗಿ ದುಡಿಯಬಾರದು; ಅವರ ತಲೆ ಹೋದರೂ ನಾವು ಸುಮ್ಮ

ನಿರಬೇಕು, ಅಲ್ಲವೇ? ಆ ಮಾತನ್ನೇ ಇನ್ನು ಅಷ್ಟುದೂರ ಎಳೆದು ನೋಡು, ಅದು ಎಲ್ಲಿಗೆ ನಿಲ್ಲುತ್ತದೆಯೋ. ಎಲ್ಲರೂ ನಿನ್ನ ಹಾಗೇ ಯೋಚಿಸಿದರೆ, ತಮ್ಮ ಧರ್ಮೀಯರಲ್ಲದೆ ಉಳಿದವರಿಗೆ ಒಳಿತಾಗಲೇ ಬಾರದು ಎಂದು ಚಿಂತಿಸಿದರೆ—ಆಗ ನನ್ನ ನಿನ್ನ ತಲೆ ಉಳಿದೀತೇನೋ ಯೋಚಿಸು. ಊಹೂ—ಭೂಮಿ ಪರಸ್ಪರ ಹೋರಾಟದ ಕುರುಕ್ಷೇತ್ರವಾಗಿ, ನೆತ್ತರ ಕಡಲಾಗಿ ಹೋಗುತ್ತದೆ. ಆ ರಕ್ತಪ್ರಳಯದಲ್ಲಿ ಮನುಷ್ಯನೂ ಉಳಿಯುವುದಿಲ್ಲ; ಧರ್ಮವೂ ಉಳಿಯುವುದಿಲ್ಲ, ಜಗತ್ತೂ ಉಳಿಯುವುದಿಲ್ಲ. ನಿಮ್ಮಂತಹ ಶಿಷ್ಯರು ಬಂದೇ ಎಷ್ಟೋ ಧರ್ಮಗಳು ನೆತ್ತರುಗೆಸರಿನಲ್ಲಿ ಹೆಸರುಳಿಯದೆ ಅಳಿಸಿ ಹೋಗಿರುವುದು. ನಿನ್ನಂತಹ ಶಿಷ್ಯರೇ ದೊರೆತರೆ ನಾಳೆ ವೀರಶೈವ ಧರ್ಮಕ್ಕಾಗುವುದೂ ಅದೇ ಗತಿಯೇ. ಛಿ! ಬಿಡು ಆ ಬುದ್ಧಿಯನ್ನು. ಧರ್ಮ ಜನಕ್ಕೆ ದಾರಿತೋರುವ ದೀಪ; ಯಾವುದೋ ಕುರುಡದಾರಿಯಲ್ಲಿ ನಡೆಸುವ ಕಣ್ಣುಕಪಡವಲ್ಲ. ಸಕಲ ಲೋಕಕ್ಕೆ ಶ್ರೇಯಾಭಿಲಾಷಿಯಾದ ಈ ಕಲ್ಯಾಣ ಜ್ಯೋತಿಯನ್ನು, ನಮ್ಮ ಪಂಥಕ್ಕೆ ಬರದವರನ್ನು ಸುಡುವ ಚಿತಾಗ್ನಿಯಾಗಿ ಮಾಡುವ, ಸತ್ತವನನ್ನು ಬದುಕಿಸುವ ಅಮೃತಕ್ಕೆ, ಸ್ವಾರ್ಥದ ನಂಜುಬೆರೆಸಿ, ಲೋಕಮಾರಕವಾದ ಹಾಲಾಹಲವನ್ನಾಗಿ ಮಾಡುವ ಅಂಧಬುದ್ಧಿಯೊಂದನ್ನೇನೇ ನೀನು ವೀರಶೈವ ಧರ್ಮವನ್ನು ಅವಲಂಬಿಸಿ ಕಲಿತದ್ದು! ಶರಣನೆಂದುಕೊಂಡರೆ ಏನೆಂದುಕೊಂಡೆ? ಸ್ವಾರ್ಥದ ಗಾಣವಾಡಿಸುವ ಗಾಣಿಗ ಎಂದುಕೊಂಡೆಯಾ? ಶರಣ ಗಂಧದ ಕೊರಡಿದ್ದಂತೆ; ತಾನು ತೆಯ್ದು ಲೋಕಕ್ಕೆ ಕಂಪನ್ನೂಡಬೇಕು; ಕಬ್ಬಿನಂತೆ ತಾನು ಹಿಂಡಿ ಲೋಕಕ್ಕೆ ಸುಧೆಯುಣಿಸಬೇಕು; ಲಿಂಗದೀಕ್ಷೆ ಈ ಪವಿತ್ರವ್ರತದ ರತ್ನಕಂಕಣ. 'ದಯೆಯೇ ಧರ್ಮದ ಮೂಲವಯ್ಯ' ಎಂದು ಸಾರಿ, ವೀರಶೈವ ಧರ್ಮಕ್ಕೆ ರತ್ನಸಿಂಹಾಸನವನ್ನು ಸ್ಥಾಪಿಸಿದ ಜಗಜ್ಯೋತಿ ಬಸವಣ್ಣನವರನ್ನು, ನಿನ್ನ ಸ್ವಾರ್ಥದ ಫಲಾಫಲವನ್ನು ತೂಗುವ ತಕ್ಕಡಿಯನ್ನಾಗಿ ಮಾಡಬೇಡ. ಸಾಧ್ಯವಿದ್ದರೆ, ಅವರನ್ನು ಗುರುಗಳು ಎಂದುಕೊಂಡ ನೀನು ಅವರ ಮಟ್ಟಕ್ಕೆ ಏರಬೇಕು. ಆ ಶಕ್ತಿ ಇಲ್ಲದಿದ್ದರೆ, ಆ ದಿವ್ಯಾತ್ಮಗಳನ್ನು ನಿನ್ನ ಅಲ್ಪತನದ ಟ್ಟಮಕ್ಕೆ ಎಳೆದು, ಅವರ ಶಿಷ್ಯರೆಂದೇ ಹೇಳಿಕೊಂಡು ಅವರಿಗೆ ಅಪಮಾನಮಾಡ

ಬೇಡ. ಸ್ವಾರ್ಥದ ಪಶು, ಮೆಯ್ದು ಕೊಬ್ಬುವ ಹುಲ್ಲುಗಾವಲಲ್ಲ ಧರ್ಮ. ಈ ಧರ್ಮದೀಕ್ಷಾ ಬದ್ಧರಾದವರು, ಏನು ಮಾಡಿದರೂ ಶಿವಮೆಚ್ಚಲಿ ಎಂದು ಮಾಡಬೇಕು, ನುಡಿಯಬೇಕೇ ಹೊರತು, ಇದರಲ್ಲಿ ನನಗೇನು ಸಿಕ್ಕಿತು ಎಂದು ಕಂಡವರ ಚಿನ್ನವನ್ನು ತನ್ನ ಒರೆಗಲ್ಲಿಗೇ ಉಜ್ಜಿಕೊಂಡು, ಗುಂಜಿ ತೂಕದ ಚಿನ್ನ ಗಳಿಸುವ ಚಿನಿವಾರ ಬುದ್ಧಿಗೆ ಇಲ್ಲಿ ಎಡೆಯಿಲ್ಲ. ನಿನ್ನ ಹಾಗೇ ನಾವೂ ಆಡಿದರೆ, ನಾಳೆ ಈ ಧರ್ಮ ರಸಾತಳಕ್ಕಿಳಿದು ಹೋದೀತು; ಶಿವತಂದೆ ಪ್ರಕ್ಷುಬ್ಧನಾಗಿ, ರುದ್ರನಾಗಿ ನಮ್ಮ, ನಿಮ್ಮ, ಎಲ್ಲರ ತಲೆಯನ್ನು ಬೇಟೆಯಾಡಿಯಾನು. ಇಂದಿಗೆ—ಇಂಥ ಮಾತು ಬಿಡು."

ಮೇಲಿಂದಮೇಲೆ, ಉಸಿರಾಡಿಸಿಕೊಳ್ಳಲೂ ಬಿಡುವು ಕೊಡದೆ, ಕೈ-ಮೈ ಅಲುಗಿಸಲು ಅವಕಾಶವಿಲ್ಲದಂತೆ ಕಂಭಕ್ಕೆ ಬಿಗಿದು ಹತ್ತು ನಾಲಗೆಯ ಚಾಟಿಯಿಂದ ಜಡಿಯುವಂತೆ ಗುರುಗಳು ಆಡಿದರು. ಆ ಮಾತನ್ನಾಡುವಾಗ, ಅವರ ಕಣ್ಣುಗಳೆರಡೂ ಉಜ್ವಲವಾಗಿ ಹೊಳೆಯುತ್ತಿದ್ದವು. ಅಗ್ನಿ ಪ್ರತ್ಯಕ್ಷನಾಗಿ, ಇದಿರು ಕುಳಿತಂತಾಯಿತು, ಎದುರು ಕುಳಿತ ಗುರುಗಳನ್ನು ಕಂಡು ನಾಗತಿಗೆ. ಸದಾ ಬೆಳುದಿಂಗಳಂತಿರುತ್ತಿದ್ದ ಗುರುಗಳ ಮುಖಕಾಂತಿ, ಇಂದು ತ್ರಿಪುರಾಸುರ ಸಂಹಾರಿಯಾದ ಶಿವನು ತೆರೆದ ಹಣೆಗಣ್ಣಿನಂತಿತ್ತು. ಅವನ ನೋಟ ತನ್ನ ಮೈಯನ್ನು ಸೋಕಿದತ್ತ ಅಗ್ನಿ ಸ್ಪರ್ಶವಾದಂತಾಯಿತು ನಾಗತಿಗೆ. ಬೇರೇನೂ ಮಾತನಾಡಲು ತೋರದೆ, ಉದ್ದಕ್ಕಾ ಅಡ್ಡ ಬಿದ್ದು ಹೇಳಿದಳು—

"ನನ್ನದು ಮಹಾಪರಾಧವಾಯಿತು ಬುದ್ಧಿ, ಮನ್ನಿಸಬೇಕು."

ಯಾವುದೋ ಬಿರುಗಾಳಿಯ ಹೊಡೆತಕ್ಕೆ ಕುಲುಕಿದಂತೆ ಆಕೆಯ ಮೈ ಕಂಪಿಸುತ್ತಿತ್ತು. ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯುತ್ತಿತ್ತು. ಮುಖ ಬಣ್ಣಗೆಟ್ಟು ವಿಕಾರವಾಗಿತ್ತು.

ಹೊರಗೆಳೆದ ಕರಾಳ ಭೀಷಣ ಖಡ್ಗವನ್ನು ಮತ್ತೆ ಒರೆ ಸೇರಿಸುವವರಂತೆ, ದಿಗ್ಗನೆ ಪ್ರಕಟವಾದ ತಮ್ಮ ಸಾತ್ವಿಕ ಕ್ರೋಧವನ್ನು ಸಂಯಮದ ಒರೆಗೆ ಸೇರಿಸಿ, ಗುರುಗಳು ಹೇಳಿದರು :

"ಮನ್ನಿಸು ಎಂದು ನಮ್ಮಲ್ಲಿ ಕೇಳಬೇಡಿ. ನೀವಾಡಿದ ಮಾತಿನಿಂದ ನಮಗೆ ಅಪಚಾರವಾಗಲಿಲ್ಲ; ಶಿವದ್ರೋಹವಾಗಿದೆ. ಆತನನ್ನು ಬೇಡಿಕೊಳ್ಳಿ.

ಮತ್ತೆ ಆ ದಾರಿಯಲ್ಲಿ ನಡೆಯಬೇಡಿ. ನಮ್ಮಿಂದ ನಿಮ್ಮಿಂದ ಈ ದುರ್ಗ,
ನಾಯಕ ಪಟ್ಟ, ಲೋಕ ಉಳಿಯುವಂತೆ ಮಾತನಾಡಬೇಡ ಮಗಳೇ.
ಅದು ಉಳಿಯುವುದು ಶಿವನ ಕೃಪೆಯಿಂದ. ಇದು ಉಳಿಯಬೇಕೆಂದು
ಆತನ ಇಚ್ಛೆ ಇದ್ದರೆ, ನಮ್ಮ ನಿಮ್ಮಂಥ ಹುಲ್ಲುಕಡ್ಡಿ ಅದಕ್ಕೆ ಇದಿರಾಗಿ
ಬದುಕುವುದುಂಟೆ ? ಒಂದು ವೇಳೆ, ಆತನ ಇಚ್ಛೆ ಇದು ಮುಗಿಯಲಿ
ಎಂದೇ ಇದ್ದರೆ, ನಾವು ಇದನ್ನು ಉಳಿಸುವುದಾದೀತೇ? 'ಹರ ಕೊಲ್ವೊಡೆ
ಪರ ಕಾಯ್ವನೇ ?' ನಾನು ಮಾಡುತ್ತೇನೆ ಎಂಬ ಭ್ರಮೆಯನ್ನು ಬಿಡು.
'ಎನ್ನ ಕಾಯುವ ನಿನ್ನ ದಂಡಿಗೆಯ ಮಾಡಯ್ಯಾ' ಎಂದು, ಆತ ನುಡಿ
ಸಿದ ಹಾಗೆ ನುಡಿ."

ಗುರುಗಳ ಮಾತನ್ನು ಕೇಳಿ, ಬೆಳಕಿನ ಮಳೆಗರೆದಂತಾಗಿ, ನಾಗ
ತಿಯ ಚಿತ್ತದಲ್ಲಿ ಹರಡಿದ ಕೊಳೆ ಎಲ್ಲವೂ ತೊಳೆದು ಹೋಗಿ ಅದು ಶುದ್ಧ
ವಾಯಿತು. ತಾನಾಡಿದ ಮಾತಿಗೆ ತನಗೇ ನಾಚಿಕೆಯಾಗಿ ನಾಗತಿ
ಹೇಳಿದಳು—

"ಪ್ರಭೋ—ನಾನು ತಮಗೆ ತಕ್ಕ ಶಿಷ್ಯಳಾಗಲಿಲ್ಲ. ನನ್ನನ್ನು
ಮನ್ನಿಸಿ ಅನುಗ್ರಹಿಸಬೇಕು. ಅಪ್ಪಣೆಯಾದಂತೆ ಮಾಡುತ್ತೇನೆ."

"ನಿನ್ನ ಚಿತ್ತದಲ್ಲಿದ್ದ ವಿಕಾರವನ್ನು ನಾನು ಬಲ್ಲೆ ಮಗಳೆ. ಈ
ಲೋಕದ ವೈಭವ, ಸುಖ, ವಿಲಾಸಗಳ ಹಸುರನ್ನು ಹರಡಿ, ಆತ್ಮ
ಪಶುವನ್ನು ಅಹಂಕಾರದ ಬಲಿಗಂಭಕ್ಕೆ ಕಟ್ಟಬೇಡ. ಮುಂದೇನಾ
ಗಲಿದೆ ಎಂಬುದನ್ನು ನೀನು ಕಾಣೆ. ನಾವು ನೀವು ಮಾಡಬಹುದಾದು
ದಿಷ್ಟೆ—'ಶಿವಾ, ಎಲ್ಲವೂ ನಿನ್ನ ಅನುಗ್ರದಿಂದ ಒಳಿತಾಗಲಿ' ಎಂದು
ಆತನ ಕರುಣೆಗೇ ಶರಣಾಗಿ, ಒಳಿತನ್ನು ಬಯಸುವುದು ; ಆದಷ್ಟು ಆ
ದಾರಿಯಲ್ಲಿ ನಡೆಯುವುದು. ಅಷ್ಟು ಮಾಡು ಮಗಳೇ. ಎಲ್ಲೂ ಕ್ರೋಧ
ವನ್ನು ಕೆಣಕಬೇಡ ; ಎಲ್ಲೂ ಸ್ವಾರ್ಥವನ್ನು ಮರೆಸಬೇಡ. ನಿನ್ನ
ಸ್ವಾರ್ಥದ ಹೋರಿ ಕೋಡು ಮಸೆದರೆ, ಉಳಿದವರಲ್ಲೂ ಆ ಪಶು
ಕೆರಳಲು ಕಾರಣವಾಗುತ್ತದೆ. ಅದಾಗಬಾರದು, ಹಾಗಾಗಿ ಪ್ರಳಯ
ಭೇರಿ ಮೊಳಗಬಾರದು ಎಂಬುದೇ ನಮ್ಮ ಬಯಕೆ. ಹೋದರೆ ನಮ್ಮ
ತಲೆ ಹೋಗಲಿ,ಲೋಕಕ್ಕೆ ಕಲ್ಯಾಣವಾಗಲಿ ಎಂದುಕೊಂಡು ಕೆಲಸ

ಮಾಡು. ನನ್ನ ನಿನ್ನ ಪ್ರತಿಷ್ಠೆಗೆ ಯಾರೂ ಮಣೆ ಹಾಕದಿದ್ದರೆ ಚಿಂತೆ ಯಿಲ್ಲ. ಮಣೆಯ ಮೇಲಿದ್ದವರಾದರೂ ಅಲ್ಲೇ ಇರಲಿ."

ಮುಂದಾಗುವುದನ್ನು ಕಂಡು, ಯಾವುದೋ ಬರಲಿರುವ ಘೋರ ವನ್ನು ನಿವಾರಿಸುತ್ತಿರುವವರಂತೆ ಹೇಳಿದರು ಗುರುಗಳು.

"ಅಪ್ಪಣೆಯಾದಂತೆ ಮಾಡುತ್ತೇನೆ. ಇಂದಿನವರೆಗಾದ ಅವಿನಯ ವನ್ನು ಮನ್ನಿಸಿ."

—ಎಂದು ಗುರುಗಳ ಅಡಿಗೆರಗಿ ಹೇಳಿದಳು ನಾಗತಿ. ಆಕೆಯ ತೆರೆದ ಅಂಜಲಿಗೆ ಪ್ರಸಾದವನ್ನು ಹಾಕಿ ಗುರುಗಳು 'ಶುಭಮಸ್ತು' ಎಂದರು.

ಅವರು ಆ ಮಾತನ್ನಾಡಿದ ರೀತಿ, ನಾಗತಿಗೇ ಅಲ್ಲ, ಲೋಕಕ್ಕೇ 'ಶುಭಮಸ್ತು' ಎಂದು ಹಾರೈಸಿ ನುಡಿದಂತಿತ್ತು.

೪

ಗುರುಗಳ ಮಾತಿನಂತೆ ನಾಯಕರನ್ನು ಕಾಣಲೆಂದು ಹೋದ ನಾಗತಿ, ನಾಯಕನನ್ನು ಕಾಣದೆಯೇ, ಅರಮನೆಯ ಬಾಗಿಲನ್ನು ಕಂಡು ಹಿಂದಿರುಗಬೇಕಾಯಿತು ಅರಮನೆಯ ಕಾರ್ಯಭಾರಿಯಾದ ಚುಕ್ಕಣ್ಣ ನಿಂದ ಮೊದಲೇ ನಾಯಕರಿಂದ ಭೇಟಿಗೆ ಅನುಮತಿ ಪಡೆದು, ಹೊತ್ತು ಗೊತ್ತು ಮಾಡಿಕೊಳ್ಳದೆ ಯಾರೂ ನಾಯಕರನ್ನು ಕಾಣುವಂತಿಲ್ಲವೆಂದು ಕೇಳಿ ನಾಗತಿ ತುಳಿದ ಸರ್ಪದಂತೆ ಸಿಡಿದೆದ್ದಳು. ಆ ಸಿಟ್ಟಿನಲ್ಲಿಯೇ ಕೇಳಿದಳು :

"ಎಂದಿನಿಂದ ಈ ಬಗೆಯ ಆಜ್ಞೆ ?"

"ಈ ನಾಯಕರು ಪಟ್ಟಕ್ಕೆ ಬಂದಂದಿನಿಂದ ಈ ಕಟ್ಟುಪಾಡು ಜಾರಿಗೆ ಬಂದಿದೆ."

"ಈ ಕಟ್ಟುಪಾಡು ನಾಯಕರ ಆಜ್ಞೆಯೇ ?"

"ಅವರ ಆಜ್ಞೆಯೆಂದೇ ನಮಗೆ ಅಪ್ಪಣೆಮಾಡಲಾಗಿದೆ."

"ಯಾರು ಅಪ್ಪಣೆ ಮಾಡಿದವರು ?"

"ಪ್ರಧಾನಿಗಳು."

"ಈ ಆಜ್ಞೆ ಉಳಿದವರಿಗಿರಬಹುದು. ಆದರೆ ನಮಗೂ ಇದು ಅನ್ವಯಿಸುತ್ತದೆಯೇ?"

"ಪ್ರಧಾನಿಗಳೊಬ್ಬರ ಪಿನಾ ಉಳಿದವರೆಲ್ಲರಿಗೂ ಇದು ಅನ್ವಯಿಸುತ್ತದೆ. ತಮಗೆ ಇವರಿಂದ ವಿನಾಯಿತಿ ಇದೆಯೆಂದು ನಮಗೆ ತಿಳಿಯದು. ಪ್ರಧಾನಿಗಳಿಂದಲೇ ಆ ರೀತಿ ಅಪ್ಪಣೆಯಾದಲ್ಲಿ ತಾವು ಬೇಕಾದಾಗ ಅರಮನೆಗೆ ಬಂದು ಹೋಗಬಹುದು. ಯಾರೂ ತಮಗೆ ಅಡ್ಡಿ ಮಾಡುವುದಿಲ್ಲ. ಈಗಲೂ ತಾವು ತಮ್ಮ ಕೆಲಸವೇನೆಂದು ತಿಳಿಸಿದರೆ, ಸನ್ನಿಧಾನಕ್ಕೆ ಆ ವಿಷಯವನ್ನು ಅರಿಕೆಮಾಡಿ, ಅವರ ಸಮಯ ನೋಡಿಕೊಂಡು ತಮಗೆ ಸುದ್ದಿ ಕಳುಹಿಸುತ್ತೇವೆ. ಸೇವಕನಿಂದ ಮತ್ತೇನಾದರೂ ಕೆಲಸವಿದ್ದರೆ ಅಪ್ಪಣೆಮಾಡಬೇಕು."

—ಎಂದ ಚುಕ್ಕಣ್ಣ ಇನ್ನೂ ಆ ವಿಷಯದಲ್ಲಿ ಹೆಚ್ಚು ಮಾತನಾಡಲು ಅವಕಾಶವಿಲ್ಲವೆಂಬುದನ್ನು ಸೂಚಿಸಿ.

ಆ ಮಾತನ್ನು ಕೇಳಿ ನಾಗತಿಯ ನೆತ್ತರು ಕುದಿಯಿತು. ತಾನು, ದುರ್ಗದ ಹಿರಿಯ ನಾಗತಿ, ತಾನೇ ಅರಮನೆಗೆ ಹೋಗಲು ಬೇರೆಯವರ ಅಪ್ಪಣೆ ಪಡೆಯಬೇಕು; ಬೇಕಾದಾಗ ಬಂದು ಹೋಗಲು ಪ್ರಧಾನಿಗಳಿಂದ ವಿನಾಯಿತಿ ಪಡೆಯಬೇಕು; ಎಂಥ ನಾಚಿಕೆಗೇಡಿನ ಮಾತು; ಎಂಥ ನಗೆಪಾಟಲಿನ ಪರಿಸ್ಥಿತಿ.

ಕುದಿಯುತ್ತಿದ್ದ ಕ್ರೋಧದಲ್ಲೇ ಹಿಂದಿರುಗಿ ಮೇನೆಯಲ್ಲಿ ಕುಳಿತು, ಮೇನೆಯನ್ನು ನೇರವಾಗಿ ಪ್ರಧಾನಿಗಳ ಮನೆಗೆ ಕೊಂಡೊಯ್ಯಲು ಬೋಯಿಗಳಿಗೆ ಹೇಳಲು, ದಾಸಿಗೆ ಹೇಳಿದಳು. ಅರಮನೆಯ ಮಹಾದ್ವಾರದವರೆಗೂ ಬಂದ ನಾಗತಿ ನಾಯಕರನ್ನು ಕಾಣದೆಯೇ ಬಾಗಿಲಲ್ಲೇ ತಡೆಯಲ್ಪಟ್ಟು ಹಿಂದಿರುಗುವ ದೃಶ್ಯವನ್ನು ಕಾವಲು ಪಡೆಯವರು ಚಕಿತರಾಗಿ ನಿಂತು ನೋಡುತ್ತಿದ್ದರು. ಬಿಟ್ಟಕಣ್ಣು ಬಿಟ್ಟಹಾಗೆಯೇ ತನ್ನನ್ನು ನೋಡುತ್ತಿರುವ ಆಳುಗಳನ್ನು ಕಂಡು, ನಾಗತಿಗೆ ಉರಿಯುವ ಗಾಯದ ಮೇಲೆ ಉಪ್ಪುನೀರು ಚೆಲ್ಲಿದಂತಾಯಿತು ಈ ಅಪಮಾನ. ಅದನ್ನೇ ಮೆಲುಕು ಹಾಕುತ್ತಾ ಹಾಕುತ್ತಾ ಹೊಗೆಯಂತೆ ಆಕೆಯ ಹೃದಯ ಉರಿಯಿತು. ಆ ಕ್ರೋಧದಲ್ಲಿ ಆಕೆ ವೇಗವಾಗಿ ಬಂದ ಮೇಲೆ

ಪ್ರಧಾನಿಯ ಮನೆಯ ಬಾಗಿಲನ್ನು ತಲುಪಿದುದೂ ತಿಳಿಯಲಿಲ್ಲ. ದಾಸಿಯೇ ಪ್ರಧಾನಿಗಳ ಮನೆಬಂದಿತೆಂದು ಎಚ್ಚರಿಸಿದಳು.

"ಪ್ರಧಾನಿಗಳಿಗೂ ನಮ್ಮನ್ನು ಕಾಣಲು ಹೊತ್ತಿದೆಯೊ ಇಲ್ಲವೋ ವಿಚಾರಿಸು."

—ಎಂದಳು ನಾಗತಿ, ಕಂಡವರ ಮೇಲೆ ಹಾಯುವೆನೆನ್ನುವ ಸಿಟ್ಟನ್ನು ಒತ್ತಿ ಹಿಡಿಯುತ್ತ.

ಬಾಗಿಲ ಆಳುಗಳಿಂದ ನಾಗತಿ ಬಂದಿರುವುದನ್ನು ಅರಿತ ಮುದ್ದಣ್ಣ ತಾನೇ ಬಾಗಿಲವರೆಗೂ ಬಂದು ನಾಗತಿಯನ್ನು ಇದಿರುಗೊಂಡು, ಆಕಸ್ಮಿಕವಾಗಿ ಆಕೆಯೇ ತನ್ನ ಮನೆಬಾಗಿಲವರೆಗೆ ಬಂದುದರಿಂದ ಆಶ್ಚರ್ಯ ವಾದವನಂತೆ, ವ್ಯಥೆಯಾದವನಂತೆ—

"ತಾವೇ ಇಷ್ಟು ದೂರ ದಯಮಾಡಿಸುವುದೇ? ಸುದ್ದಿ ಕಳಿಸಿದ್ದರೆ ನಾನೇ ತಮ್ಮ ಮನೆಯವರೆವಿಗೂ ಬಂದು ದರ್ಶನ ಪಡೆಯುತ್ತಿದ್ದೆ. ತಮಗೆ ವಿನಾಕಾರಣ ತುಂಬಾ ತೊಂದರೆಯಾಯಿತು. ಅವಕಾಶವಿದ್ದರೆ, ಚಿತ್ತಕ್ಕೆ ಆಯಾಸವಾಗದಿದ್ದರೆ, ಬಡವರ ಮನೆಯೊಳಗೆ ದಯಮಾಡಿಸಿ ಪಾದಧೂಳಿಯನ್ನು ಅನುಗ್ರಹಿಸಬೇಕು."

—ಎಂದ, ನಾಗತಿಗೆ ಮುಜರೆ ಮಾಡಿ.

"ಓ! ಪ್ರಧಾನಿಗಳಿಗಾದರೂ ನಮ್ಮ ಮೇಲೆ ಅಷ್ಟು ವಿಶ್ವಾಸ ಉಳಿದಿದೆಯಲ್ಲ. ಕೃತಾರ್ಥರಾದೆವು."

—ಬೇಡ ಬೇಡವೆಂದರೂ ನಾಗತಿಯ ಮನದಲ್ಲಿದ್ದ ಕ್ರೋಧ ಮಾತಿನಲ್ಲಿ ವ್ಯಂಗವಾಗಿ ವ್ಯೈದಾಳಿತು. ಅದು ಅರಿವಾಗಿಯೂ ಆಗದವನಂತೆ ಮುದ್ದಣ್ಣ—

"ತಾಯಿಯವರಿಗೇಕೋ ನಮ್ಮ ಮೇಲೆ ಮುನಿಸಾದಂತಿದೆ. ನಮ್ಮಿಂದೇನಾದರೂ ಅಪಚಾರವಾಗಿದ್ದರೆ ಕ್ಷಮಿಸಬೇಕು."—ಎಂದ.

"ಮುನಿಸೇ! ನಮ್ಮ ಮುನಿಸು ಯಾರಿಗೆ ಲೆಕ್ಕ? ಈ ದಿನ ನಮ್ಮ ಸ್ಥಾನ ಏನೆಂಬುದೂ ಅರಿವಾಯಿತು. ಅದಕ್ಕೇ ಪ್ರಧಾನಿಗಳ ಮನೆಗೆ ಬರಬೇಕಾದರೂ ಮೊದಲೇ ತಿಳಿಸಿ, ಅವರ ಅಪ್ಪಣೆ ಚೀಟಿ ಪಡೆದು ಬರಬೇಕೇನೋ ಎಂದಿದ್ದೆವು. ಹಾಗೇನೂ ಇಲ್ಲವೆಂಬುದನ್ನರಿತು ಸಂತೋಷವಾಯಿತು."

"ತಮ್ಮ ಮಾತು ಕೇಳಿದರೆ ಏನೋ ವಿಶೇಷ ನಡೆದಿರುವಂತಿದೆ. ತಮಗೆ ಯಾರೋ ಅಪಚಾರ ಬಗೆದಿರುವಂತಿದೆ. ಯಾರು, ಎಲ್ಲಿ ಎಂಬುದು ಅಪ್ಪಣೆಯಾದರೆ ಅವರಿಗೆ ತಕ್ಕ ಬಂದೋಬಸ್ತು ಮಾಡುತ್ತೇನೆ. ತಾವು ಚಿಂತಿಸಬಾರದು. ಆಯಾಸವಾಗದಿದ್ದರೆ ಒಳಗೆ ಬಂದು ಇರುವ ವಿಚಾರ ತಿಳಿಸಬೇಕು. ಇದು ಈ ಬಗೆಯ ಮಾತಿಗೆ ಸರಿಯಾದ ಸ್ಥಳವಲ್ಲ."

—ಎಂದ ಮುದ್ದಣ್ಣ ಬಾಗಿ, ಮೇನೆಯಿಂದಿಳಿದ ನಾಗತಿಗೆ ತಾನೇ ಬಾಗಿಲತ್ತ ದಾರಿ ತೋರಿ.

"ನಿಮಗಿರುವ ವಿನಯದಲ್ಲಿ ಅರ್ಧದಷ್ಟಾದರೂ ಅರಮನೆಯ ಕಾರ್ಯ ಭಾರಿಗಳಿಗಿದ್ದಿದ್ದರೆ ಇಂದಿನ ಪ್ರಸಂಗವೇ ಒದಗುತ್ತಿರಲಿಲ್ಲ."

—ಎಂದಳು ನಾಗತಿ ಒಳಗೆ ಬಂದು, ಆಳುಗಳು ಸಿದ್ಧಪಡಿಸಿದ ಗೌರವ ಪೀಠದಲ್ಲಿ ಕುಳಿತುಕೊಳ್ಳುತ್ತಾ.

ನಾಗತಿ ಹೇಳಿದುದನ್ನು ಕೇಳಿ ಮುದ್ದಣ್ಣ ಅಲ್ಲಿದ್ದ ಒಬ್ಬಿಬ್ಬರು ಆಳು ಗಳಿಗೂ ಹೊರಗೆ ಹೋಗಲು ಸೂಚಿಸಿ, ಸುತ್ತಲೂ ಕಣ್ಣಾಡಿಸಿ, ಅಲ್ಲಿ ಬೇರೆ ಯಾರೂ ಇಲ್ಲವೆಂಬುದನ್ನು ಮನವರಿಕೆ ಮಾಡಿಕೊಂಡು ಹೇಳಿದ—

"ಈಗ ಅಪ್ಪಣೆಯಾಗಬೇಕು. ಅರಮನೆಯ ಕಾರ್ಯಭಾರಿಗಳು ಏನು ಮಾಡಬಾರದ್ದು ಮಾಡಿದರು."

"ಅವರ ಉದ್ಧಟತನಕ್ಕೆ ತಾವು ತಕ್ಕ ಮದ್ದರೆದು, ಮತ್ತೆ ಇಂದಾ ದದ್ದು ಆಗದಂತೆ ತಾಕೀತು ಮಾಡಬೇಕು."

"ಚುಕ್ಕಣ್ಣ ಹಾಗೆಲ್ಲಾ ಸ್ಥಾನಮೀರಿ ವರ್ತಿಸುವವನಲ್ಲ. ಆ ನಂಬಿಕೆ ಆತನಲ್ಲಿ ನನಗಿದ್ದುದರಿಂದಲೇ ಆ ಜವಾಬದಾರಿಯ ಸ್ಥಾನಕ್ಕೆ ಆತನನ್ನು ನೇಮಕ ಮಾಡಿದೆ."

—ನಾಗತಿಯ ಮಾತನ್ನು ನಂಬದವನಂತೆ, ತನಗೆ ತಾನೇ ಹೇಳಿ ಕೊಳ್ಳುವವನಂತೆ ಆಡಿದ ಮುದ್ದಣ್ಣ.

"ಇರಬಹುದು, ಆದರೆ ಯಾರ ನೆತ್ತಿಗೂ ಪಿತ್ತವೇರಿಸುವಂಥ ಸ್ಥಾನ ಅದು."

"ಏನು ಮಾಡಿದ?"

"ನಾಯಕರನ್ನು ನೋಡಬೇಕೆಂದು ಹೋದ ನಮ್ಮನ್ನೇ, ಅನಧಿ

ಕಾರಿಗಳಂತೆ ಅರಮನೆಯ ಬಾಗಿಲಲ್ಲೇ ತಡೆದು, ಪ್ರಧಾನಿಗಳ ಅಪ್ಪಣೆ ಚೀಟಿ ತರಬೇಕು ಎಂದು ಮುಖಮುರಿದು ಹಿಂದಕ್ಕಟ್ಟಿದ. ಅದು ಅಧಿಕಾರ ಪಿತ್ತವಲ್ಲವಾದರೆ ಮತ್ತೇನು?"

"ನಿಮ್ಮನ್ನು ಅರಮನೆಯ ಬಾಗಿಲಲ್ಲೇ ತಡೆದನೇ? ನಮ್ಮ ಅಪ್ಪಣೆ ಚೀಟಿ ತರದೆ ಒಳಗೆ ಬಿಡುವುದಿಲ್ಲ ಎಂದು ನಿಮಗೂ ಹೇಳಿದನೇ? ಮೂರ್ಖ, ಶುದ್ಧ ಮೂರ್ಖ."

"ನಿಮ್ಮ ಅಪ್ಪಣೆ ಇಲ್ಲದೆ ಯಾರೂ ಅರಮನೆಯ ಪ್ರವೇಶ ಮಾಡಬಾರದು, ಯಾರೂ ನಾಯಕರನ್ನು ಕಾಣಲಾಗದು ಎಂದು ನೀವು ಅಪ್ಪಣೆ ಮಾಡಿದೀರಾ ದಳವಾಯಿಗಳೇ."

"ಅಂಥ ಅಪ್ಪಣೆ ಮಾಡಿದ್ದೇನೋ ಉಂಟು........"

"ಏಕೆ ?"

"ತಾಯಿ—ತಮಗೆ ಇಂದಿನ ರಾಜಕಾರಣ, ನಮ್ಮ ಹೊಣೆಗಾರಿಕೆ ತಿಳಿಯದು. ವಿಶೇಷ ಪರಿಸ್ಥಿತಿಗೆ ಅನುಸರಿಸಿ, ನಾವೂ ವಿಶೇಷ ಆಜ್ಞೆ ಹೊರಡಿಸಬೇಕಾಗುತ್ತದೆ. ಹೊರಡಿಸಿ ಕೆಟ್ಟ ಹೆಸರೂ ಹೊರಬೇಕಾಗುತ್ತದೆ. ಅದು ಆಡಳಿತ ಭಾರ ಹೊತ್ತ ನಮ್ಮ ದುರದೃಷ್ಟ."

"ನಾಯಕರನ್ನು ನಾವೂ ನೋಡಲು ಅಪ್ಪಣೆ ಪಡೆಯದೆ ಕಾಣಬಾರದಂಥ ವಿಶೇಷ ಪರಿಸ್ಥಿತಿ ಏನು ಬಂದಿದೆ ಇಂದು?"

"ಅದೆಲ್ಲವನ್ನೂ ತಮ್ಮಲ್ಲಿ ವಿವರಿಸಲಾರೆ. ಈ ಬಗೆಯ ಅಪ್ಪಣೆ ಹೊರಡಿಸಬೇಕಾದ ಪರಿಸ್ಥಿತಿ ಇದೆ. ಆದರೆ ಈ ಅಪ್ಪಣೆ ತಮಗೂ ಅನ್ವಯಿಸಬೇಕೆಂಬ ಉದ್ದೇಶ ನನಗಿರಲಿಲ್ಲ. ಚುಕ್ಕಣ್ಣನೂ ಈ ಸಂದರ್ಭದಲ್ಲಿ ವಿವೇಚನೆಯನ್ನುಪಯೋಗಿಸಿ, ತಮ್ಮನ್ನು ನಾಯಕರನ್ನು ಕಾಣಲು ಬಿಟ್ಟಿದ್ದರೆ ತೊಂದರೆಯಾಗುತ್ತಿರಲಿಲ್ಲ. ಆದರೆ ಆತ ನಿಷ್ಠುರವಾಗಿ ಆಜ್ಞೆಯನ್ನು ಚಲಾಯಿಸಿದ. ಅದನ್ನು ತಾವು ತಪ್ಪು ಎಂದು ತಿಳಿದುಕೊಳ್ಳಬಾರದು; ವಿವೇಚನೆ ಸಾಲದು ಎಂದುಕೊಂಡು ಕ್ಷಮಿಸಬೇಕು. ಮತ್ತೊಮ್ಮೆ ಹೀಗಾಗದಂತೆ ನಾವೂ ಆತನಿಗೆ ಆಜ್ಞೆ ಮಾಡುತ್ತೇವೆ. ತಪ್ಪು ಆತನದಲ್ಲ, ನಮ್ಮದು ಎಂದು ತಿಳಿದು ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು. ಹಾಗೇ—"

—ಆಡುತ್ತಿದ್ದ ಮಾತನ್ನು ನಡುವೆಯೇ ತಡೆದು ಹೇಳಿದ ಮುದ್ದಣ್ಣ

"ಹಾಗೇ—ಏನು?"

"ಹಾಗೇ—ನಾಯಕರು ಬೇರೆ, ನಾವು ಬೇರೆ, ನೀವು ಬೇರೆ ಎಂಬ ಭಾವನೆ ತಮ್ಮಲ್ಲಿಲ್ಲವಾದರೆ, ನಾಯಕರಲ್ಲಿ ಅದೇನು ಕಾರ್ಯವಿತ್ತೋ ತಿಳಿಸಿದರೆ, ನಾನೇ ನಾಯಕರಲ್ಲಿ ವಿನಂತಿ ಮಾಡಿಕೊಂಡು, ಅವರೇ ತಮ್ಮನ್ನು ಕಾಣಲು ಹೇಳುತ್ತೇನೆ."

"ತಮ್ಮಲ್ಲಿ ಹೇಳುವಂಥ ದೊಡ್ಡ ರಾಜಕಾರಣದ ವಿಚಾರವೇನೂ ಅಲ್ಲ ಇದು. ಇದು ನಾಯಕರಿಗೇ ಸಂಬಂಧಿಸಿದ ವಿಷಯ."

—ಮುದ್ದಣ್ಣನ ವಿನಯದಿಂದ ಎಚ್ಚರ ತಪ್ಪದೆ ಹೇಳಿದಳು ನಾಗತಿ.

"ಒಂದು ಮಾತನ್ನು ನಾನು ಬಿನ್ನವಿಸಿಕೊಳ್ಳಬಹುದೇ?"

"ಹೇಳಿ."

"ನಾಯಕರು ದುರ್ಗದ ದೊರೆಗಳು. ಅವರು ಏನು ಮಾಡಲಿ, ಬಿಡಲಿ ಅದೇ ರಾಜಕಾರಣವಾಗುತ್ತದೆ. ರಾಜಕಾರಣವೆಂದರೆ ದೇಶ ವಿದೇಶಗಳ ಮಾತೇ ಅಲ್ಲ—ಅಲ್ಲವೇ?"

"ನಿಜ."

"ಅಂದಮೇಲೆ—ನಾಯಕರ ಕಾರ್ಯವನ್ನು ನಡೆಸುವ ಹೊಣೆ ಹೊತ್ತ ನಮಗೂ ರಾಜಕಾರಣಕ್ಕೂ ಸಂಬಂಧವಿಲ್ಲವೇ? ಆದುದರಿಂದ ತಾವು ಯಾವ ವಿಚಾರವಾದರೂ, ಸಣ್ಣದು, ದೊಡ್ಡದು ಎಂದುಕೊಳ್ಳದೆ, ನಮಗೆ ಅಪ್ಪಣೆ ಮಾಡಬಹುದು—ನಮ್ಮಲ್ಲಿ ನಂಬಿಕೆ ಇದ್ದರೆ."

"ತಮ್ಮಲ್ಲಿ ನಂಬಿಕೆ ಇಡದೆ ಬೇರೆ ಯಾರಲ್ಲಿ ಇಡಬೇಕು. ಆದರೆ ಇದು ಹೆಂಗಸರ ಮಾತು."

"ಅಂದರೆ...."

"ಎಷ್ಟಾದರೂ ನಾಯಕರು ನಮ್ಮ ಮೈದುನಂದಿರು. ಅವರು ಹೀಗೆ ಒಂಟಿಯಾಗಿರುವುದನ್ನು ನೋಡಿ ಕರಳು ಚುರುಕ್ ಎಂದಿತು. ಅದಕ್ಕೇ 'ಎಷ್ಟು ದಿನ ಹೀಗೆ ಒಂಟಿಯಾಗಿರುತ್ತೀರಿ. ಮದುವೆಯನ್ನಾದರೂ ಮಾಡಿಕೊಳ್ಳಿ' ಎಂದು ಹೇಳಬೇಕೆನಿಸಿತು. ಆ ಮಾತು ಹೇಳಬೇಕೆಂದೇ ಹೋದದ್ದು. ಈ ಮಾತನ್ನು ನೀವೇ ಹೇಳಬಹುದಾಗಿತ್ತು. ಆದರೆ ರಾಜಕಾರಣದ ಗೊಂದಲದಲ್ಲಿ ನಿಮಗಿದು ಮರೆಯಾಯಿತು. ಅಲ್ಲದೆ

ಗಂಡಸರಿಗೆ ಇಂಥ ವಿಷಯದಲ್ಲಿ ಬುದ್ಧಿ ಬೇಗ ಓಡುವುದಿಲ್ಲ. ಆದರೆ ಹೆಂಗಸರಿಗೆ ಇಂಥ ಮಾತೇ ದೊಡ್ಡದು. ಅಲ್ಲವೇ ದಳವಾಯಿಗಳೇ? ಅಲ್ಲದೆ ಇದು ನಿಮಗೆ ತಿಳಿಸುವಷ್ಟು ದೊಡ್ಡ ವಿಷಯವೇನೂ ಅಲ್ಲ."

—ಯಾವುದೋ ತೀರಾ ಅಲ್ಪವಿಷಯವನ್ನು ಹೇಳುವ ಧ್ವನಿಯಲ್ಲಿ ಹೇಳಿದಳು ನಾಗತಿ. ಆದರೆ ಆ ಧ್ವನಿಗೆ ಮರುಳಾಗುವಷ್ಟು ಬೇಹುಷಾರಿಯಾಗಿರಲಿಲ್ಲ ಮುದ್ದಣ್ಣ. ನಾಗತಿಯ ಮಾತನ್ನು ಕೇಳಿದ ಕೂಡಲೇ, ಎಲ್ಲೋ ಕತ್ತಲಲ್ಲಿ ಅಲೆಯುತ್ತಿದ್ದವನ ಇದಿರು ಚಕ್ಕನೆ ಬೆಳಕು ಬಿದ್ದು ದಾರಿ ಕಂಡಂತಾಯಿತು. ಆದರೆ ಅದನ್ನು ಮುಖದಲ್ಲಾಗಲಿ, ಮಾತಿನಲ್ಲಾಗಲಿ ತೋರಗೊಡದೆ ನಗುತ್ತಾ—

"ನಿಜ, ನಿಜ. ಅತ್ತ ಕಡೆ ನಮ್ಮ ಲಕ್ಷ್ಯವೇ ಹೋಗಿರಲಿಲ್ಲ. ನಾಯಕರೂ ಮನುಷ್ಯರು ಎಂಬುದನ್ನೇ ಮರೆತುಬಿಟ್ಟಿದ್ದೆವು. ಅಲ್ಲದೆ ಪಟ್ಟದ ರಾಣಿ ಇಲ್ಲದೆ ಸಿಂಹಾಸನವೂ ಶೋಭಿಸುವುದಿಲ್ಲ. ಹಾಗಿರುವುದು ಸಂಪ್ರದಾಯವೂ ಅಲ್ಲ. ನೀವು ಅದನ್ನು ನೆನಪಿಸಿ ಒಳ್ಳೆಯದನ್ನು ಮಾಡಿದಿರಿ. ನಮಗಿಂತ ನಿಮ್ಮ ಬುದ್ಧಿ ಬಹಳ ಸೂಕ್ಷ್ಮ. ಆಯಿತು—ಚುಕ್ಕಣ್ಣನಿಗೆ ಹೇಳುತ್ತೇನೆ. ತಾವು ಬೇಕಾದಾಗ ನಾಯಕರನ್ನು ಕಾಣಬಹುದು. ಮತ್ತೆ ಅವನಿಂದ ಇಂದಾದಂಥ ಉದ್ಧಟತನವಾಗದಂತೆ ತಾಕೀತು ಮಾಡುತ್ತೇನೆ."

—ಎಂದ.

"ಅವರ ಕೆಲಸ ಅವರು ಮಾಡಿದುದಕ್ಕೆ ನಮಗೇನೂ ಅಸಮಾಧಾನ ವಿಲ್ಲ. ನೀವೇ ಹೇಳಿದಂತೆ ಅವರಿಗೆ ವಿವೇಚನೆ ಬೇಕು. ಅಷ್ಟು ಮಾತ್ರ ಹೇಳಿದರೂ ಸಾಕು. ನಾವಿನ್ನು ಬರಬಹುದೇ?"

"ಅಪ್ಪಣೆ. ಚುಕ್ಕಣ್ಣನ ಅವಿನಯದಿಂದ ತಮಗೆ ಆಯಾಸವಾದರೂ, ನಮಗೇನೋ ಅದರಿಂದ ಮನೆಬಾಗಿಲಲ್ಲೇ ತಮ್ಮನ್ನು ಕಾಣುವ ಯೋಗ ಒದಗಿತು. ಧನ್ಯನಾದೆ. ತಾವು ನನ್ನಲ್ಲಿ ಇಂದು ತೋರಿದ ವಿಶ್ವಾಸವನ್ನೇ ಸದಾ ತೋರಬೇಕು. ಚಿಕ್ಕಮಾತಾಗಲಿ, ದೊಡ್ಡಮಾತಾಗಲಿ ನಮ್ಮಲ್ಲಿ ನಂಬಿಕೆ ಇಟ್ಟು, ನಾನೂ ನಿಮ್ಮವನೇ ಎಂದು ತಿಳಿದುಕೊಂಡು ಹೇಳಬೇಕು. ತಾವು ಕಾಲಿನಿಂದ ತೋರಿದುದನ್ನು ನಾವು ತಲೆಯಲ್ಲಿ ಹೊತ್ತು ನಡೆಸಲು ಸದಾ ಸಿದ್ಧರಾಗಿದೇವೆ."

—ಎಂದು ಮುದ್ದಣ್ಣ, ಹೊರಡಲು ಸಿದ್ಧವಾಗಿ ನಿಂತ ನಾಗತಿಗೆ, ತಲೆಬಾಗಿಸಿ ಮುಜರೆಮಾಡಿ ಹೇಳಿದ.

"ನಮಗೇನೋ ತಮ್ಮ ಮೇಲೆ ವಿಶ್ವಾಸವಿದ್ದೇ ಇದೆ. ಆದರೆ ತಾವೂ ಅದೇ ಬಗೆಯ ವಿಶ್ವಾಸವನ್ನು ನಡೆಸಿಕೊಂಡು ಬರಬೇಕು. ಆಯಿತು— ನಾವಿನ್ನು ಹೊರಡೋಣವೇ?"

—ನಾಗತಿ ಕೇಳಿದಳು.

"ಅಪ್ಪಣೆ."

—ಎಂದ ಮುದ್ದಣ್ಣ, ಆಕೆಗಿಂತ ಮುಂದಾಗಿ ನಡೆದು, ಆಳು ಮುಚ್ಚಿಹೋಗಿದ್ದ ಬಾಗಿಲನ್ನು ತೆರೆದು, ನಾಗತಿಗೆ ದಾರಿ ತೋರಿಸಿ.

ನಾಗತಿಯು ದಾಸಿಯೊಂದಿಗೆ ಮೇನೆಯಲ್ಲಿ ಕುಳಿತುಹೋಗುವ ವರೆಗೂ ಹಾಗೇ ನೋಡುತ್ತಾ ನಿಂತಿದ್ದ. ಆ ಮೇನೆಯನ್ನು ನೋಡುವು ದಕ್ಕಿಂತ ಹೆಚ್ಚಾಗಿ, ಅವನ ಕಣ್ಣು ಬೇರಾವುದನ್ನೋ ಭೇದಿಸಿ ನೋಡು ವಂತಿತ್ತು. ಎಂತಲೇ ಇದಿರು ಬಂದ ಚಿಕ್ಕಣ್ಣನೂ ಆತನಿಗೆ ಕಾಣಲಿಲ್ಲ.

"ಅಣ್ಣನವರು ಏನೋ ಭಾರಿ ಯೋಚನೆಯಲ್ಲಿರುವಂತಿದೆ.

–ಮೈಮರೆತು ಮಾತನಾಡಿಸದೆ ನಿಂತ ಮುದ್ದಣ್ಣನನ್ನು ಚಿಕ್ಕಣ್ಣನೇ ಮಾತನಾಡಿಸಿದ.

"ಆ—ಓ—ನೀನೇ. ನೀನು ಯಾವಾಗ ಬಂದೆ ಚಿಕ್ಕಣ್ಣ?"

"ಆಗಲೇ ಬಂದೆ. ನಾಗತಿಯವರು ಬಂದಿದ್ದಾರೆ, ಯಾರನ್ನು ಕಾಣಲು ಬಿಡುವಂತಿಲ್ಲ ಎಂದು ಬಾಗಿಲ ಆಳು ಹೇಳಿದ. ಅದು ಮುಗಿ ಯಲಿ ಎಂದು ಕಾದಿದ್ದೆ. ಏನು—ನಾಗತಿಯವರೇ ಇಷ್ಟುದೂರ ದಯ ಮಾಡಿಸಿದ್ದು?"

"ಮೂಗು ಹಿಡಿದರೆ ಬಾಯಿ ತಾನಾಗಿಯೇ ತೆರೆಯುತ್ತದೆ. ನಾಗತಿ ಯವರೇನು, ನಾಯಕರೇ ಹೀಗೆ ನಮ್ಮ ಬಾಗಿಲಲ್ಲಿ ಬಂದು ನಿಲ್ಲುವ ಕಾಲವೂ ಬರುತ್ತದೆ ಚಿಕ್ಕಣ್ಣ."

"ನಾವೂ ಅದನ್ನೇ ಕಾಯುತ್ತಿದ್ದೇವೆ."

"ಅದೂ ಬಹಳ ದೂರವಿಲ್ಲ. ಆದರೆ ಅಲ್ಲಿಯವರೆಗೆ ನಾವು ಎಷ್ಟು ಎಚ್ಚರವಾಗಿದ್ದರೂ ಸಾಲದು."

"ಏಕೆ? ಏನಾದರೂ ವಿಶೇಷ ನಡೆಯಿತೇನು?"

—ಮುದ್ದಣ್ಣನ ಮಾತು ಕೇಳಿ ಕುತೂಹಲ ಕೆರಳಿ ಕೇಳಿದ ಚಿಕ್ಕಣ್ಣ.

"ನಮ್ಮ ಗೂಡಿನಲ್ಲಿ ಸಿಕ್ಕುಬಿದ್ದಿರುವ ಪಾರಿವಾಳವನ್ನು ತಮ್ಮ ಗೂಡಿಗೆ ಇಳಿಸಿಕೊಳ್ಳುವ ಜಾಣತನ ತೋರಿಸುತ್ತಿದ್ದಾರೆ ಚಿಕ್ಕಣ್ಣ. ಆಗಲಿ, ಆಗಲಿ, ಅವರು ಹೇಳಿದ ಹಕ್ಕಿಯನ್ನು ನಾವೇ ತೋರಿಸಿದ ರಾಯಿತು."

—ಎಂದ ಮುದ್ದಣ್ಣ ನಗುತ್ತಾ.

"ಎಂಥ ಹಕ್ಕಿ?"

—ಮುದ್ದಣ್ಣನ ಮಾತು ಅರ್ಥವಾಗದೆ ಕೇಳಿದ ಚಿಕ್ಕಣ್ಣ.

"ಹೆಣ್ಣು ಹಕ್ಕಿ!"

—ಎಂದ ಮುದ್ದಣ್ಣ.

ಮುದ್ದಣ್ಣನ ಆ ಒಂದು ಮಾತಿನಲ್ಲಿ ಅಡಗಿದ ವಿಸ್ತಾರವಾದ ತಂತ್ರ ಪ್ರಪಂಚವನ್ನು ಬಿಡಿಸಿನೋಡುತ್ತ, ಬೆರಗಾಗಿ ನಿಂತ ಚಿಕ್ಕಣ್ಣ.

೫

ಅರಮನೆಯ ದಾಸಿದಾಸಿಯರಾರಿಗೂ ಆ ದಿನ ಬಿಡುವಿದ್ದಂತಿರಲಿಲ್ಲ. ನಾಯಕರ ಖಾಸಾ ಸಜ್ಜೆಯ ಮನೆಯನಂತೂ ವಿವಾಹಮಂಟಪದಂತೆ ಸಿಂಗರಿಸುತ್ತಿದ್ದಾರೆ. ಸಂಜೆಯ ವೇಳೆಗೆ ಶಯ್ಯಾಗೃಹ ಒಸಗೆಯ ಕೋಣೆ ಯಂತೆ ಸಿಂಗಾರವಾಗಿದೆ. ಶಯ್ಯಾಗೃಹದ ನಾಲ್ಕು ಮೂಲೆಗಳಲ್ಲಿಯೂ ಚಿನ್ನದ ಮುಲಾಮುಮಾಡಿದ ಬೆಳ್ಳಿಯ ಪೀಠಗಳ ಮೇಲೆ ನಿಂತ ಆಳೆತ್ತರದ ಬೆಳ್ಳಿಯ ಸ್ತ್ರೀ ವಿಗ್ರಹಗಳು ತಮ್ಮ ಬೊಗಸೆಯಲ್ಲಿ ಮಾದಕವಾದ ಪರಿಮಳ ವನ್ನು ಹರಡುತ್ತಾ ಉರಿಯುತ್ತಿರುವ ಅಗರು ಬತ್ತಿಗಳನ್ನು ಹಿಡಿದಿವೆ. ಗೋಡೆಯ ಮೇಲೆ ರತಿಶಾಸ್ತ್ರದ ವಿವಿಧ ಬಂಧಗಳನ್ನು ಚಿತ್ರಿಸುವ ಚಿತ್ರ ಗಳು ತೂಗಿವೆ. ಕೊಠಡಿಯ ಸೂರು ಕಾಣದಂತೆ, ಬಗೆಬಗೆಯ ಹೂಮಾಲೆ ಗಳ ಅಲಂಕಾರವಾಗಿದೆ. ಮಂಚವಂತೂ, ಗುಲಾಬಿ, ಸಂಪಗೆ, ಜಾಜಿ, ಮಲ್ಲಿಗೆಗಳ ಹೂಮಾಲೆಯಲ್ಲಿ ಲತಾಗೃಹದಂತಿದೆ. ಮಂಚಕ್ಕೆ ಎದುರಾಗಿ, ಇಬ್ಬದಿಯಲ್ಲೂ ಪುರುಷ ಪ್ರಮಾಣದ ಕನ್ನಡಿಗಳೆರಡು ಜೋಡಿಸಲ್ಪಟ್ಟಿವೆ.

ಮಂಚಕ್ಕೆ ಅಷ್ಟು ದೂರದಲ್ಲಿ ಸಣ್ಣಗೆ ಪನ್ನೀರ ಹನಿಗಳನ್ನು ಕಾರುತ್ತಿರುವ ಜಲಪಾತ್ರೆಯೊಂದು ಇಡಲ್ಪಟ್ಟಿದೆ. ಕೊಠಡಿಯ ಮಧ್ಯಭಾಗದಲ್ಲಿ ನೃತ್ಯಕ್ಕೆಂಬಂತೆ ರತ್ನಗಂಬಳಿಯನ್ನು ಹಾಸಿ, ತಂಬೂರಿ, ಮೃದಂಗಗಳನ್ನು ಇಟ್ಟಿದ್ದಾರೆ. ಕೋಣೆಯೊಳಗೆ ಕಾಲಿಟ್ಟರೆ ಸಾಕು, ಯಾವುದೋ ಸ್ವಪ್ನ ಲೋಕದ ಶೃಂಗಾರ ವನವನ್ನು ಪ್ರವೇಶಿಸಿದಂತಾಗಬೇಕು—ಹಾಗೆ ಸಜ್ಜಾಗಿದೆ.

ಭೋಜನ ಮುಗಿಸಿಕೊಂಡು ಬಂದ ಲಿಂಗಣ್ಣನಾಯಕ ಆ ಕೋಣೆಯನ್ನು ಕಂಡು ತಟಕ್ಕನೆ ಒಂದು ಹೆಜ್ಜೆ ಹಿಂದೆಗೆದ—ಇದು ತನ್ನ ಶಯ್ಯಾಗೃಹವೋ ಅಥವಾ ಮರೆತು ಬೇರೆ ಯಾರದೋ ಶಯ್ಯಾಗೃಹಕ್ಕಾದರೂ ಕಾಲಿಟ್ಟೆನೋ ಎಂದು ದಿಗ್ಭ್ರಾಂತಿಯಾಯಿತು. ಸೂರಿನಿಂದ ತೂಗಿರುವ ಗಂಧದೆಣ್ಣೆಯ ದೀಪದ ಬೆಳಕಿನಲ್ಲಿ, ಜರತಾರಿಯ ಎಳೆಗಳು ಹೊಳೆಯುತ್ತಿರುವ ಮಸ್ಲಿನ್ ಬಟ್ಟೆಯ ತೆರೆಯಲ್ಲಿ ಮರೆಯಾದ ಮಂಚ, ಕೊಠಡಿಗೇ ತೆಳುನೀಲಿಯ ಪಾರದರ್ಶಕ ತೆರೆಯನ್ನೆಳೆದ ಪರಿಮಳ ಧೂಮ, ಸಂಗೀತವಾದ್ಯಗಳು, ಗೋಡೆಯಮೇಲಿನ ಚಿತ್ರಗಳು, ಮಂಚದ ಬದಿಯ ಹಣ್ಣು ವೀಳಯದ ಬಂಗಾರದ ಹರಿವಾಣ—ಎಲ್ಲವನ್ನು ಕನಸಿನಲ್ಲಿದ್ದವನಂತೆ ನೋಡಿದ. ಎಂದೂ ಇಲ್ಲದೆ ತನ್ನ ಕೋಣೆಗೆ ಇಂದು ಇಷ್ಟೇಕೆ ಅಲಂಕಾರ, ಏತಕ್ಕೋಸ್ಕರ ಇಷ್ಟೆಲ್ಲಾ ಸಿದ್ಧತೆ ಎಂಬುದು ಅವನಿಗೆ ಅರಿವಾಗಲಿಲ್ಲ. ಚಪ್ಪಾಳೆತಟ್ಟಿ ಸಜ್ಜೆಯಾಳನ್ನು ಕರೆದು ಕೇಳಿದ—

"ಇದೇನು ಅಲಂಕಾರ? ಯಾರಿಗೋಸ್ಕರ ಇದೆಲ್ಲಾ?"

"ತಮಗಾಗಿಯೇ ಪ್ರಭು."

"ನಮಗಾಗಿಯೇ! ಯಾರು ನಿಮಗೆ ಈ ಅಲಂಕಾರವನ್ನೆಲ್ಲಾ ಮಾಡಲು ಹೇಳಿದ್ದು.

"ಪ್ರಭುಗಳು ಮನ್ನಿಸಬೇಕು. ತಮ್ಮ ಕೋಣೆಯನ್ನು ಹೀಗೆ ಸಿಂಗರಿಸಬೇಕೆಂದು ಕಾರ್ಯಭಾರಿಗಳ ಅಪ್ಪಣೆಯಾಯಿತು. ಅದಕ್ಕಾಗಿ ಮಾಡಿದೆವು."

"ಕಾರ್ಯಭಾರಿಗಳು ಹೇಳಿದರೆ? ಈ ವಿಲಾಸವಸ್ತುಗಳೆಲ್ಲಾ ನಮಗೆ ಬೇಕಿಲ್ಲವೆಂಬುದು ಅವರಿಗೆ ತಿಳಿಯದೆ."

"ನಮಗೆ ತಿಳಿಯದು ಪ್ರಭು. ತಪ್ಪಾಗಿದ್ದರೆ ಮನ್ನಿಸಬೇಕು"

"ನಿಮ್ಮ ತಪ್ಪೇನೂ ಇಲ್ಲ. ಕಾರ್ಯಭಾರಿಗಳು ಇನ್ನೂ ಮನೆಗೆ ಹೋಗದಿದ್ದರೆ ಕಳಿಸು"

—ಎಂದು ಚುಕ್ಕಣ್ಣನನ್ನು ಕರೆತರಲು ಆಳನ್ನು ಕಳುಹಿಸಿ, ಇದೆಲ್ಲಾ ಏಕೆಂದು ಅರಿಯದೆ ಅಚ್ಚರಿಪಡುತ್ತ ಶಯ್ಯಾಗೃಹವನ್ನು ಹೊಕ್ಕು ಅಲಂಕೃತವಾದ ಮಂಚದ ಮೇಲೆ ಕೂಡದೆ, ಬಳಿಯಲ್ಲಿಯೇ ಇದ್ದ ವಿರಾಮಾಸನವೊಂದರ ಮೇಲೆ ಕಾರ್ಯಭಾರಿಯನ್ನೇ ಕಾಯುತ್ತ ಕುಳಿತ. ಕೋಣೆಯ ಆಲಂಕಾರವನ್ನು ಕಂಡು ಆತನ ಮನಸ್ಸು ವಿವಶವಾಗದೆ, ಏಕೋ ಕಿಡಿಯಾಡುತ್ತಿತ್ತು.

ಸ್ವಲ್ಪ ಹೊತ್ತಿನಲ್ಲೇ ಆಳು ಬಂದು, "ಕಾರ್ಯಭಾರಿಗಳು ಮನೆಗೆ ಹೋಗಿದ್ದಾರೆ. ಅಪ್ಪಣೆಯಾದರೆ ಕರೆಕಳಿಸುತ್ತೇನೆ. ಆದರೆ ಯಾರೋ ತಮ್ಮನ್ನು ಕಾಣಲು ಬಂದಿದ್ದಾರೆ. ಪ್ರಧಾನಿಗಳ ಕಡೆಯವರು ಕರೆದುಕೊಂಡು ಬಂದಿದ್ದಾರೆ. ಅಪ್ಪಣೆಯಾದರೆ ಸಮ್ಮುಖಕ್ಕೆ ಕರೆತರುತ್ತೇನೆ" ಎಂದ."

"ನಮ್ಮನ್ನು ಕಾಣಲೇ.... ಈ ಹೊತ್ತಿನಲ್ಲಿ.... ಏಕಂತೆ ?"

ಆತನ ಮಾತನ್ನು ಕಿವಿಯಾರ ಕೇಳಿಯೂ ನಂಬದವನಂತೆ ಕೇಳಿದ ಲಿಂಗಣ್ಣನಾಯಕ.

"ಏಕೋ ನಾನರಿಯೆ. ನನಗೆ ಅವರೇನೂ ಹೇಳಲಿಲ್ಲ. ಆ ಹೆಂಗಸರೊಂದಿಗೆ ಬಂದಿರುವ ಪ್ರಧಾನಿಗಳ ಕಡೆಯ ಮನುಷ್ಯ ತಮ್ಮಲ್ಲಿಯೇ ಎಲ್ಲವನ್ನೂ ಅರಿಕೆ ಮಾಡಿಕೊಳ್ಳುತ್ತೇನೆ ಎಂದ."

"ಏನು......ಹೆಂಗಸೇ!.... ಈ ಹೊತ್ತಿನಲ್ಲಿ....ನಮ್ಮನ್ನು ಕಾಣಲು."

ಆಳು ಹೇಳಿದುದನ್ನು ಕೇಳಿ ಮಿಂಚುಸೋಕಿದಂತೆ ಸಿಡಿದೆದ್ದು ಕೇಳಿದ ಲಿಂಗಣ್ಣನಾಯಕ.

"ಅಹುದು ಪ್ರಭು. ಅವನಿಗೆ ಏನು ಉತ್ತರ ಹೇಳಲಿ."

ಲಿಂಗಣ್ಣನಾಯಕನಿಗೆ ಒಂದು ಗಳಿಗೆ ಏನೂ ಉತ್ತರ ಹೇಳಲು ತೋಚಲಿಲ್ಲ. ಆತನಿಗೆ ತಾನು ಎಚ್ಚರವಾಗಿಲ್ಲ, ಎಲ್ಲೋ ಕನಸಿನಲ್ಲಿದ್ದೇನೆ ಎಂಬ ಭಾವನೆಯೇ ಗಳಿಗೆಗಳಿಗೆಗೂ ಬಲವಾಗುತ್ತಿತ್ತು. ಒಂದು ಗಳಿಗೆ ಆ ವಿಸ್ಮೃತಿಯಲ್ಲೇ ತಲ್ಲೀನನಾಗಿದ್ದು ಬಳಿಕ—

"ಪ್ರಧಾನಿಗಳ ಕಡೆಯವರನ್ನು ಒಳಗೆ ಕಳುಹಿಸು" ಎಂದು ಹೇಳಿ ಆಳನ್ನು ಕಳುಹಿಸಿ ಅವರು ಬರುವುದನ್ನೇ ಕಾಯುತ್ತ ಕುಳಿತ. ಸ್ವಲ್ಪ ಹೊತ್ತಿನಲ್ಲೇ ಸಜ್ಜೆಯ ಆಳನ್ನು ಹಿಂಬಾಲಿಸಿ, ಮುದ್ದಣ್ಣನ ಬಲಗೈ ಬಂಟನಾದ ಗುರಿಕಾರ ದಾಸಣ್ಣ ಬಂದು ನೆಲದವರೆಗೂ ಬೆನ್ನುಬಾಗಿಸಿ ಮೂರು ಮೂರು ಬಾರಿ ಮುಜರೆ ಮಾಡಿ, ಅಷ್ಟು ದೂರನಿಂತುಕೊಂಡ.

"ಏನು ಗುರಿಕಾರರೇ—ಇಂಥ ಅವೇಳೆಯಲ್ಲಿ ಬಂದಿರಲ್ಲಾ?"

—ಸುಮ್ಮನೆ ನಿಂತ ಗುರಿಕಾರನನ್ನು ನೋಡಿ ಕೇಳಿದ ಲಿಂಗಣ್ಣ ನಾಯಕ.

"ಪ್ರಧಾನಿಗಳ ಅಪ್ಪಣೆಯಾಯಿತು...."

"ಏನು?"

"ಪ್ರಧಾನಿಗಳು ತಮಗೆ ಏನೋ ಉಡುಗೊರೆ ಕಳುಹಿಸಿದ್ದಾರೆ. ನಾನೇ ಅದನ್ನು ತಮಗೆ ತಲುಪಿಸಿ ಬರಬೇಕೆಂದು ಅಪ್ಪಣೆಯಾಯಿತು. ಬಂದೆ."

"ಉಡುಗೊರೆ ?....ನಮಗೆ!........ಏನದು ?"

"ಅಪ್ಪಣೆಯಾದರೆ, ಇಲ್ಲಿಗೇ ಕರೆಯುತ್ತೇನೆ."

—ಎಂದು ದಾಸಣ್ಣ ಲಿಂಗಣ್ಣನಾಯಕ ಅಪ್ಪಣೆಕೊಡುವುದಕ್ಕೂ ಕಾಯದೆ, ಹೊರ ಹೋಗಿ ತನ್ನ ಜೊತೆಯಲ್ಲಿ ಮತ್ತೊಬ್ಬರನ್ನು ಕರೆದುಕೊಂಡು ಬಂದ. ಗೆಜ್ಜೆಗಳ ಮಂಜುಳನಾದವೇ ದಾಸಣ್ಣನ ಜೊತೆಗೆ ಬಂದ ವ್ಯಕ್ತಿ ಹೆಣ್ಣು ಎಂದು ಸಾರಿ ಹೇಳಿತು. ಅವಗುಂಠನವತಿಯಾದ ಆ ಸ್ತ್ರೀ ನಾಯಕನಿಗೆ ಗೌರವಪೂರ್ವಕವಾಗಿ ವಂದನೆಮಾಡಿ ದಾಸಣ್ಣನ ಬದಿಯಲ್ಲಿ ನಿಂತಳು.

"ಯಾರು ಈಕೆ? ಇದೇನೆಯೋ ನಮಗೆ ಪ್ರಧಾನಿಗಳು ಕಳುಹಿಸಿದ ಉಡುಗೊರೆ?"

—ಮಸೆದ ಧ್ವನಿಯಲ್ಲಿ ಕೇಳಿದ ಲಿಂಗಣ್ಣನಾಯಕ.

"ಅಹುದು ಪ್ರಭು. ಇದು ಮಹಾಪ್ರಭುಗಳ ಊಳಿಗದಲ್ಲೇ ಇರಬೇಕಾದ ವಸ್ತು. ಒಪ್ಪಿಸಿಕೊಳ್ಳಬೇಕು"

—ಎಂದು ನುಡಿದ ದಾಸಣ್ಣ ಆಕೆಯ ಮುಖವನ್ನು ಕವಿದಿದ್ದ ಅವಗುಂಠನವನ್ನು ಓಸರಿಸಿದ. ನಾಯಕ ಕಣ್ಣರಳಿಸಿ ನೋಡಿದ—ಒಂದು

ಗಳಿಗೆ ಅವನ ಕಣ್ಣೆದಿರು ಮಿಂಚು ಕೋರೈಸಿದಂತಾಯಿತು, ಎದುರು ನಿಂತ ಲಾವಣ್ಯ ಮೂರ್ತಿಯನ್ನು ಕಂಡು.

ಲಿಂಗಣ್ಣನಾಯಕ ಸುಂದರ ಸ್ತ್ರೀಯರನ್ನು ಕಾಣದೆ ಇರಲಿಲ್ಲ. ಅರಮನೆಗೆ ದಾಸಿಯರನ್ನು ಆರಿಸುವಾಗಲೂ ನೋಡಲು ಸುಂದರಿಯಾದವರನ್ನೇ ಆರಿಸುತ್ತಿದ್ದುದರಿಂದ ಸ್ತ್ರೀ ಸೌಂದರ್ಯ ಅವನು ಕಾಣದ ಅಪರೂಪ ವಸ್ತುವಾಗಿರಲಿಲ್ಲ. ಆದರೆ ಈ ಬಗೆಯ ಸೌಂದರ್ಯವನ್ನು ಮಾತ್ರ ಆತ ಎಂದೂ ಕಂಡಿರಲಿಲ್ಲ. ನಾಯಕನ ಎದುರಿಗೆ ನಿಂತದ್ದು ಬರೀ ಸೌಂದರ್ಯವೇ ಅಲ್ಲ—ಅಷ್ಟುದೂರದಲ್ಲಿದ್ದರೂ, ಬರಿವಾಸನೆಯಿಂದಲೇ ಮತ್ತೇರಿಸುವ ಮದ್ಯದಂತಿತ್ತು ಆ ರೂಪ ವೈಭವ. ಆ ಮುಖ, ಆ ಕಣ್ಣು, ಕಾಳಕೇಶರಾಶಿ, ಉಟ್ಟ ಬಹು ನವಿರಾದ ಬಟ್ಟೆಯೊಳಗಿನಿಂದ, ಆ ಅರೆ ಮರೆಯಿಂದ ಮತ್ತಷ್ಟು ಉಜ್ವಲವಾಗಿ ಕಾಣುವ ಅಂಗ ಸೌಷ್ಠವ, ನಸುಕೆದರಿ ಹಣೆಯ ಮೇಲಾಡುವ ಕುರುಳಕುಡಿಯಿಂದ, ಹರಳಿನ ಕಾಲುಂಗರ ಧರಿಸಿದ, ಅಲಕ್ತಿಗೆಯ ಬಣ್ಣದಿಂದ ಕೆಂಪಾದ ಪಾದಪಲ್ಲವದ ವರೆಗೂ, ಎದೆಗೆಡಿಸುವ ಮನೋಹರ ಕಲಾಕೃತಿ. ಆಕೆ ಹೆಣ್ಣಲ್ಲ, ವಿಲಾಸದ ಜಲಪಾತ; ಯಾವ ಎದೆಯೂ ಅದರಿದುರು ಉರುಳಿ ಬೀಳದೆ ನಿಲ್ಲಲಾರದು ಎನಿಸಿತು, ತನ್ನೆದರು, ತನ್ನ ಅಂಗ ಸೌಷ್ಠವವನ್ನು ಮತ್ತಷ್ಟು ಕೆರಳಿಸುವ ರೀತಿಯಲ್ಲಿ ಕಾಣಿಸುವ ಭಂಗಿಯಲ್ಲಿ ನಿಂತ ಆ ಹೆಣ್ಣನ್ನು ನೋಡಿ ಲಿಂಗಣ್ಣನಾಯಕನಿಗೆ. ರತಿಕೇಳಿಯ ಜೀವಂತ ಆಹ್ವಾನದಂತಿದ್ದ ಆ ರೂಪಾಗ್ನಿಯ ಎದುರಿನಲ್ಲಿ ನಾಯಕನ ಮನಸ್ಸು ಮೇಣದ ಬೊಂಬೆಯಂತಾಯಿತು. ಬಿಟ್ಟಕಣ್ಣು ಬಿಟ್ಟಹಾಗೇ ನೋಡುತ್ತಾ ಕುಳಿತಿದ್ದ.

"ಪ್ರಧಾನಿಗಳ ಉಡುಗೊರೆ ಪ್ರಭುಗಳಿಗೆ ಒಪ್ಪಿಗೆಯಾಯಿತೆಂದು ತಿಳಿಸಲೇ?"

—ದಾಸಣ್ಣ ಲಿಂಗಣ್ಣನಾಯಕರ ವೈಮರೆಯನ್ನು ಕಂಡು 'ಈ ಹೆಣ್ಣಿಗೆ ಸೋಲದಿರಲು ಆ ನಾಯಕನೇನು ಶುಕಮುನಿಯೇ' ಎಂದ ಮುದ್ದಣ್ಣನ ಮಾತು ನೆನಪಾಗಿ ತಾನಾಗಿಯೇ ತುಟಿಯಮೇಲೆ ಮೂಡಿದ ನಗೆಯನ್ನು ನಾಯಕರ ಕಣ್ಣಿಗದು ಬೀಳದಂತೆ ಹುದುಗಿಕೊಂಡು ಕೇಳಿದ.

ಅವನ ಮಾತು ಕೇಳಿ, ಒಂದು ಗಳಿಗೆ ವಿಸ್ಮೃತಿಗೊಳಗಾದ ನಾಯ

ಕನ ಮೈ ಮತ್ತೆ ಪ್ರಜ್ಞೆಗೆ ಬಂದಿತು. ಆ ಮಾತು ಕೇಳಿ ಮತ್ತೊಮ್ಮೆ ಆ ಹೆಣ್ಣನ್ನು, ಆ ಹೆಣ್ಣಿಗಾಗಿಯೇ ಎಂಬಂತೆ ಸಜ್ಜಾಗಿದ್ದ ಶಯ್ಯಾಗೃಹ ವನ್ನು ಕಣ್ಣಾಡಿಸಿ ನೋಡಿದ. ಒಂದು ಗಳಿಗೆ ಸಡಿಲವಾದ ಅವನ ಮೈ ಮರುಗಳಿಗೆಯೇ ಸೆಟೆದು ನಿಂತಿತು.

"ಇದೇನೋ ನಮಗೆ ಪ್ರಧಾನಿಗಳ ಉಡುಗೊರೆ?"

—ಕರ್ಕಶವಾದ ಸ್ವರದಲ್ಲಿ ಕೇಳಿದ ಲಿಂಗಣ್ಣನಾಯಕ.

"ಅಹುದು ಪ್ರಭು."

"ಪ್ರಧಾನಿಗಳು ಇಂಥ ವಸ್ತುಗಳನ್ನೇ ನಾಯಕರಿಗೆ ಒಪ್ಪಿಸುವುದು ವಾಡಿಕೆಯೇನೋ!"

—ಕ್ರೂರ ವ್ಯಂಗ ತುಂಬಿತುಳುಕುವ ಧ್ವನಿಯಲ್ಲಿ ಕೇಳಿದ ಲಿಂಗಣ್ಣ ನಾಯಕ.

"ಅತ್ಯಂತ ಸುಂದರವಾದ, ಅಮೋಘವಾದ ವಸ್ತುಗಳೆಲ್ಲವೂ ಪ್ರಭು ಗಳ ಆಶ್ರಯದಲ್ಲಿರಬೇಕೆಂಬುದು ಮೊದಲಿನಿಂದಲೂ ನಡೆದು ಬಂದ ವಾಡಿಕೆ ಪ್ರಭು. ರತ್ನಗಳು ಇರಬೇಕಾದುದು ಸಮುದ್ರದಲ್ಲೇ."

"ಹಾಗೇ? ಸ್ತ್ರೀ ರತ್ನಗಳಿಗೆಲ್ಲಾ ನಾಯಕರು ರತ್ನಾಕರವೇ? ಈ ಅಧಿಕ ಪ್ರಸಂಗವನ್ನು ನಿಲ್ಲಿಸಿ ಗುರಿಕಾರರೇ. ಯಾರ ಎದುರಿನಲ್ಲಿ ನಿಂತು ಮಾತನಾಡುತ್ತಿರುವಿರೆಂಬುದು ನೆನಪಿನಲ್ಲಿರಲಿ. ಇದು ಅರಮನೆ; ವೇಶ್ಯಾಗೃಹವಲ್ಲ."

ದಾಸಣ್ಣನ ಮಾತು ಕೇಳಿ ಉಕ್ಕಿಬಂದ ಕ್ರೋಧದಲ್ಲಿ ಸಿಡಿದೆದ್ದು ಅಬ್ಬರಿಸಿ ಹೇಳಿದ ಲಿಂಗಣ್ಣನಾಯಕ. ಆ ಮಾತನ್ನು ಕೇಳಿ ದಾಸಣ್ಣ ಚುರುಕಾದ ಪೆಟ್ಟುತಿಂದ ಕುನ್ನಿಯಂತೆ ಮಿಡುಕಿದ. ಕ್ರೋಧದಿಂದ ಉಗ್ರ ವಾದ ನಾಯಕರ ಮೋರೆಯನ್ನು ಕಂಡು, ಅವನ ನಾಲಗೆಯಲ್ಲಿನ ದ್ರವ ಆರಿಹೋಯಿತು. ಒಣಗಿದ ನಾಲಗೆಯಿಂದ ತುಟಿಗಳನ್ನು ಸವರಿಕೊಳ್ಳುತ್ತಾ

"ಪ್ರ....ಪ್ರ....ಭು......ಗ....ಳು...."

"ನಿನ್ನ ಮಾತಿನ್ನು ನನಗೆ ಬೇಕಿಲ್ಲ, ಕರೆದುಕೊಂಡುಹೋಗಿ ಆಕೆ ಯನ್ನು, ಆ ತಾಯಿ ಯಾರಮನೆಯ ಹೆಣ್ಣೋ, ಆ ಮನೆಯವರಿಗೆ ಈಕೆ ಯನ್ನು ಮರ್ಯಾದೆಯಿಂದ ಒಪ್ಪಿಸುವಂತೆ ಪ್ರಧಾನಿಗಳಿಗೆ ತಿಳಿಸಿ. ಹಾಗೇ.... ಹಾಗೇ....ಅವರಿಗೆ ಹೇಳಿ...."

—ಧಗಧಗಿಸುವ ಕ್ರೋಧದಲ್ಲಿ ಏನು ಮಾಡಬೇಕೆಂಬುದು ತೋಚದೆ ಒಂದು ಘಳಿಗೆ ತನ್ನ ಮಾತನ್ನು ತಡೆದ.

"ಏ....ಏ....ಏ....ನು....ಹೇ....ಳ.....ಬೇಕೋ.....ಅಪ್ಪಣೆಯಾಗಬೇಕು."

—ದಾಸಣ್ಣ, ಮೈಯಂತೆ ಮಾತೂ ಕಂಪಿಸುತ್ತಿರಲು ಕೇಳಿದ.

ನಾಲಗೆಯ ತುದಿಯವರೆಗೂ ನುಗ್ಗಿಬಂದ ಮಾತನ್ನು ಹೇಳುವುದೇ ಬಿಡುವುದೇ ಎಂದು ಒಂದುಗಳಿಗೆ ಚಿಂತಿಸಿದ ನಾಯಕ. ಆದರೆ ಮರುಗಳಿಗೆಯೇ ಕ್ರೋಧ ವಿವೇಚನೆಯನ್ನು ತುಳಿದು ತಾನೇ ಹೇಳಿತು—

"ದಳವಾಯಿಗಳಿಗೆ ಹೇಳು — ಅವರಿಗೆ ನಾವು ಪ್ರಧಾನಿಪಟ್ಟ ಕೊಟ್ಟಿರುವುದು-ರಾಜ್ಯವನ್ನು ಆಳಲು; ನಾಯಕರ ತಲೆ ಹಿಡಿಯಲಿಕ್ಕಲ್ಲ. ತೊಲಗು ಇಲ್ಲಿಂದ. ಇನ್ನೊಂದುಗಳಿಗೆ ನಿಂತರೆ, ನಿನ್ನ ತಲೆ ಉಳಿಯಲಾರದು ಹೊರಡಾಚೆ."

ದಾಸಣ್ಣ ಒದೆತಿಂದ ನಾಯಿಯಂತೆ, ನಾಯಕನಿಗೆ ಮುಜರೆಮಾಡಿ ಹೊರಡಲು ಅನುವಾದ. ಅವನನ್ನು ಹಿಂಬಾಲಿಸಲು ಸಿದ್ಧಳಾದ ಹೆಣ್ಣನ್ನು ನೋಡಿ ಹೇಳಿದ ನಾಯಕ:

"ನೀನು ಯಾರೋ, ಪ್ರಧಾನಿಗಳ ಮಾತಿಗೆ ನೀನು ಹೇಗೆ ಒಪ್ಪಿ ಬಂದೆಯೋ ನನಗೆ ತಿಳಿಯದು ತಾಯಿ-ನಿನ್ನಲ್ಲಿ ನಾವು ಹೇಳುವುದಿಷ್ಟೆ: ದೇವರು ನಿಮಗೆ ಮುಕ್ತ ಹಸ್ತದಿಂದ ಸೌಂದರ್ಯವನ್ನು ನೀಡಿದ್ದಾನೆ. ಈ ರೂಪವನ್ನು ಯಾವ ಆಮಿಷಕ್ಕೂ ಬಲಿಯಾಗಿ ನಾಯಕೊರಳ ಹೂಮಾಲೆಯನ್ನಾಗಿ ಮಾಡಬೇಡ. ಒಂದುವೇಳೆ ಅವರ ಬೆದರಿಕೆಗೆ ಹೆದರಿ ಬಂದಿದ್ದರೆ, ಇನ್ನು ನೀನು ಹೆದರಬೇಕಾದ್ದಿಲ್ಲ. ನಿನ್ನ ರಕ್ಷಣೆಗೆ ನಾವಿದ್ದೇವೆ. ನೀನಿರುವುದು ಕಾಡಲ್ಲ, ದುರ್ಗ. ಹೋಗಿ ಬಾ ತಾಯಿ."

—ಎಂದು ತನ್ನ ಕತ್ತಿನಲ್ಲಿದ್ದ ಮುತ್ತಿನ ಮಾಲೆಯನ್ನು ಆಕೆಯ ಕೈಗೆ ಹಾಕಿದ. ನಾಯಕನಿತ್ತ ಮುತ್ತಿನ ಹಾರವನ್ನು ಸ್ವೀಕರಿಸಿದ ಹೆಣ್ಣು—

"ಪ್ರಭೋ ನನ್ನ ಅಪರಾಧವನ್ನು ಮನ್ನಿಸಬೇಕು."

—ಎಂದು ನುಡಿದು ನಾಯಕನ ಚರಣಗಳಿಗೆರಗಿತು. ಆಕೆಯ

ಕಂಪಿಸುವ ನುಡಿಯೇ ದುಃಖವನ್ನು ಸಾರಿ ಹೇಳಿ, ಆಕೆ ಮಣಿದಾಗ ನಾಯಕನ ಪಾದದಮೇಲೆ ಉರುಳಿದ ಕಂಬನಿ, ಅದು ನಿಜವಾದ ದುಃಖವೇ ಎಂದು ಸಾಕ್ಷಿ ಹೇಳಿತು.

ಹೆಣ್ಣಿನ ಕಣ್ಣೀರು ನಾಯಕನ ಪಾದವನ್ನು ಸೋಕಿದ ಕೂಡಲೇ ನಾಯಕನ ಕ್ರೋಧ ಬಿರುಗಾಳಿಗೆ ಸಿಕ್ಕ ಗರಿ ಮೋಡದಂತೆ ಹಾರಿ ಹೋಗಿ, ಆತನ ಕಣ್ಣು ತೇವವಾಯಿತು.

"ವಿನಾಕಾರಣ ನಿನಗಿಂದು ಅಪಮಾನವಾಯಿತು ತಾಯಿ. ನೊಂದು ನಿಟ್ಟುಸಿರಿಡಬೇಡ. ತಾಯಿಯಂತೆ ಈ ಅಪಚಾರವನ್ನು ಮನ್ನಿಸಿ ಒಳಿತಾಗಲಿ ಎಂದು ಹೋಗು."

ಎಂದ ನಾಯಕ ಆಕೆ ಬಾಗಿಲಿನ ಬಳಿ ಹೋಗುವವರೆಗೂ ಸುಮ್ಮನಿದ್ದು, ಬಳಿಕ ಪಟಕ್ಕನೆ ಜ್ಞಾಪಿಸಿಕೊಂಡವನಂತೆ ಕೇಳಿದ—

"ನಿನ್ನ ಹೆಸರೇನು ತಾಯಿ?"

"ಚೆಲುವಮ್ಮ"

—ಎಂದು ಸಣ್ಣ ಧ್ವನಿಯಲ್ಲಿ ಹೇಳಿ, ಹೆಣ್ಣು ಬಾಗಿಲು ದಾಟಿ ಮರೆಯಾದಳು.

"ಆ ಎಂಥ ಹೆಸರು—ಎಂಥ ರೂಪು!"

—ಎಂದು ಆ ಹೆಸರು, ರೂಪ ಎರಡನ್ನೂ ಮೆಚ್ಚಿಕೊಂಡು ತನಗೆ ತಾನೇ ಹೇಳಿಕೊಂಡ ನಾಯಕ. ಆ ಮಾತಿನ ಮರಿಯಂತೆ ಮತ್ತೊಂದು ಮಾತೂ ತನಗೆ ತಾನೇ ಮೂಡಿಬಂದಿತು—

"ಅದಕ್ಕೆ ಈ ಗತಿಯೇ."

ತಟಕ್ಕನೆ ನಾಯಕನ ಹೃದಯದಲ್ಲಿ ಹುಚ್ಚುಕ್ರೋಧ ಕೆರಳಿದ ಕಡಲಂತೆ ತೆರೆಹೊಯ್ದಿತು. ಆ ರೋಷದಲ್ಲಿ ಮಂಚವನ್ನು ಅಲಂಕರಿಸಿದ್ದ ಹೂಮಾಲೆಯನ್ನು ಕಿತ್ತೊಗೆದು ಕಾಲಡಿಯಲ್ಲಿ ಹಾಕಿಕೊಂಡು ಹೊಸಕಿದ.

೬

ಲಿಂಗಣ್ಣನಾಯಕನಿಗೆ ಮುದ್ದಣ್ಣ ಹೆಣ್ಣಿನ ಉಡುಗೊರೆ ಕಳುಹಿಸಿ, ಮಲಗಿದ ಹಾವನ್ನು ಕೆರಳಿಸಿದಂತಾಗಿತ್ತು. ಅದುವರೆಗೂ ಯಾವುದೋ

ಮೋಡಿಯಿಂದೆಂಬಂತೆ, ಆತನಲ್ಲಿ ಮಲಗಿದ್ದ ಸೇಡಿನ ಭಾವನೆಗಳು ಮತ್ತೆ ಕೆರಳಿ ಹೊಗೆಯಾಡಲಾರಂಭಿಸಿದವು. ತನ್ನ ಸುತ್ತಲ ಪರಿಸ್ಥಿತಿ ಮನವರಿಕೆಯಾಗಿ, ಅರಮನೆಯಲ್ಲಿ ಹೋದತ್ತ ಬಂದತ್ತ ತಾನು ದೊರೆಯಲ್ಲ, ಸೆರೆಯಾಳು ಎಂಬ ಭಾವನೆ ದಿನದಿನಕ್ಕೆ ಬಲವಾಯಿತು. ಹಿಂದೊಂದು ದಿನ ಪರಶುರಾಮಪ್ಪ 'ತಾವು ಮುದ್ದಣ್ಣ ಇಷ್ಟುದೂರ ಪ್ರಬಲಿಸಲು ಬಿಡಬಾರದು' ಎಂದು ಹೇಳಿದ ಮಾತು ಮತ್ತೆ ಮತ್ತೆ ನೆನಪಿಗೆ ಬಂದು ಅವನ ಎದೆಯನ್ನು ಇರಿಯಿತು. ಈಚೆಗೆ ಅವರು ಬರುವುದೂ ಅಪರೂಪವಾಗಿತ್ತು. ಈ ಮಾತು ಮನವರಿಕೆಯಾಗಿ ತಾನೇ ಅವರಿಗೆ ಹೇಳಿಕಳುಹಿಸಿದಾಗಲೂ, ಆ ಸುದ್ದಿಯನ್ನು ಅವರಿಗೆ ಮುಟ್ಟಿಸುವುದಾಗಿ ಹೇಳಿದ ಕಾರ್ಯಭಾರಿ, 'ಅವರು ಸಿಗಲಿಲ್ಲ, ತಿಳಿಸಿಬಂದಿದ್ದೇವೆ' ಎಂದು ಹೇಳಿದನೇ ಹೊರತು, ಪರಶುರಾಮಪ್ಪನಾಗಲಿ, ಭರಮಣ್ಣನಾಗಲಿ ಬರದೆ, ಆ ಸುದ್ದಿ ಅವರಿಗೆ ಮುಟ್ಟಿಲ್ಲವೆಂದೇ ಲಿಂಗಣ್ಣನಾಯಕನಿಗೆ ತೋರಿತು. ಈಗ ಮೊದಲಿನ ಹಾಗೆ ಆತನೇ ಅವರನ್ನು ಹುಡುಕಿಕೊಂಡು ಹೋಗುವ ಹಾಗೂ ಇರಲಿಲ್ಲ–ದೊರೆಯಾದ ಮೇಲೆ. ಕಾರ್ಯಭಾರಿಗಳನ್ನು ಬಿಟ್ಟು ಬೇರೆ ಯಾರ ಕೈಲಾದರೂ ಹೇಳಿಕಳುಹಿಸುವುದೆಂದರೆ, ಅರಮನೆಯಲ್ಲಿ ಯಾರನ್ನು ನಂಬುವುದು, ಯಾರು ತನ್ನವರು ಎಂಬುದೂ ಆತನಿಗೆ ನಿಶ್ಚಯವಿರಲಿಲ್ಲ. ಸುತ್ತಲವರೆಲ್ಲಾ ತನ್ನ ಚಲನವಲನವನ್ನು ಪ್ರಧಾನಿಗೆ, ಅವನ ಹಸ್ತಕನಾದ ಕಾರ್ಯಭಾರಿ ಚುಕ್ಕಣ್ಣನಿಗೆ ವರದಿಮಾಡಲೆಂದೇ ನೇಮಿತದ ಗೂಢಚಾರರಂತೇ ತೋರುತ್ತಿತ್ತು ಆತನಿಗೆ. ಈ ಪರಿಸ್ಥಿತಿಯ ಅರಿವು ಬೆಳೆದಂತೆ ನಾಯಕನಿಗೆ, ಅರಮನೆಯ ತುಂಬಾ ಉಸಿರುಕಟ್ಟಿಸುವ ಹೊಗೆ ಹರಡುತ್ತಿದ್ದಂತೆ ಭಾಸವಾಗಿ, ಇದನ್ನು ಹೇಗೆ ಗೆದ್ದು ಬದುಕುವುದು ಎಂದು ಚಡಪಡಿಸತೊಡಗಿದ. ದೊರೆಯಾಗುವ ಮೊದಲು ಲಿಂಗಣ್ಣನಾಯಕನನ್ನು ಯಾರಾದರೂ ಕಾಣಬಹುದಾಗಿತ್ತು, ಯಾರನ್ನಾದರೂ ಲಿಂಗಣ್ಣನಾಯಕ ನೋಡಬಹುದಾಗಿತ್ತು. ಆದರೆ ಈಗ—ತಲೆಯಮೇಲೆ ತಾನಾಗಿಯೇ ಒಪ್ಪಿ ಇರಿಸಿಕೊಂಡ ಕಿರೀಟವನ್ನೇ ಮುದ್ದಣ್ಣ ಹಗ್ಗವಾಗಿ ಅವರ ಕೈಕಾಲುಗಳಿಗೆ ಬಿಗಿದಂತಿತ್ತು. ಯಾವ ಅಡ್ಡಿತಡೆಯೂ ಇಲ್ಲದೆ ಅವನು ಹೋಗಿಬರಬಹುದಾಗಿದ್ದ ಸ್ಥಳ ಓಬವ್ವನಾಗತಿಯ ಸಮಾಧಿಯೊಂದಕ್ಕೇ.

ಆಗಲೂ ಅವನ ಸುತ್ತ ಅಂಗರಕ್ಷಣೆಗೆಂದು ನಾಲ್ಕಾರು ಮಂದಿ ಸೈನಿಕರಿರುತ್ತಿದ್ದರು.

ಆ ದಿನ ಸಂಜೆಯೂ ಲಿಂಗಣ್ಣನಾಯಕ ನಾಗತಿಯ ಸಮಾಧಿಗೆ ಹೋಗುವ ಹೊತ್ತು ಸಮೀಪಿಸುತ್ತಿದ್ದ ಹಾಗೇ, ಆತನ ಜೊತೆಗೆ ಹೋಗಲು ನಿಯಮಿತರಾಗಿದ್ದ ಸೈನಿಕರು, ಆತನೊಡನೆ ಹೊರಡಲು ಸಿದ್ಧವಾದರು. ದಿನವೂ ತನ್ನ ಜೊತೆ ಯಾರು ಬರುತ್ತಾರೆ ಎಂಬುದನ್ನು ನೋಡದೆ, ಬಂದವರು ಬರಲಿ ಎಂದು ತನ್ನ ಪಾಡಿಗೆ ತಾನು, ಹೂವು, ಕುಂಕುಮದ ತಟ್ಟೆ ಹಿಡಿದ ದಾಸಿಯೊಂದಿಗೆ ತಲೆತಗ್ಗಿಸಿಕೊಂಡು ಹೋಗುತ್ತಿದ್ದ ನಾಯಕ, ಈ ದಿನ ತನಗಾಗಿ ಕಾದು ನಿಂತ ಸೈನಿಕರನ್ನು ಹೊಸಕಣ್ಣುಗಳಿಂದ ನೋಡಿದ. ಏಕೋ ಅವರು ತನ್ನೊಂದಿಗೆ ಬರುವುದು ಸಹನವಾಗಲಿಲ್ಲ. 'ಯಾರೂ ಜೊತೆಗೆ ಬರುವುದು ಬೇಡ' ಎಂದು ಹೇಳಿ ದಾಸಿಯೊಬ್ಬಳಿಗೆ ಮಾತ್ರ ತನ್ನೊಂದಿಗೆ ಬರುವಂತೆ ಹೇಳಿದ. ಆದರೆ ಕಾವಲು ಪಡೆಯವರು ನಾಯಕರು ಅಪ್ಪಣೆ ಮಾಡಿದಂತೆ ಹೊರಟುಹೋಗದೆ, ಅವರ ಮಾತಿಗೆ ಯಾವ ಪ್ರತ್ಯುತ್ತರವನ್ನೂ ಹೇಳದೆ, ಅವನನ್ನು ಹಿಂಬಾಲಿಸಿದರು. ಎರಡು ಹೆಜ್ಜೆ ಮುಂದೆ ನಡೆದು, ತನ್ನನ್ನು ಕಾವಲಿನವರು ಹಿಂಬಾಲಿಸಿ ಬಂದುದನ್ನು ಕಂಡು ಲಿಂಗಣ್ಣನಾಯಕ ಕೆರಳಿ ಹೇಳಿದ—

"ನಾವು ಅಪ್ಪಣೆ ಮಾಡಿದುದು ಕೇಳಿಸಲಿಲ್ಲವೇ ?"

"ತಿಳಿಯಿತು ಪ್ರಭು."

—ಕಾವಲು ಪಡೆಯ ಮುಖ್ಯಸ್ಥ ಲಿಂಗಣ್ಣನಾಯಕರಿಗೆ ಉತ್ತರವಿತ್ತ.

"ಹಾಗಾದರೆ ಮತ್ತೇಕೆ ನಮ್ಮ ಹಿಂದೆ ಬರುತ್ತಿದ್ದೀರಾ? ಇದೇನು ಕಿವಿ ಕಿವುಡೋ, ಬುದ್ಧಿ ಬರಡೋ"

—ಗದ್ದರಿಸಿ ಕೇಳಿದ ಲಿಂಗಣ್ಣನಾಯಕ."

"ಕಾರ್ಯಭಾರಿಗಳ ಆಜ್ಞೆ ಪ್ರಭು."

"ಏನು—ನಾಯಕರ ಅಪ್ಪಣೆಯನ್ನು ಉಲ್ಲಂಘಿಸಿ ನಡೆಯುವಂತೆ ಕಾರ್ಯಭಾರಿಗಳು ಅಪ್ಪಣೆಮಾಡಿದ್ದಾರೇನು? ನಮ್ಮ ಊಳಿಗದವರಿಗೆ ಇಷ್ಟು ಸೊಕ್ಕೇ ?"

—ಮುಖ್ಯಸ್ಥನ ಮಾತು ಕೇಳಿ ಸಿಡಿದುಕೇಳಿದ ಲಿಂಗಣ್ಣನಾಯಕ.

"ಪ್ರಭುಗಳು ನಮ್ಮ ಮಾತನ್ನು ಅನ್ಯಥಾ ಭಾವಿಸಬಾರದು. ಪ್ರಭುಗಳ ರಕ್ಷಣೆಗಾಗಿಯೇ ನಮ್ಮನ್ನು ಕಾರ್ಯಭಾರಿಗಳು ನೇಮಿಸಿದ್ದಾರೆ."

"ಇರಬಹುದು. ಆದರೆ ನಮ್ಮ ರಕ್ಷಣೆ ಮಾಡಿಕೊಳ್ಳಬಲ್ಲ ಯೋಗ್ಯತೆ ನಮಗಿದೆಯೆಂದು ನಿಮ್ಮ ಕಾರ್ಯಭಾರಿಗಳಿಗೆ ತಿಳಿಸಿ. ಮತ್ತೊಮ್ಮೆ ನಮ್ಮನ್ನು ಕೇಳದೆ ಇಂಥ ಅಧಿಕ ಪ್ರಸಂಗಕ್ಕೆ ತಲೆಹಾಕಬಾರದೆಂದೂ ಹೇಳು. ಹಾಗೇ ಇಂದಿನಿಂದ ನಮ್ಮ ಅಪ್ಪಣೆ ಇಲ್ಲದೆ, ನಾವು ಸಮಾಧಿಪೂಜೆಗೆ ಹೋಗುವಾಗ ಯಾರಾದರೂ ಬಂದರೆ ಅವರ ನೆತ್ತಿ ಉಳಿಯುವುದಿಲ್ಲ ವೆಂದೂ ಹೇಳು. ನಿಮಗೂ ಅದೇ ಅಪ್ಪಣೆಯೆ. ತೊಲಗಾಚೆ ಗುಲಾಮ."

—ಎಂದು ಹಿಂಬಾಲಿಸಿ ಬಂದವರನ್ನು ಕಳುಹಿಸಿ ದಾಸಿಯೊಂದಿಗೆ ಒಂಟಿಯಾಗಿ ಸಮಾಧಿಯತ್ತ ನಡೆದ ನಾಯಕ. ಆತನನ್ನು ಹಿಂಬಾಲಿಸಲು ಧೈರ್ಯಸಾಲದಾಗಿ ಕಾವಲವರು ನಿಂತಲ್ಲೇ ನಿಂತು, ಚಿತ್ರಾರ್ಪಿತ ಪ್ರತಿಮೆಗಳಂತೆ ನೋಡುತ್ತಿದ್ದರು.

ಲಿಂಗಣ್ಣನಾಯಕ ಸಮಾಧಿಯ ಬಳಿ ಬಂದಾಗ, ಸಂಜೆಗತ್ತಲು ಮುಗಿಲಂಗಳದಲ್ಲಿ ಹೆಜ್ಜೆ ಇಕ್ಕುತ್ತಿತ್ತು. ಮುಗಿಲಲ್ಲಿ ಕವಿದ ಮಬ್ಬು ನಾಯಕನ ಮನವನ್ನು ಮುಸುಕಿ, ಹಲಬಗೆಯ ಕರಾಳ ಭಾವನೆಗಳು ತುಂಬಿದ ಅವನ ಮನಸ್ಸು ಬುಸುಗುಟ್ಟುವ ಹಾವುಗಳು ತುಂಬಿದ ಬುಟ್ಟಿಯಾಗಿತ್ತು. ಹಾಗೇ ಚಿಂತಿಸುತ್ತಾ ಕುಳಿತಿದ್ದ–ಸುತ್ತಲಲೋಕವನ್ನು ವೇಗವಾಗಿ ಓಡುವ ಕಾಲವನ್ನು, ಕವಿಯುತ್ತಿರುವ ಕತ್ತಲೆಯನ್ನೂ ಮರೆತು.

ಎಷ್ಟು ಹೊತ್ತು ಹಾಗೆ ಕುಳಿತಿದ್ದನೋ ಏನೋ. ದಾಸಿ ಭೀತ ಸ್ವರದಲ್ಲಿ 'ಪ್ರಭೂ....ಪ್ರಭೂ....' ಎಂದಾಗ ತಟಕ್ಕನೆ ತಿಳಿವು ಬಂದು ಎಚ್ಚರವಾಗಿ 'ಏನದು ?' ಎಂದು ಕೇಳಿದ. ಭೀತಿವಶಳಾಗಿ ನಡುಗುತ್ತಿದ್ದ ದಾಸಿ ಮಾತನಾಡಲೂ ಆಗದೆ, ಅಷ್ಟುದೂರದ ಮಾವಿನ ಮರದಡಿಯಲ್ಲಿ ಚಲಿಸದೆ ನಿಂತ, ಬಿಳಿಯ ಬಣ್ಣದ ಬಟ್ಟೆ ಧರಿಸಿದಂಥ ಮನುಷ್ಯಾಕಾರದತ್ತ ಕೈತೋರಿಸಿದಳು. ದಾಸಿ ಕೈತೋರಿದತ್ತ ನೋಡಿದ ನಾಯಕ ಆ ಆಕೃತಿಯನ್ನು ಕಂಡು 'ಯಾರದು ?' ಎಂದು ಕೇಳಿ, ಅದರತ್ತಲೇ ದಿಟ್ಟಿಸಿನೋಡಿದ. ಅವನು ನೋಡನೋಡುತ್ತಿದ್ದ ಹಾಗೇ ಆ ಆಕೃತಿ ಅವನತ್ತ ಕೈಬೀಸಿ ಕರೆದಂತಾಯಿತು. ಅರೆಗತ್ತಲಿನಲ್ಲಿ ಅಸ್ಪಷ್ಟವಾದ

ಆದರ ಕೈಯಲುಗುವಿಕೆಯನ್ನು ಅರ್ಥಮಾಡಿಕೊಂಡ ನಾಯಕ ಎದ್ದು ಅದರತ್ತ ಹೋಗಲು ಹೆಜ್ಜೆ ಹಾಕಿದ. ಅದುವರೆಗೂ ಸುಮ್ಮನೆ ಗರಬಡಿದವಳಂತೆ ನಿಂತು ನೋಡುತ್ತಿದ್ದ ದಾಸಿ ತಟಕ್ಕನೆ ನಾಯಕನ ಕೈಹಿಡಿದು ಎಳೆದು—

"ಪ್ರಭೂ—ಅತ್ತ ಹೋಗಬೇಡಿ."

—ಎಂದು ಪಿಸುದನಿಯಲ್ಲೇ ಚೀರಿದಳು.

"ಏಕೆ—ಯಾರದು ?"

—ದಾಸಿಯ ಅನಿರೀಕ್ಷಿತ ನಡತೆ ಅರ್ಥವಾಗದೆ ಚಕಿತನಾಗಿ ಕೇಳಿದ ನಾಯಕ.

"ಅದು ಭೂತ—"

"ಆ ?"

"ನಿಜ ಪ್ರಭೂ. ಸಂಜೆಯಾಯಿತೆಂದರೆ ಅದು ಈ ತೋಟದಲ್ಲಿ ಸುತ್ತುತ್ತಿರುತ್ತದೆ. ಸಮಾಧಿಗಳ ಬಳಿ ಕುಳಿತುಕೊಂಡು ಅಳುತ್ತಿರುತ್ತದೆ. ಎಷ್ಟೋ ಜನ ಅದನ್ನು ನೋಡಿ ಹೆದರಿದ್ದಾರೆ. ಅತ್ತಕಡೆ ಹೋಗಬೇಡಿ ಪ್ರಭು, ಹಾಳು ದೆವ್ವ ಮರಳುಮಾಡಿ ಕತ್ತು ಮುರಿದೀತು."

—ಎಂದಳು.

"ಏನು—ದೆವ್ವವೇ? ಛಿ ! ಎಂಥ ಮಾತು. ಯಾರ ದೆವ್ವ ಅದು ?"

"ಹೊಂಡದಲ್ಲಿ ಬಿದ್ದು ಸತ್ತ ನಾಗತಿಯರದಂತೆ. ಕತ್ತಲಿನಲ್ಲಿ ಗುಡ್ಡದಲ್ಲೆಲ್ಲಾ....'ರಕ್ತ....ರಕ್ತ....ತಲೆ....ತಲೆ' ಎಂದು ಕೂಗಿಕೊಳ್ಳುತ್ತಾ ಗುಡ್ಡದಲ್ಲೆಲ್ಲಾ ಅಲೆದಾಡುತ್ತಿರುತ್ತದಂತೆ. ಒಂದು ಸಲ ಪ್ರಧಾನಿಗಳ ಮನೆಗೇ ನುಗ್ಗಿ 'ನಾನು ನಾಗತಿ ನೆರಳು' ಎಂದು ಚೀರಿ ನಗುತ್ತಾ ಓಡಿ ಹೋಯಿತಂತೆ...."

ಆ ಮಾತು ಕೇಳಿ ಲಿಂಗಣ್ಣನಾಯಕನಿಗೆ ತಟಕ್ಕನೆ ಏನೋ ತೋಚಿತು. ದಾಸಿ ಹಿಡಿದಿದ್ದ ಕೈಯನ್ನು ಬಿಡಿಸಿಕೊಂಡು—

"ಅದೆಂಥ ಭೂತವೋ, ಅದೇನು ಮಾಡುತ್ತದೆಯೋ ನೋಡಿಯೇ ಬಿಡುತ್ತೇನೆ."

—ಎಂದು ಅದರತ್ತ ಹೆಜ್ಜೆಹಾಕಿದ.

"ಪ್ರಭೋ....ಬೇಡಿ....ಬೇಡಿ"

—ಎಂದು ದಾಸಿ ಭೀತಿ ಬೆಳೆದು ಚೀರಲೆತ್ನಿಸಿದಳು.

"ಷ್, ಸದ್ದು ಮಾಡಿದರೆ, ಭೂತವಲ್ಲ, ನಾನೇ ನಿನ್ನ ಕತ್ತು ಮುರಿಯುತ್ತೇನೆ. ತೆಪ್ಪಗಿರು"

—ಎಂದು ಪಿಸುದನಿಯಲ್ಲೇ ದಾಸಿಯನ್ನು ಗದರಿಸಿ ನಾಯಕ ಮರದ ಕೆಳಗೆ ಕಾಯುತ್ತಾ ನಿಂತ ಆಕೃತಿಯತ್ತ ನಡೆದು, ಅದರ ಬಳಿ ಸಾರಿ ನೋಡಿದ. ಮರದ ಕೆಳಗೆ ನಿಂತಿದ್ದಾಕೆ ಹೆಣ್ಣೆಂಬುದು ಹತ್ತಿರವಾದಾಗ ಅರಿವಾಯಿತು. ಮತ್ತಷ್ಟು ಹತ್ತಿರ ಹೋಗಿ ಅಸ್ಪಷ್ಟವಾದ ಮುಖವನ್ನು ದಿಟ್ಟಿಸಿ ನೋಡಿ ಅಚ್ಚರಿಯಿಂದ ಹೇಳಿದ—

"ಗಿರಿಜಾ ? ನೀನು !"

"ಷ್, ಮೆತ್ತಗೆ ಮಾತನಾಡಿ. ನನ್ನ ಹೆಸರು ಯಾರಿಗೂ ಕೇಳದಿರಲಿ."

"ಅದಿರಲಿ—ಇಷ್ಟು ದಿನ ಎಲ್ಲಿ ಹೋಗಿದ್ದೆ ಗಿರಿಜಾ; ಇದೇನು ಅವತಾರ ?"

"ಸದ್ಯಕ್ಕೆ ಇದೊಂದೇ ಅವತಾರವೇ ನನಗೆ ಉಳಿದಿರುವುದು."

—ಕಹಿ ನಿರಾಶೆಯ ಧ್ವನಿಯಲ್ಲಿ ಹೇಳಿದಳು ಗಿರಿಜಾ.

"ಏಕೆ?"

"ನೀವು ಬದುಕಿದವರನ್ನು, ಸತ್ತವರನ್ನು ಎಲ್ಲರನ್ನು ಮರೆತು ದಳವಾಯಿಯ ಕೈಗೊಂಬೆಯಾದ ಮೇಲೆ ನಾವು ಬದುಕಿದ್ದೂ ಪ್ರೇತಗಳಾಗದೆ ಮತ್ತೇನು ಮಾಡುವುದು? ಬದುಕಿದವರಂತೆ ಬೆಳಕಿನಲ್ಲಿ ಓಡಾಡಲು ದಳವಾಯಿಯ ಹೆದರಿಕೆ. ನಾಯಕರ ರಕ್ಷಣೆ ತಪ್ಪಿದ ನಮಗೆ ಈ ಇರುಳು ಬದುಕೊಂದೇ ಉಳಿದಿರುವುದು."

"ಏಕೆ ? ಅಂಥ ಭಯವಿದ್ದರೆ ನಮ್ಮನ್ನು ಬಂದು ನೋಡಬಾರದಾಗಿತ್ತೆ ?"

"ನಿಮ್ಮನ್ನು ನೋಡುವುದೇ ? ಅದರ ಬದಲು ಹುಲಿಯ ಗವಿಯೊಳಗೆ ಸುಲಭವಾಗಿ, ನಿರ್ಭಯವಾಗಿ ಹೋಗಿಬರಬಹುದು. ಅರಮನೆಯಲ್ಲಿ ಸಾಧ್ಯವಿಲ್ಲವೆಂದು ಇಲ್ಲಿ ಬಂದರೆ ಇಲ್ಲೂ ದಳವಾಯಿಯ ಜನ

ಮುತ್ತಿರುತ್ತಿದ್ದರು. ಇನ್ನೆಲ್ಲಿ ಕಾಣುವುದು ? ಆದಕ್ಕೆ ಎಂದಾದರೊಂದು ದಿನ ಒಂಟಿಯಾಗಿ ಕಂಡರೆ ಮಾತಾಡೋಣ ಎಂಬ ಬಯಕೆಯಿಂದ ಈ ಹೊತ್ತಿನಲ್ಲಿ ಸುಳಿಯುತ್ತಿದ್ದೆ. ಈ ದಿನ ಹೇಗೋ ಯೋಗಾಯೋಗ ಕೂಡಿಬಂತು. ನಾನು ನಿಮಗೆ ಹೆಚ್ಚಿಗೆ ಹೇಳಬೇಕಾದುದೇನೂ ಇಲ್ಲ; ಇಷ್ಟೆ. ದಳವಾಯಿಯ ವಿಷಯದಲ್ಲಿ ಎಚ್ಚರವಾಗಿರಿ. ನೀವು ಪಟ್ಟಕ್ಕೆ ಬಂದದ್ದು ಏಕೆ ಎಂದು ಮರೆಯಬೇಡಿ. ನಾನಿನ್ನು ಬರಲೇ?"

"ಒಂದು ಗಳಿಗೆ ನಿಂತುಕೋ ಗಿರಿಜಾ."

"ನಾನು ನಿಲ್ಲಲಾರೆ. ಅದು ಇಬ್ಬರಿಗೂ ಅಪಾಯ. ದಳವಾಯಿಯ ನಾಯಿಗಳಂತೂ ನನ್ನನ್ನು ಹುಡುಕಿಕೊಂಡೇ ಅಲೆಯುತ್ತಿವೆ. ದಳವಾಯಿ ಈಗ ಹೆಚ್ಚು ಕಡಮೆ ನಾಯಕನೇ ಆಗಿದ್ದಾನೆ. ಅಷ್ಟು ಬೆಳೆಯಲು ಬಿಡಬೇಡಿ. ಸೇಡನ್ನು ನೀವು ಮರೆತರೂ ಮುದ್ದಣ್ಣ ಮರೆತಿಲ್ಲ. ಹೊತ್ತು ಕಾಯುತ್ತಿದ್ದಾನೆ. ಅವನನ್ನು ನೀವು ಅಂಕೆಯಲ್ಲಿಡದೆ ಹೋದರೆ, ನಿಮ್ಮ ನೆತ್ತಿಗೇ ಆಪತ್ತು ಕವಿಯುತ್ತದೆ. ನಾನು ಬರಲೆ? ಮತ್ತೆ ನೋಡುತ್ತೇನೆ."

"ಎಲ್ಲಿ, ಹೇಗೆ? ನಾನೇ ನಿಮ್ಮನ್ನು ನೊಡಬೇಕಾದರೆ ಹೇಗೆ ತಿಳಿಸುವುದು?"

"ನಿಮ್ಮ ಅಂಗರಕ್ಷಕರಲ್ಲಿ ಹೊರಕೆನಾಯಕ ಎಂಬಾತನಿದ್ದಾನೆ. ನಮ್ಮ ಕಡೆಯವನು ಆತ. ಅವನಿಗೆ ಸುದ್ದಿಕೊಡಿ. ಹೇಳುತ್ತಾನೆ. ಹಾಗೇ ಒಮ್ಮೆ ಗುರುಗಳನ್ನು ಕಂಡು ಬನ್ನಿ. ನಿಮ್ಮೊಂದಿಗೆ ಅವರು ಮಾತನಾಡುವುದಿದೆ. ಪರಶುರಾಮಪ್ಪನವರ ಕೈಲಿ ಹೇಳಿಕಳುಹಿಸಿದರು. ಅದರೆ ಅವರಿಗೆ ನಿಮ್ಮನ್ನು ಕಾಣಲು ದಳವಾಯಿ ಅವಕಾಶ ಕೊಟ್ಟಿಲ್ಲ."

—ಎಂದವಳೇ ಗಿರಿಜೆ, ನಾಯಕನ ಪ್ರತ್ಯುತ್ತರಕ್ಕೂ ಕಾಯದೇ ವೇಗವಾಗಿ ನಡೆದು, ಕತ್ತಲಿನಲ್ಲಿ ಕರಗಿಹೋದಳು. ಅವಳು ಹೇಳಿದುದನ್ನೇ ಮೆಲುಕು ಹಾಕುತ್ತಾ ನಾಯಕನ ಸಮಾಧಿಯ ಬಳಿ ಹಿಂದಿರುಗಿ, ಮಾತು ಸತ್ತು ಕಡೆದ ವಿಗ್ರಹದಂತೆ ನಿಂತಿದ್ದ ದಾಸಿಗೆ—

"ಯಾರಿಗಾದರೂ ಈ ಸುದ್ದಿಯನ್ನು ಬಾಯಿ ಬಿಟ್ಟೀಯೆ, ಎಚ್ಚರಿಕೆ"

ಎಂದು ಅಪ್ಪಣೆ ಮಾಡಿ, ಸಮಾಧಿಗೆ ವಂದಿಸಿ ಅರಮನೆಯತ್ತ ಹೊರಡುವುದಕ್ಕೂ, ಅರಮನೆಯತ್ತಣಿಂದ ನಾಲ್ಕಾರು ಜನ ಪಂಜಿನಾಳು

ಗಳೊಡನೆ ಚುಕ್ಕಣ್ಣ ಇದುರಿಗೇ ಬರುವುದಕ್ಕೂ ಸರಿಹೋಯಿತು.

"ಏನು ಹುಡುಕಿಕೊಂಡು ಬಂದಿರಿ ಕಾರ್ಯಭಾರಿಗಳೇ?"

—ನಾಯಕನೇ ಚಿಕ್ಕಣ್ಣನನ್ನು ಕೇಳಿದ.

"ಏನೂ ಇಲ್ಲ, ಪ್ರಭುಗಳು ಅರಮನೆಗೆ ಹಿಂದಿರುಗುವ ಹೊತ್ತಾದರೂ ಬರಲಿಲ್ಲ ಎಂದು ತಿಳಿಯಿತು. ಹಾಗೇ ಅಂಗರಕ್ಷಕರನ್ನು ಬಿಟ್ಟು ಒಂಟಿಯಾಗೇ ದಯಮಾಡಿಸಿದಿರಿ. ಕತ್ತಲು ಹೊತ್ತಿನಲ್ಲಿ ಹೇಗೋ ಏನೋ ಎಂದು ಪಂಜಿನಾಳುಗಳನ್ನು ಕರೆದುಕೊಂಡು ಬಂದೆ."

—ಎಂದ ಚುಕ್ಕಣ್ಣ ಸಂಶಯದಿಂದ ಸುತ್ತಲೂ ಕಣ್ಣಾಡಿಸಿ ನೋಡುತ್ತಾ.

"ನಮ್ಮ ರಕ್ಷಣೆಯ ವಿಷಯದಲ್ಲಿ ತಾವು ತೋರುತ್ತಿರುವ ಆಸಕ್ತಿಗಾಗಿ ನಾವು ತುಂಬಾ ಕೃತಜ್ಞರಾಗಿದ್ದೇವೆ ಕಾರ್ಯಭಾರಿಗಳೇ."

—ನಾಯಕ ತನ್ನ ಮಾತಿನಲ್ಲಿ ಮೂಡಿಬಂದ ವ್ಯಂಗ್ಯವನ್ನು ಮರೆಸಲು ಏನೂ ಪ್ರಯತ್ನಮಾಡದೆ ಹೇಳಿದ.

"ಅದು ಬಹು ದೊಡ್ಡಮಾತು ಪ್ರಭು. ಪ್ರಭುಗಳ ಕೂದಲು ಕೊಂಕಿದರೂ ನಮ್ಮ ತಲೆ ಉಳಿಯುವುದಿಲ್ಲ. ಆದ್ದರಿಂದಲೇ ಪ್ರಭುಗಳಲ್ಲಿ ಬಿನ್ನವಿಸಿಕೊಳ್ಳುತ್ತೇನೆ—ಪ್ರಭುಗಳು ಹೀಗೆ ಒಂಟಿಯಾಗಿ ಹೊರ ಬರಬಾರದು ಪ್ರಭುಗಳಿಗೆ ಆಗದವರು ಎಷ್ಟೋ ಮಂದಿ ಇದಾರೆ."

"ಅರಮನೆಯಲ್ಲಿ ಮಾತ್ರ ನಮಗೆ ಆಗದವರು ಯಾರೂ ಇಲ್ಲ ತಾನೇ?"

—ಚುಕ್ಕಣ್ಣನನ್ನು ಕೆಣಕಿ ಕೇಳಿದ ನಾಯಕ.

"ಉಂಟೆ?—ಅಂಥ ಗಾಳಿ ಸುಳಿಯಲೂ ಅರಮನೆಯಲ್ಲಿ ಅವಕಾಶವಿಲ್ಲ. ನಾನು ಜೀವಂತನಾಗಿರುವವರೆಗೂ ಪ್ರಭುಗಳ ಬಳಿ ಅಂಥ ಭೀತಿ ಸುಳಿಯಲಾರದು."

—ಎಂದ ಚುಕ್ಕಣ್ಣ, ನಾಯಕನಿಗೆ ಭರವಸೆಕೊಡುವ ಧ್ವನಿಯಲ್ಲಿ.

"ಏನೋ ನಿಮ್ಮಂಥ ನಿಷ್ಠರ ಕಾವಲು ಇದೆ ಎಂತಲೇ ನಾವು ಜೀವದಿಂದಿದ್ದೇವೆ, ಕಾರ್ಯಭಾರಿಗಳೇ. ನಿಮ್ಮ ಈ ನಿಷ್ಠೆಯನ್ನು ನಾವು ಎಂದೂ ಮರೆಯುವುದಿಲ್ಲ."

—ಎಂದ ನಾಯಕ. ಆತ ಆ ಮಾತನಾಡಿದ ರೀತಿ, ಚುಕ್ಕಣ್ಣನ ಎದೆಯನ್ನು ಸಬಳದಂತಿರಿದು, ಚುಕ್ಕಣ್ಣನ ಹುಬ್ಬು ಹೆಣೆದುಕೊಂಡು ಮುಖ ಗಡಸಾಯಿತು. ಒಮ್ಮೆ ತುಟಿಕಚ್ಚಿ ಕಡೆದು ಬಂದ ಭಾವನೆಯನ್ನು ಒಳಗೇ ಹುದುಗಿಕೊಂಡು—

"ಸೇವಕರಲ್ಲಿ ಪ್ರಭುಗಳಿಗಿರುವ ವಿಶ್ವಾಸ ಅಪಾರವಾದದ್ದು"-ಎಂದ.

"ಉಂಟೇ?—ನಾವೇ ನಿಮ್ಮ ವಿಶ್ವಾಸದ ಸೆರೆಯಾಳುಗಳು"

—ಎಂದವನೇ ನಾಯಕ ಮಾರುತ್ತರಕ್ಕೆ ಕಾಯದೆ, ದಾಪುಗಾಲು ಹಾಕುತ್ತಾ ಪಂಜಿನವರು ಬೆಳಕು ತೋರಿದ ದಾರಿಯಲ್ಲಿ ಅರಮನೆಯತ್ತ ನಡೆದನು.

೭

'ಅರಮನೆಯಲ್ಲಿ ನನ್ನವರು ಯಾರೂ ಇಲ್ಲ. ನನ್ನವರು ಎನಿಸಿಕೊಂಡವರಾರೂ ಅರಮನೆಗೆ ಬರುತ್ತಿಲ್ಲ. ವಿರೋಧಿಪಕ್ಷದವರೇ ಇಡುಕರಿಸಿದ ಈ ಅರಮನೆಯಲ್ಲಿ ನಾನು ಏಕಾಂಗಿ' ಎಂದುಕೊಂಡಿದ್ದ ಲಿಂಗಣ್ಣನಾಯಕನಿಗೆ ಗಿರಿಜೆಯಿಂದ ಅಂಗರಕ್ಷಕ ಪಡೆಯಲ್ಲಿರುವ ಹೊರಕೆನಾಯಕ ಎಂಬುವನನ್ನು ನಂಬಬಹುದು ಎಂದು ತಿಳಿದು ಮನಸ್ಸಿಗೆ ಕೊಂಚ ಸಮಾಧಾನವಾಗಿ, ದಟ್ಟವಾದ ಹೊಗೆ ಕವಿದಂತಿದ್ದ ಆ ವಾತಾವರಣದಲ್ಲೂ ಎಲ್ಲೋ ಒಂದು ಕಡೆಯಿಂದ ಉಸಿರಾಡಿಸಬಹುದಾದಂಥ ಗಾಳಿ ಬೀಸಿದಂತಾಯಿತು. ಆದರೆ ಅವನನ್ನು ತಾನು ಕರಸಿ ಮಾತನಾಡಿಸುವುದು ಹೇಗೆ, ಯಾರ ಮೂಲಕ ಹೇಳಿ ಕಳುಹಿಸುವುದು ಎಂದು ಚಿಂತಿಸಿ, ಕಡೆಗೆ ತನ್ನೊಂದಿಗೆ ಹಿಂದಿನ ದಿನ ಸಮಾಧಿ ಪೂಜೆಗೆ ಬಂದಿದ್ದ ದಾಸಿಯನ್ನು ಏಕಾಂತವಾಗಿ ಕರೆದು ಮಾತನಾಡಿಸಿ, ಅವಳನ್ನು ನಂಬಬಹುದು ಎಂದು ನಿಶ್ಚಯಮಾಡಿಕೊಂಡು, ಆದಕ್ಕೆ ಪೋಷಕವಾಗಿ ಆವಳಿಂದ ಆಣೆ ಪ್ರಮಾಣ ಮಾಡಿಸಿಕೊಂಡು, ಅವಳ ಮೂಲಕ ಹೊರಕೆಯನಾಯಕನಿಗೆ ಹೇಳಿಕಳಿಸಿದ.

ದಾಸಿಯೊಂದಿಗೆ ಬಂದ ಹೊರಕೆನಾಯಕನನ್ನು ನೋಡಿ ಲಿಂಗಣ್ಣನಾಯಕನಿಗೆ ಕುಳಿತ ಸ್ಥಳದಲ್ಲೇ ಎತ್ತಿ ಕುಕ್ಕಿದಹಾಗಾಯಿತು. ಹೊರಕೆನಾಯಕ ಬೇರಾರೂ ಆಗಿರದೆ, ಹಿಂದಿನ ದಿನ ತನ್ನೊಂದಿಗೆ ಬರಲು ಹಟಮಾಡಿದ ಕಾವಲು ಪಡೆಯ ಮುಖ್ಯಸ್ಥನಾಗಿದ್ದ. ಇವನನ್ನು ನಂಬು

ವುದೇ ಎಂದು ಯೋಚನೆಯಾಯಿತು. ಆದರೆ ಅದನ್ನು ತೋರಗೊಡದೆ ತನ್ನ ಗುಟ್ಟನ್ನೂ ಬಿಟ್ಟುಕೊಡದೆ—

"ನಿನ್ನ ಹೆಸರು ಹೊರಕೆನಾಯಕ ಎಂದೇ ?"

—ಎಂದು ಕೇಳಿದ.

"ಅಹುದು ಪ್ರಭು. ಅದೇ ಈ ಪಾದಸೇವಕನ ಹೆಸರು. ಕರಸಿದ ಕಾರಣ ಅಪ್ಪಣೆಯಾಗಬೇಕು."

—ಎಂದ ಹೊರಕೆನಾಯಕ. ಅವನಾಡಿದ ಮಾತನ್ನು ಕೇಳಿ ಲಿಂಗಣ್ಣನಾಯಕ ಹೊರಕೆನಾಯಕನ ಮುಖವನ್ನು ಪರೀಕ್ಷಿಸುವಂತೆ ತೀವ್ರ ನೋಟದಿಂದ ನೋಡಿದ. ಹೊರಕೆನಾಯಕನೂ ಆ ನೋಟಕ್ಕೆ ಅಳುಕದೆ ನಾಯಕನ ಮೊಗವನ್ನು ಈಕ್ಷಿಸಿದ. ಹೊರಕೆನಾಯಕನ ಮುಖದಲ್ಲಿ ಕುಹಕವಾಗಲಿ, ದ್ರೋಹವಾಗಲಿ ನಾಯಕನಿಗೆ ಕಾಣಲಿಲ್ಲ. ಅದನ್ನು ಮನವರಿಕೆ ಮಾಡಿಕೊಂಡು ಹೇಳಿದ :

"ಈ ದಿನ ನಿನ್ನಲ್ಲಿ ಒಂದು ಮಾತಾಡಬೇಕೆಂದು ಕರಸಿದ್ದೇವೆ. ನಂಬಿ ಮಾತನಾಡಬಹುದೇ ?"

"ಪ್ರಭುಗಳು ಈ ಕಿವಿಗೆ ಹೇಳಿದ ಮಾತನ್ನು, ಕಣ್ಣಿಗೆ ತೋರಿಸಿದುದನ್ನು ಈ ನಾಲಗೆ ಬೇರೆಲ್ಲಿಯಾದರೂ ನುಡಿದರೆ ಇದನ್ನು ನಿರ್ದಾಕ್ಷಿಣ್ಯವಾಗಿ ಕತ್ತರಿಸಿ ಹಾಕುತ್ತೇನೆ. ತಾವು ನಿಸ್ಸಂಶಯವಾಗಿ ಮಾತನಾಡಬಹುದು."

ಹೊರಕೆನಾಯಕನ ಮಾತು ನಾಲಗೆಯ ತುದಿಯಲ್ಲೇ ಅರಳದೆ, ಹೃದಯದಾಳದಿಂದ ಮೂಡಿ ಬಂದಿತು. ಆ ಮಾತನ್ನು ಕೇಳಿ ನಾಯಕನ ಮನದಲ್ಲಿ ಉಳಿದಿದ್ದ ಅಲ್ಪ ಸ್ವಲ್ಪ ಸಂಶಯವೂ ಕಡಿದು ಹೋಯಿತು. ಬಳಿಕ ಅಷ್ಟು ದೂರದಲ್ಲಿ ನಿಂತಿದ್ದ ದಾಸಿಯನ್ನು ಕರೆದು, "ಬಾಗಿಲ ಬಳಿ ಇರು. ಯಾರಾದರೂ ಬಂದ ಸುಳಿವು ಕಂಡರೆ ಸದ್ದು ಮಾಡು" ಎಂದು ಹೇಳಿದ ಲಿಂಗಣ್ಣನಾಯಕ.

"ಪ್ರಭುಗಳು ಆ ಚಿಂತೆ ಮಾಡುವುದು ಬೇಡ. ಬಾಗಿಲಾಚೆ ನಮ್ಮವನೊಬ್ಬನನ್ನು ನಿಲ್ಲಿಸಿ ಬಂದಿದ್ದೇನೆ—ಕಾವಲಿಗಾಗಿ. ಏನು ಮಾತಿದ್ದರೂ ಹೇಳಬಹುದು."

—ಎಂದ ಹೊರಕೆನಾಯಕ. ಅವನ ಮುಂಜಾಗರೂಕತೆಯ ಬುದ್ಧಿ ನಾಯಕನಿಗೆ ಮೆಚ್ಚಿಗೆಯಾಯಿತು. ಆ ತೃಪ್ತಿಯಲ್ಲೇ ಹೇಳಿದ:

"ದಳವಾಯಿಗಳ ಕಡೆಯವರೇ ತುಂಬಿದ ಈ ಅರಮನೆಯಲ್ಲಿ ನಮ್ಮವರು ಎನ್ನುವವರೂ ಯಾರೂ ಇಲ್ಲ ಎಂದಿದ್ದೆವು. ನಿನ್ನೆ ಗಿರಿಜೆಯಿಂದ...."

"ಗಿರಿಜವ್ವೆ ಪ್ರಭುಗಳಿಗೆ ಕಾಣಸಿಕ್ಕಿದ್ದಳೇ? ಎಲ್ಲಿ?"

—ಎಂದು ನಾಯಕನು ಮಾತು ಮುಗಿಸುವುದರೊಳಗಾಗಿಯೇ ಹೊರಕೆನಾಯಕ ಆತುರದಿಂದ ಕೇಳಿದ.

"ನಿನ್ನೆ ಸಂಜೆ ಸಮಾಧಿ ಪೂಜೆಗೆ ಹೋಗಿದ್ದಾಗ."

"ಪ್ರಭುಗಳು ಆಕೆಗೆ ಈ ಅರಮನೆಯ ಸುತ್ತಲಲ್ಲಿ ಎಲ್ಲೂ ಬರಬೇಡ ಎಂದು ಅಪ್ಪಣೆಮಾಡಬೇಕಾಗಿತ್ತು."

"ಏಕೆ?"

"ಇಲ್ಲಿ ಆಕೆಗೆ ಕ್ಷಣ ಗಂಡಾಂತರ, ನಿತ್ಯ ಆಪತ್ತು. ದಳವಾಯಿಗಳ ಕಡೆಯ ಜನ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಆಕೆಗಾಗಿ ಕಾಯುತ್ತಿದ್ದಾರೆ. ನಿನ್ನೆಯೂ ನಾವು ಅರಮನೆಗೆ ಹಿಂದಿರುಗಿದ ಮೇಲೆ ಬೇಟೆ ನಾಯಿಗಳೊಡನೆ ರಾತ್ರಿಯೆಲ್ಲಾ ಹುಡುಕಿದರು. ಅವರ ಕಣ್ಣಿಗೇನಾದರೂ ಬಿದ್ದಳೋ—ಆಕೆಯ ಪ್ರಾಣಕ್ಕೆ ಕನತೆಯ ಬೆಲೆಯೂ ಇಲ್ಲ."

"ದಳವಾಯಿಗಳಿಗೆ ಗಿರಿಜೆಯ ಮೇಲೇಕೆ ಅಷ್ಟು ರಚ್ಚು?"

"ದಳವಾಯಿಗಳ ವಿರುದ್ಧ ಹಳ್ಳಿಯ ಜನಗಳನ್ನು ಎತ್ತಿಕಟ್ಟಿದಾಕೆ ಗಿರಿಜೆಯೇ ಎಂಬುದು ಅವರಿಗೆ ತಿಳಿದಿದೆ."

"ಏನು ಆ ಕೆಲಸ ಮಾಡಿದವಳು—ನಮ್ಮ ಗಿರಿಜೆಯೇ?"

—ಹೊರಕೆನಾಯಕನ ಮಾತು ಕೇಳಿ ಆಶ್ಚರ್ಯದಿಂದ ಕೇಳಿದ ಲಿಂಗಣ್ಣನಾಯಕ.

"ಗಿರಿಜವ್ವೆಯೇ. ಆ ಹೆಣ್ಣಿನ ಮುಂದೆ ನಮ್ಮಂಥ ಗಂಡಸರು ಹುಲ್ಲುಕಡ್ಡಿ. ಆ ಎದೆಗಾರಿಕೆ ನಮಗೇ ಸಾಧ್ಯವಿಲ್ಲ. ಪ್ರಧಾನಿಗಳ ಮನೆಗೇ ನುಗ್ಗಿ ಅವರನ್ನು ಬೆದರಿಸಿ, ಅವರ ಕೈಗೆ ಸಿಗದೆ ತಪ್ಪಿಸಿಕೊಂಡು ಓಡಿದಳು. ವೀರನಾಯಕನನ್ನು ದಳವಾಯಿಗಳು ಕೊಲ್ಲಿಸಿದಾಗಲಿಂದಲೂ ದಳವಾಯಿಯ ತಲೆಗಾಗಿ ಅಲೆಯುತ್ತಿದ್ದಾಳೆ. ಹೊತ್ತು ಬಂದಾಗ ಆ ಕೆಲಸ ನಾನೇ

ಮಾಡುತ್ತೇನೆ. ನೀನು ದುರ್ಗಕ್ಕೆ ಬರಬೇಡ ಎಂದರೂ ಕೇಳುವುದಿಲ್ಲ. ಪ್ರಭುಗಳಾದರೂ ಆಕೆಗೆ ಅಪ್ಪಣೆ ಮಾಡಬೇಕು. ನಮಗಂತೂ ಆಕೆಯ ಚಿಂತೆಯಲ್ಲಿ ನಿದ್ರೆಯೂ ಬರುವುದಿಲ್ಲ."

"ನಿನಗೂ ಗಿರಿಜೆಗೂ ಎಲ್ಲಿಯ ಪರಿಚಯ?"

"ಓಬಣ್ಣನಾಯಕರ ಕಾಲದಲ್ಲಿ ಖಾಸಾ ಪರಿವಾರದಲ್ಲಿ ಕಸ್ತೂರಿ ನಾಯಕನ ಪರಿಚಯ ಪ್ರಭುಗಳಿಗಿರಬೇಕು."

"ಅಹುದು—ಬಲ್ಲೆವು."

—ಕಸ್ತೂರಿನಾಯಕನ ಹೆಸರಿನೊಂದಿಗೆ ಉಳಿದೆಲ್ಲ ನೆನಪುಗಳೂ ನುಗ್ಗಿ ಬಂದು, ಎದೆಗೆ ಬೆಂಕಿ ಹೊತ್ತಿಸಿದಂತಾಗಿ ಹೇಳಿದ ಲಿಂಗಣ್ಣ ನಾಯಕ.

"ನಾನು ಆತನ ಹೆಂಡತಿಯ ತಮ್ಮ. ಕಸ್ತೂರಿನಾಯಕರು ಕತ್ತಿಗೆ ತಲೆಗೊಟ್ಟ ದಿನ ನಮ್ಮಕ್ಕನ ಬಾಳು ಬರಿದಾಗಿ ಆ ಕೊರಗಿನಲ್ಲೇ ಆಕೆ ಸತ್ತಳು. ಆ ಮನೆಯೇ ಹಾಳಾಗಿ ಹೋಯಿತು—ಈ ದಳವಾಯಿ ದುರ್ಗದಲ್ಲಿಟ್ಟ ಕಿಚ್ಚಿನಿಂದ. ಅದಕ್ಕೆ ಪ್ರತೀಕಾರ ಮಾಡಲೆಂದೇ, ಹೊತ್ತು ಕಾದು ಕೆಲಸ ಸಾಧಿಸಲು ಈ ಅರಮನೆಯ ಊಳಿಗಕ್ಕೆ ಸೇರಿದೆ. ಪ್ರಭು ಗಳು ಪಟ್ಟಕ್ಕೆ ಬಂದ ಮೇಲೆ ಅದಕ್ಕೆ ಅವಕಾಶಸಿಗಬಹುದು ಎಂದಿದ್ದೆವು. ಆದರೆ ಪ್ರಭುಗಳು ನಮ್ಮನ್ನು ನಿರಾಶೆಮಾಡಿದಿರಿ."

—ಕರ್ಕಶವಾದ ನಿರಾಶೆಯ ಸ್ವರದಲ್ಲಿ ಹೇಳಿದ ಹೊರಕೆನಾಯಕ.

"ಹೇಗೆ?"

"ಪಟ್ಟಕ್ಕೆ ಬಂದಮೇಲೆ ಪ್ರಭುಗಳು ದಳವಾಯಿಯನ್ನು ಪ್ರಧಾನಿ ಪಟ್ಟದಿಂದ ಕಿತ್ತು, ಆ ಕೆರವನ್ನು ಎಲ್ಲಿ ಬಿಡಬೇಕೋ ಅಲ್ಲಿ ಬಿಡದೆ, ಅವ ನನ್ನು ಬೆಳೆಯಲು ಬಿಟ್ಟು, ಆ ಸರ್ಪಕ್ಕೆ ಅರಮನೆಯ ಪಾರುಪತ್ಯವನ್ನೂ ಒಪ್ಪಿಸಿರುವಿರಿ. ಹಾಗೆಮಾಡಿ ನಿಮ್ಮ ಕೈಯನ್ನೇ ಅಲ್ಲ, ನಮ್ಮ ಕೈಯನ್ನು ಕಟ್ಟಿಬಿಟ್ಟಿರಿ. ನಮ್ಮವರು ಎಂದುಕೊಂಡಿದ್ದ ಪರಶುರಾಮಪ್ಪನವರೂ ಸೇಡು ತೀರಿಸುವ ಎಂದರೆ ಹಿಂಜರಿಯುತ್ತಾರೆ. ಆ ವೀರಶೈವ ಸ್ವಾಮಿ ಗಳು ಅವರಿಗೇನು ಮಂಕುಬೂದಿ ಎರಚಿದ್ದಾರೋ ನಿಮಗೇನು ಮಾಟ ಮಾಡಿದ್ದಾರೋ, ಎಲ್ಲಾ ಹಾವಾಡಿಗನ ಕೈಯ ಹಾವುಗಳಾಗಿ ಬಿಟ್ಟಿರಿ.

ದಳವಾಯಿ ಭರಮಣ್ಣನವರೂ ನನ್ನ ಹಾಗೇ ಹಲ್ಲು ಕಡಿಯುತ್ತಾ ಇದ್ದಾರೆ. ನೀವು ಒಂದು ಹೆಜ್ಜೆ ಮುಂದಿಟ್ಟರೆ, ನಾವು ಹತ್ತು ಹೆಜ್ಜೆ ಹೋಗಬಹುದು. ಕೈ ಸುಮ್ಮನಿದ್ದಾಗ ಕೈಯಲ್ಲಿದ್ದ ಕತ್ತಿ ಏನು ಮಾಡಬಹುದು?"

"ಸೇಡಿನ ಬಯಕೆ, ರಕ್ತಪಿಪಾಸೆ ತಪ್ಪಲ್ಲವೇ ಹೊರಕೆನಾಯಕ?"

"ತಮಗೂ ಆ ಗುರುಗಳ ಉಪದೇಶ ಚೆನ್ನಾಗಿ ಕಿವಿಯಲ್ಲಿ ನಾಟಿರುವಂತಿದೆ."

"ಏಕೆ—ಅವರ ಮಾತು ತಪ್ಪೆ?"

"ಗುರುಗಳು ದೊಡ್ಡವರು, ಪ್ರಭು ಜಗತ್ತನ್ನೇ ಬಿಟ್ಟವರು. ಅವರು ಏನು ಹೇಳಿದರೂ ನಡೆಯುತ್ತದೆ. ಅವರು ಹೇಳಿದುದು ತಪ್ಪು, ಸರಿ ಎಂದು ಹೇಳಲು ನಾನು ಯಾರು? ಆದರೆ ನನ್ನ ಹಾಗೆ ಗುರುಗಳೂ ಅಕ್ಕತಂಗಿಯರನ್ನು, ಗಂಡಂದಿರನ್ನು, ತಾಯಿ, ತಮ್ಮಂದಿರನ್ನು ಕಳೆದುಕೊಂಡಿದ್ದರೆ ತಾನೇ ಅವರಿಗೆ ನಮ್ಮ ಎದೆಗುದಿ ಗೊತ್ತಾಗುತ್ತಿದ್ದುದು. ನೆರಳಿನಲ್ಲಿ ಕುಳಿತವರು ಬಿಸಲಿನಲ್ಲಿರುವವರಿಗೆ ತಣ್ಣಗಿರಿ ಎಂದು ಹೇಳುವುದು ಸುಲಭ ಪ್ರಭು, ಆದರೆ ಬಿಸಿಲಕಿಚ್ಚಿನಲ್ಲಿ ಬೇಯುವವರಿಗೆ ತಾನೇ ಅದರ ತಾಪ. ಅವರ ದಾರಿ ಅವರಿಗೆ, ನಮ್ಮ ದಾರಿ ನಮಗೆ. ದಿನದಿನ ಈ ದಳವಾಯಿ ಮಾಡುವ ಅತ್ಯಾಚಾರವನ್ನು ಕಂಡಿದ್ದರೆ, ಅವರೂ ನಮ್ಮ ಹಾಗೇ ಆಗುತ್ತಿದ್ದರು. ಆದರೆ ಮಠದಲ್ಲಿ ತಂಪಾಗಿ ಶಿವಪೂಜೆ ಮಾಡಿಕೊಂಡಿರುವವರಿಗೆ ಅದೆಲ್ಲಾ ಏನು ಗೊತ್ತು?"

"ಪ್ರಧಾನಿಗಳು ಅಷ್ಟು ಅತ್ಯಾಚಾರ ಮಾಡುತ್ತಿದ್ದಾರೆಯೇ?"

"ಏನೂ ನೋಡುವುದಿಲ್ಲ ಎನ್ನುವ ನಿಮಗೆ ಹೇಗೆ ತಿಳಿಯಬೇಕು ಪ್ರಭು? ಮೊನ್ನೆ ಅರಮನೆಯ ಬಾಗಿಲವರೆಗೂ ತಮ್ಮನ್ನು ಕಾಣಬೇಕೆಂದು ಬಂದ ನಾಗತಿಯವರು, ಕಾರ್ಯಭಾರಿಯ ಕೈಯಲ್ಲಿ ಅಪಮಾನಮಾಡಿಸಿಕೊಂಡು ಹೋದದ್ದನ್ನು ನೋಡಿದರೆ, ನಿಮ್ಮ ನೆತ್ತರೂ ಕಾವಾಗುತ್ತಿತ್ತು. ನಾಗತಿಯರನ್ನೇ ಅರಮನೆಗೆ ಬಿಡುವುದಿಲ್ಲ ಎನ್ನುವಷ್ಟು ಸೊಕ್ಕು ಬಂದಿದೆ ಈ ಕುನ್ನಿಗೆ."

—ಅದುವರೆಗೂ ಹೊಗೆಯಾಗಿದ್ದವನು, ತಟಕ್ಕನೆ ಉರಿಯಾಗಿ ಹೇಳಿದ ಹೊರಕೆನಾಯಕ.

"ಆ—ನಿಜವೇ ?"

—ಹೊರಕೆನಾಯಕ ಹೇಳಿದುದನ್ನು ನಂಬಲಾಗದವನಂತೆ ಕೇಳಿದ ಲಿಂಗಣ್ಣನಾಯಕ.

"ಸುಳ್ಳಾಡಿದರೆ ನನ್ನ ತಲೆ ಹೋಗಲಿ. ನೀವು ಸಡಿಲಬಿಟ್ಟು ಈ ಸ್ಥಿತಿಗೆ ತಂದಿರಿ."

"ನಾಗತಿಯವರಿಗೇ, ಅರಮನೆಯ ಬಾಗಿಲಲ್ಲಿ ಅಪಮಾನ ವಾಯಿತೇ ?"

"ಏನು ಮಾತು ಪ್ರಭು—ನೆಕ್ಕುವ ನಾಯಿಗೆ ಲಿಂಗವೇನು ಪಾಣಿ ಪಟ್ಟವೇನು ? ಅವನ ದರ್ಪದಿಂದ ಪರಶುರಾಮುಪ್ಪನವರಾಗಲಿ, ಭರ ಮಣ್ಣನವರಾಗಲಿ ಅರಮನೆಯತ್ತ ಸುಳಿಯುವಂತಿಲ್ಲ. ಅವರಿವರದೇನು- ನೀವೇ ಅರಮನೆಬಿಟ್ಟು ಅಲ್ಲಾಡದಂತಿರುವಾಗ, ನಾಗತಿಯವರಿಗೆ, ಪರಶುರಾಮುಪ್ಪನವರಿಗೆ ಅವಮಾನವಾಯಿತು ಎಂದರೆ, ಹನುಮಂತರಾಯ ಹಗ್ಗತಿಂದಾಗ ಪೂಜಾರಪ್ಪ ಶಾಮಿಗೆ ಕೇಳಿದ ಅಂದ ಹಾಗಾಗುತ್ತದೆ."

—ಉಕ್ಕಿಬಂದ ಕ್ರೋಧದಲ್ಲಿ ತಾನು ಮಾತನಾಡುತ್ತಿರುವುದು ನಾಯಕರ ಇದುರಿಗೆ ಎಂಬುದನ್ನೂ ಮರೆತು ಮಾತನಾಡಿದ ಹೊರಕೆ ನಾಯಕ. ಅವನ ಮಾತನ್ನು ಕೇಳಕೇಳುತ್ತಾ ನಾಯಕನ ನರನಾಡಿ ಗಳಲ್ಲೂ ಕ್ರೋಧಾಗ್ನಿ ವೇಗವಾಗಿ ಸಂಚರಿಸಿತು. ಆ ಕ್ರೋಧದಲ್ಲಿಯೇ ಉದ್ವಿಗ್ನನಾಗಿ ಹೇಳಿದ :

"ಈ ವಿಷಯವನ್ನೆಲ್ಲಾ ಈ ಮೊದಲೇ ನಮ್ಮ ಗಮನಕ್ಕೇಕೆ ತರಲಿಲ್ಲ ?"

"ನಿಜ ಹೇಳಲೇ ಪ್ರಭು ?"

"ಹೇಳು."

"ಇಷ್ಟುದಿನ ನೀವು ನಮ್ಮವರೇ ಎಂಬ ನಂಬಿಕೆಯೇ ನಮಗಿರಲಿಲ್ಲ. ತಾವು ಪಟ್ಟಕ್ಕೆ ಬರುವ ಮೊದಲು ಆ ನಂಬಿಕೆ ಇತ್ತು. ಪಟ್ಟಕ್ಕೆ ಬಂದ ಮೇಲೆ ಈ ಪಟ್ಟದ ಆಸೆಗೆ ಬಿದ್ದು ನೀವೂ ಅವನವನಾಗಿಯೇ ಹೋದಿ ರೇನೋ ಎನಿಸಿತ್ತು. ಇಂದು ಕೊಂಚ ಆಸೆ ಕಂಡಿತು. ಈಗ ನೀವು ನಮ್ಮವರೇ ಎಂದು ಮತ್ತೆ ನಂಬಿಕೆಯಾಯಿತು. ಈ ಮಾತು ಕೇಳಿದರೆ,

ನನ್ನ ಹಾಗೇ ಕುದಿಯುತ್ತಾ, ಹಲ್ಲುಕಳಚಿದ ಹಾವುಗಳಂತಿರುವ ನಮ್ಮ ವರಿಗೂ ಜೀವ ಬಂದ ಹಾಗಾಗುತ್ತದೆ."

"ಇಂದಿನವರೆಗಾದುದನ್ನು ಮರೆತುಬಿಡು ಹೊರಕೆನಾಯಕ. ಇಂದಿನಿಂದ ಬೇರೆಯ ಅಧ್ಯಾಯವೇ ಆರಂಭವಾಗುತ್ತದೆ-ಪ್ರತೀಕಾರಾಧ್ಯಾಯ. ನಮಗೂ ಏನೋ ಮಂಕು ಕವಿದಿತ್ತು. ನಮ್ಮವರು ಅರಮನೆಯಲ್ಲಿ ಯಾರೂ ಇಲ್ಲ ಎಂದುಕೊಂಡಿದ್ದೆವು. ಈಗ ನೀನೊಬ್ಬನು ಸಿಕ್ಕಿದೆ."

"ನಾನೊಬ್ಬನೇನು—ನನ್ನ ಹಾಗೇ ಪ್ರಭುಗಳ ರಕ್ಷಣೆಯ ಪಣ ತೊಟ್ಟವರು ಇನ್ನೂ ನಾಲ್ಕಾರು ಮಂದಿ ಇದ್ದಾರೆ ಅರಮನೆಯಲ್ಲಿ."

"ನಿಜವೇ?"

"ನಿಜ, ಪ್ರಭು. ನಾವೆಲ್ಲಾ ನಮ್ಮ ಗೌಡರಿಗೆ ಮಾತುಕೊಟ್ಟಿದ್ದೇವೆ."

"ನಿಮ್ಮ ಗೌಡರಿಗೆ ಅಂದರೆ—ಯಾರು?"

"ಗೋಪಾಲಪುರದ ಗೌಡರಿಗೆ. ಹಾಲು ಹಿಡಿದು ಪ್ರಮಾಣ ಮಾಡಿ ಕೊಟ್ಟಿದ್ದೇವೆ-ನಾವು ಜೀವಂತರಾಗಿರುವವರೆಗೂ ಪ್ರಭುಗಳಿಗೆ ಅಪಾಯ ವಾಗಲು ಬಿಡುವುದಿಲ್ಲ ಎಂದು. ನಮ್ಮನ್ನು ನಂಬಿ."

"ನೀವೆಲ್ಲಾ ಅಂದರೆ— ಮತ್ತೆ ಯಾರು ಯಾರಿದಾರೆ?"

"ನಾನು, ಗುರಿಕಾರ ರಾಮುಜೋಗಿ, ತಡಪಿನ ಚಿನ್ನಯ್ಯ, ಪೋತು ರಾಜನ ಲಿಂಗಯ್ಯ, ಕೌಲು ತಮ್ಮಯ್ಯ, ಬೆಂಡೊಣೆ ದಾಸಯ್ಯ—ನಾವು ಆರುಜನ. ಪ್ರಭುಗಳು ಹೂ ಎಂದರೆ ಮತ್ತೆ ಅರವತ್ತು ಜನ ಸಿದ್ಧವಾಗುತ್ತದೆ. ಆದರೆ ನೀವು ಕೈತೋರಿಸದೆ, ನಾವೆಲ್ಲಾ ಇದ್ದೂ ಸತ್ತವರು. ಪ್ರಭುಗಳು ಹೀಗೆ ಕುಳಿತರಾಗುವುದಿಲ್ಲ. ಪರಶುರಾಮಪ್ಪ, ದಳವಾಯಿ ಭರಮಣ್ಣನವರನ್ನು ಒಂದು ಬಾರಿ ಕಂಡು, ಈಗ ಪಾದಸೇವಕನಿಗೆ ಹೇಳಿದ ಮಾತನ್ನೇ ಅವರಿಗೂ ಹೇಳಿದರೆ, ಆಗ ಅವರಿಗೂ ಜೀವ ಬರುತ್ತದೆ. ಅವರೂ ಸನ್ನಿಧಾನವನ್ನು ಕಂಡು ಮಾತನಾಡಬೇಕೆಂದಿದ್ದಾರೆ."

"ಅವರನ್ನು ಎಲ್ಲಿ ಕಾಣುವುದು ಹೊರಕೆನಾಯಕ?"

"ಗುರುಗಳು ತಮ್ಮನ್ನು ಕಾಣಬೇಕೆಂದಿರುವರಂತೆ. ಪ್ರಭುಗಳೇ ಅಲ್ಲಿಯವರೆಗೆ ಪಾದ ಬೆಳಸಿದರೆ, ಅಲ್ಲಿ ಎಲ್ಲರನ್ನೂ ಕಾಣಬಹುದು."

"ಹಾಗಾದರೆ, ಇಂದು ಸಂಜೆ ನಾವು ಮಠಕ್ಕೆ ಬರುವುದಾಗಿ ಹೇಳಿ ಕಳುಹಿಸು."

"ಈ ಕಾರ್ಯಭಾರಿ ಒಪ್ಪಬೇಕಲ್ಲಾ ಅದಕ್ಕೆ...."

"ಇನ್ನು ನಮ್ಮ ದಾರಿಗೆ ಅಡ್ಡವಾದವರು ಯಾರೇ ಆದರೂ ಉಳಿಯುವುದಿಲ್ಲ, ಇದು ನಮ್ಮ ಅಪ್ಪಣೆ ಎಂದು ಕಾರ್ಯಭಾರಿಗೆ ಹೇಳು. ನಮ್ಮ ಕಾವಲು ಪಡೆಯುವನಂತೆ ನೀನೂ ಬಾ."

"ಅವನು ಬೇಡವೆಂದರೂ ನಾನು ಬಿಡುವುದಿಲ್ಲ, ನಿಮ್ಮ ಬೆನ್ನು ನೆರಳಾಗಿರಬೇಕೆಂದೇ ಈ ಕೆಲಸಕ್ಕೆ ಒಪ್ಪಿಕೊಂಡದ್ದು."

—ಎಂದ ಹೊರಕೆನಾಯಕ.

"ಹಾಗಾದರೆ ಸರಿ—ನಮ್ಮ ಅಪ್ಪಣೆಯನ್ನು ಕಾರ್ಯಭಾರಿಗೆ ಹೇಳು."

"ಅಪ್ಪಣೆಯೇ ಬುದ್ಧಿ?"

"ಅಹುದು—ಅಪ್ಪಣೆ ಏಕೆ?"

"ಪ್ರಭು, ತಮ್ಮ ಬಾಯಿಂದ ಇಂಥ ಮಾತು ಎಂದು ಬಂದಿತೋ ಎಂದು ಕೇಳುವುದಕ್ಕೆ ಈ ಕಿವಿ ತಪಸ್ಸು ಮಾಡುತ್ತಿದ್ದವು. ಇಂದು ನಮ್ಮ ಜನ್ಮ ಸಾರ್ಥಕವಾದಂತಾಯಿತು."

—ಎಂದು ಹರ್ಷದಿಂದ ಕಣ್ಣಲ್ಲಿ ಕಂಬನಿಯುಕ್ಕುತ್ತಿರಲು, ನೆಲದ ಮೇಲೆ ಮೈಯನ್ನೀಡಾಡಿ ನಮಸ್ಕರಿಸಿದ ಹೊರಕೆನಾಯಕ.

## ೮

ಯಾರಿಗೂ ಹೇಳದೆ ಕೇಳದೆ, ಮೊದಲೇ ಸೂಚನೆಯನ್ನೂ ಕೊಡದೆ ನಾಯಕ ತಾನೇ ಸ್ವಾತಂತ್ರವಹಿಸಿ ಮಠಕ್ಕೆ ಹೋಗಿಬಂದ; ಗುರುಗಳು, ಪರಶುರಾಮಪ್ಪ, ಭರಮಣ್ಣ ಎಲ್ಲರೂ ಬಹಳ ಹೊತ್ತು ಕಲೆತು ಮಾತನಾಡಿದರು ಎಂಬುದನ್ನು ಚುಕ್ಕಣ್ಣನಿಂದ ತಿಳಿದ ಮುದ್ದಣ್ಣ ಎಣ್ಣೆಯುಂಡ ಬೆಂಕಿಯಂತೆ ಉರಿದೆದ್ದ.

"ಹಕ್ಕಿಗೆ ಹೊಸರೆಕ್ಕೆ ಬರುತ್ತಿರುವಂತೆ ಕಾಣುತ್ತದೆ. ಏನೋ ಹೋಗಲಿ ಉಂಡುಟ್ಟು, ಹೆಸರಿಗೆ ಸಿಂಹಾಸನದ ಮೇಲಿರಲಿ ಎಂದರೆ ಸೊಕ್ಕು ಬಲಿಯುತ್ತಿದೆ. ಮುದ್ದಣ್ಣ ಬದುಕಿದಾನೆ ಎಂಬುದೇ ಇವರಿಗೆ ಮರೆತುಹೋದಂತಿದೆ. ಅದನ್ನು ನೆನಪು ಮಾಡಿಕೊಡದಿದ್ದರೆ, ಇನ್ನು ಸಾಧ್ಯವಿಲ್ಲ."

—ಎಂದುಕೊಂಡು ಚುಕ್ಕಣ್ಣನಿಂದ ಸುದ್ದಿಯನ್ನು ತಂದ ಗುರಿಕಾರನಿಗೆ, 'ಕಾರ್ಯಭಾರಿಗಳಿಗೆ ಸಂಜೆ ಬಂದು ನಮ್ಮನ್ನು ಕಾಣುವಂತೆ ಹೇಳು.'

ಎಂದು ಅಪ್ಪಣೆಮಾಡಿ, ತಾನು ಸ್ವಾಮಿಗಳನ್ನು ಕಾಣಲು ಕಲ್ಲು ಮಠದತ್ತ ಹೊರಟ.

ತನ್ನ ವೈಭವ, ಅಧಿಕಾರ ದರ್ಪವನ್ನು ನೋಡಿಯೇ ಸ್ವಾಮಿಗಳ ಕಣ್ಣು ಕೋರೈಸಬೇಕು—ಹಾಗಿತ್ತು ಅವನು ಮಠಕ್ಕೆ ಹೊರಟ ಠೀವಿ. ಅವನು ಮಠದ ಬಳಿ ಬಂದ ವೈಭವವನ್ನು ನೋಡಿದರೆ, ಬಂದವರು ಪ್ರಧಾನಿಗಳಲ್ಲ ನಾಯಕರೇ ಎನ್ನಬೇಕು. ಹಿಂದೆ ಮುಂದೆ ನಡೆಯುವ ಕುದುರೆ ಸವಾರರು, ಅಧಿಕಾರಲಾಂಛನಗಳನ್ನು ಹಿಡಿದವರು, ಛತ್ರಚಾಮರ ಧಾರಿಗಳು, ಬೀದಿಯುದ್ದಕ್ಕೂ ಜನವನ್ನು ಸರಿಸಿ, ಆತನ ವಾಹನಕ್ಕೆ ದಾರಿ ಮಾಡಿಕೊಡುವ ಬೆಳ್ಳಿಯ ಕೋಲಿನವರು, ಬಿರುದೋದುವ ಭಟರು, ಇವರ ನಡುವೆ, ಪಂಚಕಳಶ ಥಳಥಳಿಸುವ, ಚಿನ್ನದಲ್ಲಿಯೇ ಮಾಡಿದಂತೆ ಮಿರುಗುವ ಮೇನಾದಲ್ಲಿ ಕುಳಿತು ಬಂದು ಮುದ್ದಣ್ಣ ಮಠದ ಮುಂದಿಳಿದ.

ಮುದ್ದಣ್ಣ ಮೇನೆಯಿಂದಿಳಿಯುತ್ತಿದ್ದ ಹಾಗೇ ಅವನ ಕಡೆಯ ನಾಲ್ಕು ಜನ ಆಳುಗಳು ಮೇನೆಯಿಂದ ಮಠದ ಬಾಗಿಲಿನವರೆಗೂ ರತ್ನಗಂಬಳಿ ಹಾಸಿ ದಾರಿತೋರಿಸಿದರು.

"ನಾವು ಮಠದಲ್ಲಿ ಇರುವವರೆಗೂ ಉಳಿದವರಾರನ್ನೂ ಮಠದಲ್ಲಿ ಬಿಡಕೂಡದು"

ಎಂದು ತನ್ನ ಅಂಗರಕ್ಷಕರ ಪಡೆಯ ನಾಯಕನಿಗೆ ಅಪ್ಪಣೆಮಾಡಿ, ಮುದ್ದಣ್ಣ ಮಠವನ್ನು ಪ್ರವೇಶಿಸಿದನು. ತನ್ನನ್ನು ಇದಿರುಗೊಂಡ ಮಠದ ಪಾರುಪತ್ತೆಗಾರರಿಗೆ—

"ಗುರುಗಳಿಗೆ ನಾವು ಬಂದಿರುವ ವಿಷಯವನ್ನು ತಿಳಿಸಿ"

—ಎಂದ, ಗುರುಗಳೇ ಬಂದು ತನ್ನನ್ನು ಎದುರುಗೊಳ್ಳಬೇಕಾಗಿತ್ತು ಎಂಬ ಅಸಮಾಧಾನವನ್ನು ಧ್ವನಿಯಲ್ಲಿ ಸೂಚಿಸುತ್ತಾ.

"ತಾವು ಬರುವ ಸುದ್ದಿಯನ್ನು ಕೊಂಚ ಮೊದಲೇ ತಿಳಿಸಿದ್ದರೆ ಚೆನ್ನಾಗಿತ್ತು."

—ಎಂದ ಪಾರುಪತ್ತೆಗಾರ ಮುದ್ದಣ್ಣನಿದಿರು ಮಾತನಾಡಲೂ ಹೆದರುತ್ತ.

"ಏಕೆ?"

"ಗುರುಗಳು ವಿಶ್ರಾಂತಿ ಪಡೆಯುತ್ತಿದ್ದಾರೆ........"

"ಅವಸರದ ಕಾರ್ಯದ ಮೇಲೆ ಪ್ರಧಾನಿಗಳು ಬಂದಿದ್ದಾರೆ ಎಂದು ಹೇಳಿ."

"ತಾವು ದಯವಿಟ್ಟು ಕುಳ್ಳಿರಬೇಕು. ಗುರುಗಳಿಗೆ ಸುದ್ದಿ ಹೇಳಿ, ಅವರ ಉತ್ತರ ತಿಳಿದುಕೊಂಡು ಬಂದು ತಿಳಿಸುತ್ತೇನೆ."

"ಅವರ ಉತ್ತರ, ಪ್ರತ್ಯುತ್ತರಗಳನ್ನು ಕೇಳುತ್ತಾ ಕುಳಿತುಕೊಳ್ಳು ವಷ್ಟು ವೇಳೆ ನಮಗಿಲ್ಲ. ಬೇಗ ಹೋಗಿ."

—ಎಂದು ತಾನೇ ಮಠಕ್ಕೂ, ಗುರುಗಳಿಗೂ ಸರ್ವಾಧಿಕಾರಿ ಎಂಬ ಧ್ವನಿಯಲ್ಲಿ ಅಪ್ಪಣೆಮಾಡಿದ ಮುದ್ದಣ್ಣ.

"ಚಿತ್ತ. ತಮ್ಮ ಅಪ್ಪಣೆ ಮನವಿಮಾಡಿಕೊಳ್ಳುತ್ತೇನೆ."

—ಎಂದು ಹೇಳಿ ಪಾರುಪತ್ತೇಗಾರ, ಸ್ವಾಮಿಗಳ ವಿಶ್ರಾಂತಿಗೃಹ ವನ್ನು ಹೊಕ್ಕು ಅವರಿಗೆ ಮುದ್ದಣ್ಣ ಬಂದಿರುವ ವಿಚಾರವನ್ನು ತಿಳಿಸಿದ. ಕೊಂಚ ಹೊತ್ತಿನಲ್ಲೇ ಸ್ವಾಮಿಗಳು ಹೊರಬಂದರು. ಹೊರಗೆ ಬಂದ ಮುದ್ದಣ್ಣ, ಬೇಟೆಯ ಮಿಗವನ್ನು ದುರುಗುಟ್ಟಿ ನೋಡುವ ಹುಲಿಗಣ್ಣು ಗಳಿಂದ ದುರುದುರು ನೋಡಿದ. ಆ ನೋಟದ ರೀತಿ 'ನನಗೆ ಶಕ್ತಿ ಇದ್ದಿದ್ದರೆ ನಿನ್ನನ್ನು ಇಲ್ಲೇ ಸುಟ್ಟುಬೂದಿ ಮಾಡುತ್ತಿದ್ದೆ' ಎನ್ನುವ ಹಾಗಿತ್ತು. ಸ್ವಾಮಿಗಳೂ ಆ ನೋಟದ ರೀತಿಯನ್ನು ಗುರುತಿಸಿದರೂ ಯಾವವಿಚಾರವೂ ಕಾಣದ ನಸುಮೊಗದಿಂದ ಮುದ್ದಣ್ಣನತ್ತನೋಡುತ್ತಾ-

"ಪ್ರಧಾನಿಗಳು ಕುಳಿತುಕೊಳ್ಳಬೇಕು. ನಿಂತೇ ಇದೀರಲ್ಲಾ?" ಎಂದರು.

"ಕುಳಿತು ಮಾತನಾಡುವಷ್ಟು ವೇಳೆಯೂ ನಮಗಿಲ್ಲ. ಎರಡು ಮಾತು ಹೇಳಿ ಹೋಗುವುದಿತ್ತು. ಅದಕ್ಕಾಗಿ ಬಂದೆ."

"ಕುಳಿತು ಮಾತನಾಡುವಷ್ಟು ವೇಳೆಯೂ ಇಲ್ಲದಷ್ಟು ಅವಸರದ ಕೆಲಸವೇ? ಆಯಿತು—ಅದೇನು ಹೇಳಿ."

"ಹಿಂದೊಮ್ಮೆ ನಾವು ಬಂದಿದ್ದಾಗ ಹೇಳಿದ ಒಂದು ಮಾತು ಗುರುಗಳಿಗೆ ನೆನಪಿರಬೇಕು......."

—ಎಂದು ಮಾತನ್ನು ಅರ್ಧಕ್ಕೇ ನಿಲ್ಲಿಸಿ, ಅರ್ಥಪೂರ್ಣವಾದ ದೃಷ್ಟಿಯಿಂದ ಅವರ ಮುಖವನ್ನು ನೋಡಿದ ಮುದ್ದಣ್ಣ.

"ಏನೋ ನಮಗಷ್ಟು ನೆನಪಿಲ್ಲ. ತಾವೇ ನೆನಪಿಸಿದರೆ ಒಳಿತು."

"ನಿಜ. ನಾನಾಡಿದ ಮಾತು ನಿಮಗೆ ನೆನಪಿರಲಿಕ್ಕಿಲ್ಲವೆಂದೇ ನಮಗೂ ತೋರಿತು. ಇಲ್ಲವಾಗಿದ್ದರೆ ಹೀಗಾಗಲು ತಾವು ಬಿಡುತ್ತಿರಲಿಲ್ಲ."

"ಏನು ಮಾತೋ-ಈಗ ಆಗಬಾರದುದು ಏನಾಯಿತೋ ಹೇಳಿ?"

—ಮುದ್ದಣ್ಣ ಉದ್ಧಟತನದಿಂದ ಆಡಿದ ಮಾತಿನಿಂದಲೂ ವಿಚಲಿತ ರಾಗದೆ, ಶಾಂತಸ್ವರದಲ್ಲಿ ಹೇಳಿದರು ಗುರುಗಳು.

"ಹಿಂದೆ ಬಂದಾಗ ತಮಗೆ ರಾಜಕಾರ್ಯದ ಸರಸ ಅಗತ್ಯವಿಲ್ಲ, ಎಲ್ಲರ ಕ್ಷೇಮಚಿಂತನೆ ಮಾಡಿಕೊಂಡು ಶಿವಪೂಜೆ, ಧ್ಯಾನದಲ್ಲಿ ನಿರತ ರಾಗಿರುವುದು ಮೇಲು ಎಂದು ಹೇಳಿದ್ದೆ......."

"ನಿಜ."

"ಈಗಲೂ ಮತ್ತೆ ಆ ಮಾತನ್ನು ನೆನಪಿಸಬೇಕೆಂದೇ ಬಂದದ್ದು. ತಾವು ದುರ್ಗದ ರಾಜಕಾರಣದಲ್ಲಿ ಪ್ರವೇಶಿಸಬಾರದು."

"ನಾನೀಗ ರಾಜಕಾರಣದಲ್ಲಿ ಪ್ರವೇಶಿಸಿದ್ದೇನೆಯೆ?"

"ಅಹುದು. ನೀವು ನಿಮ್ಮ ಸ್ಥಾನವನ್ನು ಅತಿಕ್ರಮಿಸಿ ವರ್ತಿಸುತ್ತಿದ್ದೀರಿ ಎಂದು ನಮಗೆ ಸುದ್ದಿ ಬಂದಿದೆ."

"ಹಾಗೇ."

"ಅಹುದು ಹಾಗೇ. ನಿಮ್ಮ ಹಾರಿಕೆಯ ಮಾತಾಗಲಿ, ಸನ್ಯಾಸಿಯ ಉಡುಪಾಗಲಿ ನಮ್ಮನ್ನು ಮೋಸಗೊಳಿಸುವುದಿಲ್ಲ. ತಮಗೆ ದುರ್ಗದಲ್ಲಿರ ಬೇಕೆಂಬ ಇಚ್ಛೆ ಇದ್ದರೆ, ಇನ್ನು ಈ ಬಗೆಯ ವರ್ತನೆಯನ್ನು ಬಿಟ್ಟು, ನಿಮ್ಮ ಕೆಲಸ ಯಾವುದೋ ಅದನ್ನು ಮಾಡಿಕೊಂಡಿರಿ. ಇನ್ನು ಮರೆತರೆ ಒಳಿತಾಗದು."

"ಪ್ರಧಾನಿಗಳು ಏಕೋ ಕೆರಳಿಯೇ ಬಂದಿರುವಂತಿದೆ. ಸಮಾಧಾನವಾಗಿ ಕುಳಿತುಕೊಂಡು ಹೇಳಬೇಕು."

"ಇಷ್ಟು ದಿನ ಆ ಸಮಾಧಾನವಿತ್ತು. ಇನ್ನು ಇಲ್ಲ."

"ಏಕೆ? ತಾವೇ ತಾಳ್ಮೆ ತಪ್ಪಿದರೆ ಆದೀತೇ? ಏನಾಯಿತು ಹೇಳಿ."

"ಆಗುವುದೇನು—ಮಠ, ರಾಜದ್ರೋಹಿಗಳ ಹಾವಿನ ಹೇಳಿಗೆಯಾಗಿದೆ. ಕಾಷಾಯವಸ್ತ್ರ ಧರಿಸಿದ ನೀವೂ ಪಿತೂರಿಗಾರರ ಗುಂಪಿನಲ್ಲಿ ಸೇರಿ ವರ್ತಿಸುತ್ತಿದ್ದೀರಿ. ರಾಜದ್ರೋಹದ ಪರಿಣಾಮವೇನು ಗೊತ್ತೇ?"

—ಅಬ್ಬರಿಸಿ ಕೇಳಿದ ಮುದ್ದಣ್ಣ. ಗುರುಗಳ ಅಚಲ ಸ್ಥೈರಣೆ, ಗಳಿಗೆ ಗಳಿಗೆಗೂ ಅವನಲ್ಲಿ ಕ್ರೋಧಕ್ಕೆ ಕಳ್ಳುಕುಡಿಸುತ್ತಿತ್ತು.

"ಏನು?"

"ತಲೆದಂಡ?"

"ಇದೇನು ಬೆದರಿಕೆಯೇ ಪ್ರಧಾನಿಗಳೇ?"

"ಅಲ್ಲ. ಬೆದರಿಸುವಷ್ಟು ದೂರ ನಾವು ಹೋಗಬೇಕಾಗಿಲ್ಲ. ನಿಮ್ಮ ಕ್ಷೇಮ ದೃಷ್ಟಿಯಿಂದಲೇ ಈ ಎಚ್ಚರಿಕೆಯ ಮಾತು ಹೇಳುತ್ತಿದ್ದೇವೆ. ತಾವೂ ಅರಿತು ನಡೆದರೆ ಕ್ಷೇಮ."

"ಹೋಗಲಿ—ನಾವೇನು ಮಾಡಬೇಕು ಹೇಳಿ?"

"ಇನ್ನು ಮೇಲೆ ರಾಜದ್ರೋಹಿಗಳಿಗೆ, ಸಂಚುಕೋರರಿಗೆ ಈ ಮಠದಲ್ಲಿ ಪ್ರವೇಶವಿರಕೂಡದು."

—'ಇದು ನನ್ನ ಕಟ್ಟಪ್ಪಣೆ' ಎಂಬ ಧ್ವನಿಯಲ್ಲಿ ಹೇಳಿದ ಮುದ್ದಣ್ಣ.

"ತಾವು ಸಮಾಧಾನವಾಗಿ ಕೇಳುವುದಿದ್ದರೆ ಒಂದು ಮಾತು ಹೇಳಬಹುದು."

"ಅದೇನು ಹೇಳಿ."

"ತಾವೇ ಹೇಳಿದಿರಿ—ಇದು ಮಠ."

"ಅಹುದು. ಅದು ನಮಗೂ ಗೊತ್ತಿದೆ. ಅದು ಮಠವಾಗಿರಬೇಕೆಂದೇ ನಾವು ಹೇಳಿದ್ದು?"

"ಅಪ್ಪಣೆ ಮಾಡುವ ಅವಸರದಲ್ಲಿ ಪ್ರಧಾನಿಗಳು ಮುಖ್ಯವಾದ ಮಾತನ್ನೇ ಮರೆಯುತ್ತಿದ್ದೀರಿ."

"ಏನು ಮಾತು?"

"ಈ ಮಠ ನಮ್ಮದು, ನಮ್ಮ ಆಸ್ತಿ, ಇಲ್ಲಿ ನಾವು ಬೇಕಾದ ಹಾಗೆ ನಡೆಮಕೊಳ್ಳಬಹುದು ಎಂಬ ರೀತಿಯಲ್ಲಿ ತಾವು ಹೇಳುತ್ತಿರುವುದಾಗಿದೆ."

"ಅಲ್ಲವೇ?"

"ಅಲ್ಲ ಈ ಮಠ ನಮ್ಮದಲ್ಲ, ನಮ್ಮ ಆಸ್ತಿಯಲ್ಲ, ಹತ್ತು ಜನಗಳು ಸೇರಿ ಶಿವನಿಗೊಪ್ಪಿಸಿದ ಆಸ್ತಿ. ಆತನ ಊಳಿಗದವರಂತೆ ನಾವು ಇದ್ದೇವೆ. ನಾವೇ ಇದರ ಒಡೆಯರಲ್ಲ. ನಾವೂ ನೀವಿದ್ದಂತೆಯೇ ಪ್ರಧಾನಿಗಳೇ."

"ಅಂದರೆ........"

"ಹತ್ತು ಜನರ ಬಲದಿಂದ ತಮ್ಮದಾದ ರಾಜ್ಯದ ಯೋಗಕ್ಷೇಮವನ್ನು ವಿಚಾರಿಸಲು ನಾಯಕರು ತಮ್ಮನ್ನಿಟ್ಟಿದ್ದಾರೆ. ಹಾಗಿರುವಾಗ ತಾವೇ ನಾಯಕರಂತೆ ನಡೆದರೆ ಆದೀತೇ? ಜನ ಅದನ್ನು ಒಪ್ಪಿಯಾರೇ? ಪ್ರಭು ಮುನಿಯುವುದಿಲ್ಲವೇ? ನಿಮ್ಮ ಪ್ರಭುವಿನ ಹಾಗೇ ನಮ್ಮ ಪ್ರಭುವೂ, ಶಿವನ ಮನೆಗೆ ಶಿವಭಭಕ್ತರನ್ನೇ ಬರಲು ಬೇಡ ಎಂದರೆ ಆದೀತೇ? ನಿಮಗೆ ನಿಮ್ಮ ಪ್ರಭುವಿನ ಹೆದರಿಕೆ ಇರುವಂತೆ, ನಮಗೂ ನಮ್ಮ ಪ್ರಭುವಿನ ಹೆದರಿಕೆ ಇದೆ ಪ್ರಧಾನಿಗಳೇ."

—ಗೂಢವಾದ ಸಮಸ್ಯೆಯೊಂದನ್ನು ಹಸುಮಗುವಿಗೆ ವಿವರಿಸುವ ಅನಂತ ತಾಳ್ಮೆಯ ಧ್ವನಿಯಲ್ಲಿ ಹೇಳಿದರು ಗುರುಗಳು. ಅವರು ಆಡಿದ ಒಂದೊಂದು ಮಾತೂ ವಿಷಬಾಣದಂತೆ ಮುದ್ದಣ್ಣನ ಎದೆಯನ್ನಿರಿದು, ಅವನನ್ನು ಕೆರಳಿಸಿದವು. ಸಿಡಿಲಾಗಿ ಸಿಡಿವೆನೆನ್ನುವ ಕ್ರೋಧವನ್ನು ತಡೆ ಹಿಡಿಯುತ್ತಾ, ಆದರೆ ತಾನು ಕೆರಳಿದ್ದೇನೆ ಎಂಬುದು ಅವರಿಗೆ ಮನವರಿಕೆಯಾಗುವ ಧ್ವನಿಯಲ್ಲಿ ಹೇಳಿದ ಮುದ್ದಣ್ಣ—

"ನಿಮ್ಮ ಉಪದೇಶ ಕೇಳಲು ನಾವು ಬಂದಿಲ್ಲ. ಇರುವ ಮಾತನ್ನು ಹೇಳಬೇಕೆಂದು ಬಂದೆವು. ಹೇಳಿಯಾಯಿತು."

"ನಮಗೂ ಉಪದೇಶ ಮಾಡಬೇಕೆಂಬ ಚಪಲವಿಲ್ಲ. ನಾವೂ ಏನು ಹೇಳಬೇಕಾಗಿತ್ತೋ ಅದನ್ನು ಹೇಳಿಯಾಯಿತು."

"ಅಂದರೆ—"

—ತಾಳ್ಮೆ ಸೋತು ಅಬ್ಬರಿಸಿದ ಮುದ್ದಣ್ಣ.

"ಮುಂದಿನದು ತಮ್ಮ ಚಿತ್ತ"

—ಶಾಂತ ಸ್ವರದಲ್ಲಿ ಗುರುಗಳು ಉತ್ತರ ಕೊಟ್ಟರು.

"ಅಂದರೆ—ನೀವು ಈ ರಾಜಕಾರಣದ ಸರಸವನ್ನು ಬಿಡುವುದಿಲ್ಲ, ಸಂಚುಗಾರರು ಇಲ್ಲಿಗೆ ಬರುವುದನ್ನು ತಪ್ಪಿಸುವುದಿಲ್ಲ ಎಂದೇ ನಿಮ್ಮ ಉತ್ತರವೋ ?"

"ಹಾಗೆಂದು ನಾವು ಹೇಳಲಿಲ್ಲ. ಇಲ್ಲಿಗೆ ಬರುವ ಯಾರನ್ನೂ ಬೇಡಿ ಎಂದು ಹೇಳುವ ಅಧಿಕಾರ ನಮಗಿಲ್ಲ. ಈಗ ನಿಮಗೆ ಇಲ್ಲಿಗೆ ಬರಬೇಕು ಎನಿಸಿತು, ಬಂದಿರಿ. ಬೇಡವೆಂದೆವೇ? ಹೀಗೆ ಯಾರು ಬೇಕಾದರೂ ಬರಬಹುದು. ಇದು ಶಿವನ ಮನೆ. ಇಲ್ಲಿ ನಡೆಯುವುದು ಶಿವನ ಚಿತ್ತ"

"ಹಾಗೆಂದು ತಲೆ ಹೋಗುವಾಗ ಶಿವ ಕಾಯುವುದಿಲ್ಲ."

"ಶಿವ ಕಾಯಲಾಗದ ತಲೆಯನ್ನು ನೀವು ಕಾಯುವುದು ಸಾಧ್ಯವೇ, ಪ್ರಧಾನಿಗಳೇ. ಇಷ್ಟು ದಿನ ನಿಮಗೂ ಒಂದು ಮಾತು ಹೇಳಬೇಕು ಎಂದು ನಮಗೂ ಅನಿಸಿತ್ತು. ಇಂದು ಸಂದರ್ಭ ಬಂದಿದೆ. ಹೇಳಿಬಿಡುತ್ತೇನೆ, ಕೇಳಿ."

"ಏನದು ?"

"ಈಗ ಹೇಳಿದಿರಿ. ಶಿವ ನಿಮ್ಮ ತಲೆಯನ್ನು ಕಾಯುತ್ತಾನೆಯೋ ಎಂತ. ನಿಮಗೆ ಶಿವನೆಂದರೂ ಸರಸವಾದಂತಿದೆ. ಮನುಷ್ಯನನ್ನು ಕೆಣಕಿ ಮನುಷ್ಯ ಬದುಕಬಹುದು. ಆದರೆ ಶಿವನನ್ನು ಕೆಣಕಿದವ ಬದುಕಲಾರ. ನಮಗೆ ಹೀಗೆ ಮಾಡಬೇಕು, ಹೀಗೆ ಮಾಡಬಾರದು ಎಂದು ಅಪ್ಪಣೆ ಮಾಡಿದಿರಿ. ನಾವು ಎಷ್ಟೆಂದರೂ ಬಡಬೈರಾಗಿಗಳು. ನಮ್ಮಲ್ಲಿ ಏನಾದರೂ ತಡೆಯುತ್ತದೆ. ನಮಗೆ ರಾಜಕಾರಣದ ಸರಸಬೇಡವೆಂದಿರಿ. ಹಾಗೇ ನಾವೂ.ಶಿವನ ಕ್ರೋಧವನ್ನು ಕೆರಳಿಸುವ ಸಿಡಿಲೊಡನೆ ಸರಸ ವಾಡುವ ಚಪಲವನ್ನು ಬಿಡಿ."

—ಅಪರಾಧಿಗೆ ಮರಣದಂಡನೆಯನ್ನು ವಿಧಿಸಲೇಬೇಕಾಗಿ ಬಂದ ನ್ಯಾಯಾಧೀಶನ ರೀತಿಯಲ್ಲಿ ಹೇಳಿದರು ಗುರುಗಳು. ಆ ಮಾತನ್ನು ಕೇಳಿ ಮುದ್ದಣ್ಣ ಹೆಡೆತುಳಿದ ಹಾವಿನಂತೆ ಸೆಡೆದು ನಿಂತು, ಉಕ್ಕಿಬಂದ

ಕ್ರೋಧದಲ್ಲಿ ಬುಸುಗರೆಯುತ್ತ ಹೇಳಿದ—

"ನಮಗೇ ಎಚ್ಚರಿಗೆ ಹೇಳುವಷ್ಟು ಬಲ ತಮಗೆ ಬಂದಿರಬಹುದೆಂದು ನಾವು ತಿಳಿದಿರಲಿಲ್ಲ. ಚಿಕ್ಕಣ್ಣನಾಯಕರು ತಮ್ಮನ್ನು ರಾಜಗುರುಪೀಠದಿಂದ ಕೆಳಗಿಳಿಸಿದಾಗಲೇ, ದುರ್ಗವನ್ನು ಬಿಟ್ಟು ಓಡಿಸದಿದ್ದುದು ನಮ್ಮ ತಪ್ಪಾಯಿತು. ಅಂಥ ಅಜಾಗರೂಕತೆಯ ತಪ್ಪು ಇನ್ನು ನಮ್ಮಿಂದ ಆಗುವುದಿಲ್ಲ. ಮಠಕ್ಕೆ ಯಾರೂ ಬರುವುದನ್ನು ತಡೆಯಲಾಗುವುದಿಲ್ಲ ಎಂತಲ್ಲವೇ ನಿಮ್ಮ ಮಾತು..."

"ನಿಜ."

"ಇನ್ನು ಮೇಲೆ ನಮ್ಮ ಅಪ್ಪಣೆ ಪಡೆಯದೆ ನೀವು ಯಾರನು ನೋಡುವುದು ಸಾಧ್ಯವಿಲ್ಲ."

"ಅಂದರೆ—"

"ಹಾಗಾದರೆ ನಾವು ನಿಮ್ಮ ಸೆರೆಯಾಳುಗಳು ಎನ್ನಿ."

"ಅಹುದು. ನಾವು ಇಷ್ಟು ದೂರ ಹೋಗುವ ಪರಿಸ್ಥಿತಿ ಬರುವುದೆಂದಿರಲಿಲ್ಲ; ರಾಜಕೀಯದ ಸರಸ ನಿಮಗೆ ಬೇಡವೆಂದರೆ ಆ ಮಾತು ನಿಮಗೆ ಪಥ್ಯವಾಗಲಿಲ್ಲ. ಈಗಲೂ ತಮ್ಮನ್ನು ಶೂಲಕ್ಕೇರಿಸಿ, ಮಠದ ಕಲ್ಲೊಂದೂ ಉಳಿಯದಂತೆ ನೆಲಸಮ ಮಾಡಿಸಬಲ್ಲೆವು."

"ಹಾಗೂ ಮಾಡಬಹುದು."

"ಆದರೆ ಸದ್ಯಕ್ಕೆ ಅದು ಅಗತ್ಯವಿಲ್ಲ. ಅಗತ್ಯಪೊವಗಿದರೆ ಅದಕ್ಕೂ ನಾವು ಹಿಂಜರಿಯುವುದಿಲ್ಲ ಎಂಬುದು ಮಾತ್ರ ನಿಮ್ಮ ನೆನಪಿನಲ್ಲಿದ್ದರೆ ಸಾಕು. ಇನ್ನು ನಮ್ಮ ಅಪ್ಪಣೆ ಇಲ್ಲದೆ ತಾವು ಯಾರನ್ನೂ ಕಾಣಕೂಡದು. ನಮ್ಮ ಅಪ್ಪಣೆಯಿಲ್ಲದೆ ಯಾರನ್ನೂ ಮಠಕ್ಕೆ ಬಿಡಕೂಡದು. ಇದು ನಮ್ಮ ಆಜ್ಞೆ. ನಿಮ್ಮ ಶಿವನ ಆಜ್ಞೆ ಕೈಲಾಸದಲ್ಲಿ ನಡೆದೀತು—ದುರ್ಗದಲ್ಲಿ ನಡೆಯುವುದು ನಮ್ಮ ಆಜ್ಞೆ."

"ತಮ್ಮ ಸಂತೋಷ. ಇದು ನಮ್ಮ ಆಜ್ಞೆ ಎಂದಿರಿ. ಇದು ನಿಮ್ಮದೋ, ದುರ್ಗದೊಡೆಯರಾದ ನಾಯಕರದೋ?"

"ಆ ಚಿಂತೆ ಇಂದಿನಿಂದ ತಮಗೆ ಬೇಕಾಗಿಲ್ಲ."

—ಎಂದು ಕಟುವಾಗಿ ನುಡಿದು, ಮರುಗಳಿಗೆಯೇ ಮರ್ಮಭೇದಕವಾದ ವ್ಯಂಗ್ಯದ ಧ್ವನಿಯಲ್ಲಿ—

"ತಾವಿನ್ನು ನಿಶ್ಚಿಂತರಾಗಿ ವಿಶ್ರಾಂತಿ ತೆಗೆದುಕೊಳ್ಳಬಹುದು; ಶಿವ ಚಿಂತೆ ಮಾಡಬಹುದು. ನಾವಿನ್ನು ಹೋಗಲಪ್ಪಣೆಯೇ?"

—ಎಂದ ಮುದ್ದಣ್ಣ ಮದೋನ್ಮತ್ತ ಉದ್ಧಟತನದ ನಗು ಹೊಳೆದ ಗಣ್ಣುಗಳಿಂದ ಗುರುಗಳ ಮೊಗವನ್ನು ನೋಡುತ್ತಾ.

"ಹೋಗಿ ಬನ್ನಿ. ಶಿವ ನಿಮಗೆ ಒಳಿತುಮಾಡಲಿ"

—ಎಂದರು ಗುರುಗಳು ಕೊಂಚವೂ ಉದ್ರೇಕಿತವಾಗದ ಶಾಂತ ಧ್ವನಿಯಲ್ಲಿ.

ಗುರುಗಳಿಗೆ ವಂದನೆಯನ್ನು ಮಾಡದೆ, ಅಲ್ಲಿಂದ ನಡೆದು ಮಠದ ಹೊರಬಂದು ತನ್ನಲ್ಲಿದ್ದ ಸೈನಿಕರಿಗೆ "ಮಠದ ಸುತ್ತಲೂ ಹಗಲಿರುಳೂ ಕಾವಲಿರಬೇಕು. ನಮ್ಮ ಅಪ್ಪಣೆಯ ಚೀಟಿ ತರದ ಯಾರನ್ನೂ ಮಠದೊಳಕ್ಕೆ ಬಿಡಕೂಡದು. ಯಾರೂ ಮಠದಿಂದ ಹೊರಗೆ ಹೋಗಕೂಡದು. ಕಾವಲಿಗೆ ಬೇರೆ ಸೇನೆಯನ್ನು ಕಳುಹಿಸುವವರೆಗೂ ನೀವು ಕಾವಲಿರಬೇಕು. ನಮ್ಮ ಅಪ್ಪಣೆ ಮೀರಿ ಮಠದೊಳಗೆ ಒಂದು ಹುಳ ನುಸಿದರೂ, ನಿಮ್ಮೆಲ್ಲರನ್ನೂ ಸಾಲುಮರಕ್ಕೆ ನೇತುಹಾಕಿಸುತ್ತೇನೆ. ತಿಳಿದಿರಲಿ."

—ಎಂದು ಅಪ್ಪಣೆಮಾಡಿ ಮೇನೆಯೊಳಗೆ ಕುಳಿತ ಮುದ್ದಣ್ಣ. ಕೂಡಲೇ ಆವನೊಂದಿಗೆ ಬಂದಿದ್ದ ಸೇನೆಯವರು, ಮಠದ ಮಹಾದ್ವಾರ ದಲ್ಲಿ ಮಠದ ಆಳುಗಳನ್ನು ಒಳಗೆ ದಬ್ಬಿ, ಮಹಾದ್ವಾರವನ್ನು ಮುಚ್ಚಿ, ಕತ್ತಿ ಹಿಡಿದು ಕಾವಲು ನಿಂತರು. ಮೂಲೆ ಮೂಲೆಯಲ್ಲೂ ಒಬ್ಬ ಕೋವಿ ಯಾಳು ಕಾವಲು ನಿಂತ.

ಪ್ರಧಾನಿಯ ಹಿಂದೆಯೇ ಬಂದು, ಆತ ಮಾಡಿದ ಕರ್ಣಕಠೋರ ವಾದ ಸುಗ್ರಿವಾಜ್ಞೆಯನ್ನು ಕೇಳಿದ ಪಾರುಪತ್ತೇಕಾರ, ಭಯದಿಂದ ನಡು ಗುತ್ತಾ ಒಳಗೆ ಹೋಗಿ ನಡೆದುದನ್ನು ಗುರುಗಳಿಗೆ ತಿಳಿಸಿದ.

"ಮುಂದೇನು ಗತಿ, ಬುದ್ಧಿ?"

—ಎಂದ ಭಯದಿಂದ ಕಂಗಾಲಾಗಿ ಒಣಗಿದ ಸ್ವರದಲ್ಲಿ.

"ಏನು ಗತಿ ಶಿವಣ್ಣಾ? ಪ್ರಧಾನಿಗಳ ಆಜ್ಞೆಯನ್ನು ಕೇಳಿ ಹೆದರಿದೆಯಾ?"

"ಅವನು ಮನುಷ್ಯನಲ್ಲ, ಪಿಶಾಚಿ ಬುದ್ಧಿ."

"ಇರಬಹುದು, ಮನುಷ್ಯತ್ವವನ್ನು ಬಿಟ್ಟು ಪಿಶಾಚಿಯಾದದ್ದಕ್ಕೆ ಆತ ಹೆದರಬೇಕೇ ಹೊರತು, ಭೂತನಾಥನ ಭಕ್ತರಾದ ನಾವು ಹೆದರುವುದೇ? ನೋಡು—ನೀನಾಗಲಿ, ಮಠದಲ್ಲಿರುವ ಬೇರೆ ಯಾರಿಗೇ ಆಗಲಿ, ಇಲ್ಲಿರಲು ಭಯವಾಗುವುದಾದರೆ ಹೇಳಿ. ನೀವು ನಿರಾತಂಕವಾಗಿ ಹೋಗಲು ಪ್ರಧಾನಿಗಳ ಅಪ್ಪಣೆ ಕೊಡಿಸುತ್ತೇನೆ."

"ನೀವು ಬುದ್ಧಿ ?"

"ನಾವೇ? ಶಿವನಿಚ್ಛೆ ಇರುವವರೆಗೂ ಇಲ್ಲೇ. ಹೋಗು ಶಿವಣ್ಣ—ಮಜ್ಜನಕ್ಕೆ ನೀರಿವೆಯೋನೋ ನೋಡು. ಮೈಲಿಗೆಯಾಯಿತು."

"ನಿಮಗೆ ಮೈಲಿಗೆಯಾಯಿತೇ? ನಿಮ್ಮ ಮೈಯನ್ನು ಆ ಪಾಪಿ ಮುಟ್ಟಿದನೇ?"

—ಅಚ್ಚರಿಯಿಂದ ಕೇಳಿದ ಶಿವಣ್ಣ.

"ಊ ಹೂ. ಆತ ಮುಟ್ಟಲಿಲ್ಲ. ಆತನ ಮಾತು ಕೇಳುವಾಗ ಒಂದು ಗಳಿಗೆ ಕ್ರೋಧದ ಹೊಲೆ ನಮ್ಮ ಮನಸ್ಸನ್ನು ಸೋಕಿತು. ಮಜ್ಜನ ಮಾಡಿ, ಶಿವಧ್ಯಾನಮಾಡಿ, ಆ ಮೈಲಿಗೆ ತೀರಿಸಿಕೊಳ್ಳುತ್ತೇನೆ."

—ಎಂದರು ಗುರುಗಳು.

ಅವರ ಮಾತನ್ನು ಕೇಳಿ ಶಿವಣ್ಣ ಬೊಕ್ಕಸಬೆರಗಾಗಿ, ಬಿಟ್ಟ ಕಣ್ಣು ಬಿಟ್ಟಹಾಗೆಯೇ ಒಂದು ಗಳಿಗೆ ಅವರ ಮುಖವನ್ನು ಕಣ್ಣೆದುರೇ ನಡೆದ ಪವಾಡವನ್ನು ನೋಡುವವನಂತೆ ನೋಡಿ—

"ಬುದ್ಧಿ, ತಾವು ಈ ಲೋಕದ ಮನುಷ್ಯರಲ್ಲ, ಶಿವನ ಅವತಾರ."

ಎಂದ ಉದ್ವೇಗದಿಂದ ನೆಲದ ಮೇಲೆ ಮೈಚಾಚಿ, ಅವರಿಗೆ ಅಡ್ಡಬಿದ್ದು.

೯

"ಈ ಸುದ್ದಿ ಕೇಳಿದಿರಾ ಪರಶುರಾಮಪ್ಪನವರೇ. ಪ್ರಧಾನಿಗೆ ಪಿತ್ತ ನೆತ್ತಿಗೆ ಏರಿಹೋಗಿದೆ."

—ಎಂದ ದಳವಾಯಿ ಭರಮಣ್ಣ ಹಲ್ಲು ಕಡಿಯುತ್ತಾ,

"ಏನು ಸುದ್ದಿ?"

—ಭರಮಣ್ಣನ ಅನಿರೀಕ್ಷಿತವಾದ ಮಾತು, ಸಿಟ್ಟಿನಿಂದ ಬಿಗಿದು

ಉರಿಯುತ್ತಿರುವ ಮುಖಮುದ್ರೆ, ಅವಸರದ ನಡೆ, ಮನಸ್ಸಿನ ಉದ್ರೇಕದಿಂದ ಏರುತ್ತಿರುವ ಉಸಿರನ್ನು ನೋಡಿ, ಆಶ್ಚರ್ಯದಿಂದ ಕೇಳಿದ ಪರಶುರಾಮಪ್ಪ.

"ಊರೆಲ್ಲಾ ಗುಜುಗುಂಪಲಾಗಿರುವ ಸುದ್ದಿ, ನಿಮ್ಮ ಕಿವಿಗಿನ್ನೂ ಬಿದ್ದೆ ಇಲ್ಲವೇ ?"

"ಇಲ್ಲ. ಏನದು ? ಈ ದಿನ ಮೈಯಲ್ಲಿ ಕೊಂಚ ಅಸ್ವಸ್ಥವಾಗಿದ್ದುದರಿಂದ ಮನೆಬಿಟ್ಟು ಹೊರಗೆ ಕಾಲೇ ಇಟ್ಟಿಲ್ಲ. ಏನಾಯಿತು ?"

"ಸ್ವಾಮಿಗಳ ಮಠಕ್ಕೆ ದಳವಾಯಿಗಳ ಸೇನೆ ಕಾವಲಾಗಿದೆ."

"ಆ—"

—ಭರಮಣ್ಣ ಹೇಳಿದ ಅನಿರೀಕ್ಷಿತ ವಾರ್ತೆಯನ್ನು ಕೇಳಿ, ಕುಳಿತಿದ್ದ ಪೀಠದಿಂದ ಎಗರಿಬಿದ್ದು ಕೇಳಿದ ಪರಶುರಾಮಪ್ಪ.

"ಅಹುದು."

"ಸ್ವಾಮಿಗಳು ಕ್ಷೇಮವಾಗಿದ್ದಾರೆಯೋ?"

—ಉಕ್ಕಿಬಂದ ಉದ್ವೇಗದಿಂದ ಕೇಳಿದ ಪರಶುರಾಮಪ್ಪ.

"ಇನ್ನೂ ಆ ಮಟ್ಟಕ್ಕೆ ಹೋಗಿಲ್ಲ ಪ್ರಧಾನಿ."

—ಕಹಿ ಕರ್ಕಶತೆಯಿಂದ ಹೇಳಿದ ಭರಮಣ್ಣ.

"ಸದ್ಯ—ಬದುಕಿದೆ."

"ಹಾಗೆಂದು ಕೈಕಟ್ಟಿಕೊಂಡು ಕುಳಿತುಬಿಡಿ ಪರಶುರಾಮಪ್ಪ, ಮೂರುಲೋಕವೂ ಉದ್ಧಾರವಾದ ಹಾಗೇ ಆಗುತ್ತದೆ. ಮೊದಲೇ ಇವನ ಬಾಲ ಕತ್ತರಿಸಿದ್ದರೆ ಚೆನ್ನಾಗಿತ್ತು. ಸ್ವಾಮಿಗಳ ಮಾತು ಕೇಳಿಕೊಂಡು ನೀವೂ ಶಾಂತಿ, ಶಾಂತಿ ಎಂದು ಜಪಿಸುತ್ತಾ ಕುಳಿತುಬಿಟ್ಟರಿ. ಅದೆಲ್ಲಾ ಉಪಯೋಗವಿಲ್ಲ. ಕಟುಕನ ಮುಂದೆ ಬಸವಪುರಾಣ ಓದಿದ ಹಾಗೆ ಎಂದು ನಾನು ಮೊದಲೇ ಹೊಡೆದುಕೊಂಡೆ. ಕೇಳಿದಿರಾ? ತಾಳ್ಮೆ ತಾಳ್ಮೆ ಎಂದು ಮಾತಿಗೊಮ್ಮೆ ಶಿವನ ಹೆಸರು ಹೇಳಿದ ಗುರುಗಳ ಕಾಲಿಗೆ ಬೇಡಿ ಹಾಕುವುದೊಂದು ಬಾಕಿ ಉಳಿಯಿತು. ನಾಯಕರು ಅರಮನೆಯಲ್ಲಿ ಸೆರೆಯಾಳು, ಮಠದಲ್ಲಿ ಸ್ವಾಮಿಗಳು ಸೆರೆಯಾಳು. ಇನ್ನೂ ನಮ್ಮ ನಿಮ್ಮ ಕೈಗೆ ಬಳೆ ತೊಡಿಸಿ, ಅರಿಶಿನ ಕುಂಕುಮದ ಬಾಗಿನ ಕೊಟ್ಟರೆ, ನಾವು ಮೀಸೆ ಹೊತ್ತು ಬದುಕಿದ್ದಕ್ಕೂ ಸಾರ್ಥಕವಾದಂತಾಯಿತು."

"ಅದೆಲ್ಲಾ ಮುಂದಿನ ಮಾತು—ಈಗ ಆದದ್ದೇನು ಹೇಳಿ ?"

"ಏನಾಯಿತು, ಏನು ಬಿಟ್ಟಿತು ಎಂತ ಯಾರಿಗೂ ತಿಳಿಯದು. ಈ ಮಧ್ಯಾಹ್ನ ಮಠಕ್ಕೆ ಪ್ರಧಾನಿಗಳ ಸವಾರಿ ಚಿತ್ತಯಿಸಿತ್ತಂತೆ. ಬರುವಾಗ, ನಮ್ಮ ಅಪ್ಪಣೆ ಇಲ್ಲದೆ ಯಾರೂ ಮಠದೊಳಕ್ಕೆ ಹೋಗಕೂಡದು, ಮಠದೊಳಗಿನಿಂದ ಯಾರೂ ಹೊರಗೆ ಬರಕೂಡದು ಎಂದು ಕಟ್ಟಪ್ಪಣೆ ಮಾಡಿ ಮಠದ ಬಾಗಿಲು ಹಾಕಿಸಿ, ಸೇನೆಯನ್ನು ಕಾವಲಿಟ್ಟು ಬಂದರಂತೆ."

"ಇದು ಬರೀ ಜನಗಳ ಮಾತೋ ? ಇದರಲ್ಲಿ ನಿಜ ಎಷ್ಟು ಭರಮಣ್ಣ."

"ಬರೀ ಜನಗಳ ಮಾತೇ ಏಕಾದೀತು ? ಈ ಮಾತು ಕೇಳಿ ನಾನೇ ಮಠದವರೆಗೂ ಹೋಗಿ, ಒಳಗೆ ಬಿಡುವುದಿಲ್ಲ ಎಂದು ಸೈನಿಕರಿಂದ ಮುಖಕ್ಕೆ ಮಂಗಳಾರತಿ ಎತ್ತಿಸಿಕೊಂಡು ಬಂದೆ."

"ಹಾಗೇ—ಗುರುಗಳನ್ನು ಕೆಣಕಿ ಪ್ರಧಾನಿಗಳು ಬಹಳ ದೊಡ್ಡ ತಪ್ಪುಮಾಡಿದರು...."

"ಹೇಗೆ?"

"ಹಾವಿನೊಂದಿಗೆ, ಈದ ಹುಲಿಯೊಂದಿಗೆ, ಸಿಡಿಲೊಂದಿಗೆ ಸರಸವಾಡಿ ಬದುಕಬಹುದು. ಭರಮಣ್ಣ, ಗುರುಪೀಠಕ್ಕೆ ಅಪಮಾನ ಮಾಡಿದವರು ಬದುಕುವುದಿಲ್ಲ. ಶಿವನನ್ನು ಕೆಣಕಿಯೂ ಬದುಕಬಹುದು; ಶಿವಭಕ್ತನನ್ನು ಕೆಣಕಿದವ ಉಳಿಯಲಾರ."

"ನಿಮ್ಮ ಶಿವನೇನು ಕತ್ತಿ ಹಿಡಿದು ನೆಲಕ್ಕೆ ಇಳಿದು ಬರುತ್ತಾನೆಯೋ ತನ್ನ ಭಕ್ತರನ್ನು ಕಾಪಾಡಲು."

"ಬರುತ್ತಾನೆ ಭರಮಣ್ಣ; ಖಂಡಿತವಾಗಿಯೂ ಬರುತ್ತಾನೆ. ಆದರೆ ಆತ ಯಾವಾಗ, ಯಾವ ರೂಪಿನಲ್ಲಿ ಬರುತ್ತಾನೆಂದು ಯಾರು ತಾನೇ ಹೇಳಲು ಸಾಧ್ಯ?"

"ಈ ವೇದಾಂತದ ಮಾತೆಲ್ಲಾ ಕೃತಯುಗಕ್ಕಾಗಿಹೋಯಿತು ಪರಶುರಾಮಪ್ಪ. ಕಲಿಯುಗದಲ್ಲಿ ಅದೆಲ್ಲಾ ನಡೆಯುವುದಿಲ್ಲ, ಈಗ ನಡೆಯುವುದೊಂದೇ ಕತ್ತಿಯ ಮಾತು."

"ಕಲ್ಕಿ ಬರುವುದೂ ಬಿಚ್ಚುಗತ್ತಿಯ ರೂಪವಾಗಿಯೇ ಭರಮಣ್ಣ."

"ಹೂ....ಹೂ....ನೀವು ಹೀಗೇ ಮಾತಾಡುತ್ತೀರಿ ಪರಶುರಾಮಪ್ಪ. ದಳವಾಯಿಯು ಬಿಚ್ಚುಗತ್ತಿಯಾಗಿ ಬರುತ್ತಾನೆ ನಿಮ್ಮ ಕಲ್ಕಿ—ನಮ್ಮ ನಿಮ್ಮ ತಲೆ ತೆಗೆದುಕೊಳ್ಳಲು. ಆ ಮಾತೆಲ್ಲಾ ಬಿಡಿ. ಇನ್ನಾದರೂ ನನ್ನ ಮಾತು ಕೇಳುತ್ತೀರೋ ಇಲ್ಲವೋ ಹೇಳಿ."

"ಏನು ಮಾಡಬೇಕು ಭರಮಣ್ಣ?"

"ಪ್ರಧಾನಿಯ ನೆತ್ತಿಗೆ ಕಾಲಿನಿಂದ ಒದೆದು ಹಲ್ಲುದುರಿಸಬೇಕು."

"ಅದು ಆಡಿದಷ್ಟು ಸುಲಭವಲ್ಲ, ಭರಮಣ್ಣ. ಅದಕ್ಕಾಗಿಯೇ ಚಿಂತಿಸುತ್ತಿದ್ದೇನೆ."

"ಏಕೆ?"

"ಇಂದು ಅಧಿಕಾರ ಅವನ ಕೈಯಲ್ಲಿದೆ. ಸೇನೆ ಅವನ ಕೈಯಲ್ಲಿದೆ. ಅವನನ್ನು ಮಟ್ಟ ಹಾಕುವುದು ಮಾತಾಡುವಷ್ಟು ಸುಲಭವಲ್ಲ."

"ಮಾತಿಗೆ ಸುಲಭವಲ್ಲದ್ದನ್ನು ಮಾಡಲೆಂದೇ ಕತ್ತಿ ಇರುವುದು."

"ಇದೆ, ಭರಮಣ್ಣ. ನಿಮ್ಮ ಬಳಿಯೂ ಕತ್ತಿ ಇದೆ, ನನ್ನ ಬಳಿಯೂ ಕತ್ತಿ ಇದೆ. ಆದರೆ ನಮ್ಮ ಒಂದು ಕತ್ತಿಗೆ ಅವನ ಬಳಿ ನೂರು ಕತ್ತಿ ಇವೆ. ಹೀಗಿರುವಾಗ ನಾವು ಕತ್ತಿ ಹಿರಿದು ವೃಥಾ ತಲೆಕೊಡಬೇಕು. ಅಷ್ಟೆ."

"ಹೋದರೆ ಹೋಗಲೇಳಿ. ಅಪಮಾನದ ಗೊಬ್ಬರ ಹೊರವುದಕ್ಕಿಂತ ಈ ತಲೆ ನೆಲಕ್ಕುರುಳಿದರೂ ಸರಿಯೆ. ಏನಿಲ್ಲವೆಂದರೂ ಕತ್ತಿ ಹಿರಿದು ಸತ್ತ ಕೀರ್ತಿಯಾದರೂ ಬರುತ್ತದೆ."

"ಕತ್ತಿ ಹಿರಿಯಲು ಅಷ್ಟು ಆತುರ ಬೇಡ ಭರಮಣ್ಣ. ಒಮ್ಮೆ ಹಿರಿದ ಕತ್ತಿಯನ್ನು ಕಾರ್ಯ ಮುಗಿಯುವವರೆಗೂ ಮತ್ತೆ ಒರೆ ಸೇರಿಸಬಾರದು. ಆದುದರಿಂದ ಅದಕ್ಕೆ ಸರಿಯಾದ ಹೊತ್ತು ಬಂದಾಗ ಕತ್ತಿಯನ್ನು ಹಿರಿಯೋಣ. ಅದಕ್ಕೆ ಮೊದಲು ಎಷ್ಟು ದೂರ ಮಾತಿನಿಂದ ಕೆಲಸ ಮಾಡಲು ಸಾಧ್ಯವಿದೆಯೋ ನೋಡೋಣ—ಅಂದಹಾಗೆ ನಾಯಕರಿಗೆ ಈ ಸುದ್ದಿ ತಿಳಿದಿದೆಯೆ?"

"ಅವರಿಗೆ ಯಾರು ಹೇಳಬೇಕು?"

"ಒಂದು ದೃಷ್ಟಿಯಲ್ಲಿ ನೋಡಿದರೆ ಅವರಿಗೆ ಈ ಸುದ್ದಿಯನ್ನು

ಸದ್ಯಕ್ಕೆ ಯಾರೂ ಹೇಳದಿರುವುದೇ ಮೇಲೆಂದು ತೋರುತ್ತದೆ."

"ಏಕೆ?"

"ನಿನ್ನ ಹಾಗೆಯೇ ನಾಯಕರೂ ಉದ್ರೇಕಗೊಳ್ಳಬಹುದು. ಆದರೆ ಈಗ ಉದ್ರೇಕದಿಂದ ಉಪಯೋಗವಿಲ್ಲ ಭರಮಣ್ಣ."

"ಹಾಗಾದರೆ, ಆದದ್ದೆಲ್ಲಾ ಆಗಿಹೋಗಲಿ ಎಂದು ಬೆಲ್ಲಬಡಿದ ಕಲ್ಲಿನ ಹಾಗಿರುವುದೇ ಒಳ್ಳೆಯದೇ. ದಳವಾಯಿ ತನ್ನ ಕೆಟ್ಟತನದಿಂದ ನಮ್ಮನ್ನು ಕೆರಳಿಸುವಷ್ಟೇ, ನೀವು ನಿಮ್ಮ ಒಳ್ಳೆಯತನದಿಂದ ಕೆರಳಿಸುತ್ತೀರಿ. ನಾನೊಂದು ಖಂಡಿತವಾದ ಮಾತು ಹೇಳುತ್ತೇನೆ ಪರಶುರಾಮಪ್ಪನವರೇ—"

"ಅದೇನು ಹೇಳಿ?"

"ಈ ದಿನ ದಳವಾಯಿ ಮುದ್ದಣ್ಣ ಒಳ್ಳೆಯ ಮಾತಿಗೆ ಬಗ್ಗಿ ಮಠಕ್ಕೆ ಹಾಕಿದ ಕಾವಲು ತೆಗೆದನೋ ಬದುಕಿದ. ಇಲ್ಲವೇ ಒಂದು ಅವನ ತಲೆ ಹೋಗಬೇಕು, ಇಲ್ಲವೇ ನನ್ನ ತಲೆ ಹೋಗಬೇಕು. ಎರಡರಲ್ಲೊಂದು ಈ ದಿನ ಇತ್ಯರ್ಥವಾಗಬೇಕು. ಆ ಮಾತು ಕೇಳಬೇಕೆಂದೇ ದಳವಾಯಿಯ ಹತ್ತಿರ ಹೊರಟಿದ್ದೇನೆ. ನೀವೂ ಬರುವುದಾದರೆ ಬನ್ನಿ. ಇಲ್ಲವೆ ಹೊತ್ತು ಕಾಯುತ್ತಾ ಮನೆಯಲ್ಲಿ ಕುಳಿತಿರುವುದಾದರೆ ಇರಿ."

"ಮುದ್ದಣ್ಣನವರನ್ನು ನೋಡಲು ಹೋಗುತ್ತೀಯಾ ಭರಮಣ್ಣ?"

"ಅದಕ್ಕೇ ಹೊರಟಿದ್ದೀನಿ ಎಂದು ಹೇಳಲಿಲ್ಲವೇ?"

"ಹಾಗಾದರೆ ನಾನೂ ಬರುತ್ತೇನೆ, ನಿನ್ನ ಜೊತೆಗೆ. ಅಷ್ಟರಲ್ಲೇ ಈ ಪೀಡೆ ಪರಿಹಾರವಾದರೆ ಆಗಲಿ."

—ಎಂದು ಪರಶುರಾಮಪ್ಪನೂ ಆಳಿನಿಂದ ಶಾಲನ್ನು ತರಿಸಿ ಹೊದೆದುಕೊಂಡು, ಭರಮಣ್ಣನೊಂದಿಗೆ ದಳವಾಯಿ ಮುದ್ದಣ್ಣನನ್ನು ಕಾಣಲು ಹೊರಟ.

## ೧೦

"ನಾಯಿ, ಬಾಯಿಬಿಡುತ್ತೀಯೋ–ಇಲ್ಲವೆ ನಾಲಗೆಯನ್ನೇ ಸೀಳಬೇಕೋ."

—ಮುದ್ದಣ್ಣ ರೋಷೋನ್ಮತ್ತನಾಗಿ ಕೇಳಿದ—ಅವನ ಮನೆಯ ನೆಲಮನೆಯ ಕಂಬಕ್ಕೆ ಬಿಗಿದು, ಚಾವಟಿಯ ಏಟಿನಿಂದ ಮೈಯಲ್ಲೆಲ್ಲಾ ನೆತ್ತರು ಬಸಿಯುತ್ತಿದ್ದ ಲಿಂಗಣ್ಣನಾಯಕರ ಸಜ್ಜೆಯ ದಾಸಿಯನ್ನು. ಅವನ ಪ್ರಶ್ನೆಗೆ ಆಕೆ ಏನೂ ಉತ್ತರಕೊಡಲಿಲ್ಲ.

"ಇನ್ನೂ ಮಾತನಾಡದಿರುವಷ್ಟು ಸೊಕ್ಕೆ? ಬಾರಿಸು ದಾಸಣ್ಣ."

—ಮುದ್ದಣ್ಣನ ಅಪ್ಪಣೆಯಾಗುತ್ತಿದಂತೆಯೇ, ದಾಸಣ್ಣನ ಕೈಯಲ್ಲಿದ್ದ ನಾಲ್ಕಾರು ಸೀಳು ನಾಲಗೆಯನ್ನುಳ್ಳ, ಹೆಣೆದು, ಅಲ್ಲಲ್ಲಿ ಗಂಟುಗಳನ್ನು ಬಿಗಿದ, ಚಾವಟಿ, ಹಾವಿನಂತೆ ಗಾಳಿಯಲ್ಲಾಡಿ, ಹದ್ದಿನಂತೆ ದಾಸಿಯ ಮೈಮೇಲೆ ಎರಗಿತು. ಅದು ಸೋಕಿದ ದಾಸಿಯ ದೇಹಭಾಗದಲ್ಲಿ ಅಷ್ಟು ಉದ್ದಕ್ಕೂ ಕೆಂಪನೆಯ ಬಾಸುಂಡೆ ಮೂಡಿ, ಚಾವಟಿಯ ಗಂಟುಗಳು ಚರ್ಮವನ್ನು ಹರಿದು ಎದೆಯಲ್ಲಿ ಹನಿಹನಿಯಾಗಿ ನೆತ್ತರು ಬಸಿದಿತು. 'ಅಯ್ಯೋ' ಎಂದು ಚೀರಿದಳು ದಾಸಿ. ಆದರೆ ಚೀರಲೂ ಅವಳಿಗೆ ಶಕ್ತಿ ಇಲ್ಲದಂತೆ, ಆ ಚೀರುವಿಕೆಯ ಆರ್ತ ನಾದವೂ ಅಸ್ಪಷ್ಟವಾಗಿ ಮೂಡಿಬಂತು.

ಚುಕ್ಕಣ್ಣನಿಂದ ಅರಮನೆಯಲ್ಲಿ ಲಿಂಗಣ್ಣನಾಯಕ ಯಾರೊಂದಿಗೋ ಒಳಸಂಚು ಮಾಡುತ್ತಿದ್ದಾನೆ, ಯಾರಬೆಂಬಲದಿಂದಲೋ ಕಾರ್ಯಭಾರಿಯನ್ನು ಧಿಕ್ಕರಿಸಿ ನಡೆಯುವ ಬಲಬಂದಿದೆ, ಒಂದುದಿನ ನಾಯಕ ತನ್ನ ಅಂತಃಪುರದಲ್ಲಿ ಯಾರೊಂದಿಗೋ ಗುಟ್ಟಾಗಿ ಮಾತನಾಡುತ್ತಿದ್ದ, ಅದು ಯಾರೆಂಬುದು ಈ ದಾಸಿಗೆ ತಿಳಿದಿರಬೇಕು ಎಂಬುದನ್ನು ಕೇಳಿ, ಮುದ್ದಣ್ಣ ಆ ದಾಸಿಯನ್ನು ಹಿಡಿತರಿಸಿ, ನೆಲಮನೆಯ ಕಂಬಕ್ಕೆ ಬಿಗಿಸಿ ನಾಯಕನಿಗೆ ಅರಮನೆಯಲ್ಲಿ ಯಾರು ಬೆಂಬಲ ಎನ್ನುವುದನ್ನು ಅವಳಿಂದ ಹೊರಡಿಸಲು ಪ್ರಯತ್ನಿಸುತ್ತಿದ್ದ. ಆದರೆ ಚಾವಟಿಯ ಏಟು ತಿಂದು ನರಳಿದರೂ, ಮೈ ರಕ್ತಮಯವಾದರೂ ದಾಸಿ ಬಾಯಿ ಬಿಡಲಿಲ್ಲ. ಏಟು ಏಟಿಗೂ 'ನನಗೆ ತಿಳಿಯದು' ಎಂಬ ಉತ್ತರ ವಿನಾ ಬೇರಾವ ಮಾತೂ ಅವಳಿಂದ ಬಾರದು.

ಎಷ್ಟು ಹೊಡೆದರೂ, ಹೊಡೆದ ಕೈಯೇ ಹೊಡೆಹೊಡೆದು ದಣಿದರೂ ದಾಸಿ ಬಾಯಿಬಿಡದಿದ್ದುದನ್ನು ಕಂಡು, ಅವಳ ನರಳುವಿಕೆಯನ್ನೇ, ಕಳ್ಳಾಗಿ

ಕುಡಿದಂತೆ, ಮುದ್ದಣ್ಣನ ಕ್ರೋಧ ಹೆಚ್ಚಿತು. ದಾಸಣ್ಣನ ಕೈಯಲ್ಲಿದ್ದ ಚಾವಟಿಯನ್ನು ತಾನೇ ಕಸಿದುಕೊಂಡು 'ಹೇಳು, ಹೇಳು' ಎಂದು ಹುಚ್ಚಾಗಿ ಹೊಡೆದ. ಕಂಬಕ್ಕೆ ಕಟ್ಟಿದ ಹೆಣ್ಣು, ಬೆಂಕಿಗೆ ಬಿದ್ದ ಹುಳುವಿನಂತೆ ಅತ್ತಿತ್ತ ಹೊಯ್ದಾಡಿದಳು. ಅವಳ ದೇಹದ ಅಂಗಾಂಗಗಳಿಂದ ನೆತ್ತರು ಹರಿದು, ರಕ್ತವರ್ಣದಲ್ಲಿ ಕಡೆದ ವಿಗ್ರಹದಂತೆ ಅವಳು ತೋರಿದಳು. ಆದರೆ ಬಾಯಿಬಿಡದ ಹೆಣ್ಣಿನ ಮೇಲೆ ಮೂಡಿದ ಮುದ್ದಣ್ಣನ ಸಿಟ್ಟು ಆರಲಿಲ್ಲ. ಕಡೆಗೆ ಚಾವಟಿಯನ್ನು ಅತ್ತ ಒಗೆದು, ಎಡಗೈಯಲ್ಲಿ ಅವಳ ನೆತ್ತಿಯ ಕೂದಲನ್ನು ಹಿಡಿದೆಳೆದು, ಬಲಗೈಯ ಅಂಗೈಯಿಂದ ಕೆನ್ನೆಯ ಮೇಲೆ ಅಪ್ಪಳಿಸಿ, ಹಲ್ಲು ಕಡಿದು ಹೇಳಿದ—

"ಇದು ಕಡೆಯ ಬಾರಿ, ಬಾಯಿಬಿಡದೆ ನೀನು ಇಲ್ಲಿಂದ ಬದುಕಿ ಹೋಗುವುದಿಲ್ಲ."

ಹಣೆಯ ಮೇಲಾದ ಗಾಯದಿಂದಿಳಿದ ರಕ್ತ ಇಳಿದು ತುಂಬಿ ಅರೆ ಗುರುಡಾದ ಕಣ್ಣುಗಳಲ್ಲಿ ದ್ವೇಷವನ್ನು ಕಾರುತ್ತಾ ದಾಸಿ ಹೇಳಿದಳು—

"ನಾಯಕರ ಉಪ್ಪಿಗೆ ನಾನು ದ್ರೋಹ ಬಗೆಯುವುದಿಲ್ಲ."

"ಇನ್ನೂ ಅಷ್ಟು ಸೊಕ್ಕೇ ನಿನಗೆ. ದಾಸಣ್ಣ ಅಲ್ಲಿ ಕಟ್ಟಿರುವ ಬೇಟೆಯ ನಾಯನ್ನು ತಾ."

—ಎಂದ ಮುದ್ದಣ್ಣ. ದಾಸಣ್ಣ ನೆಲಮನೆಯಿಂದ ಹೊರಗೆ ಹೋಗಿ, ಬೇಟೆಯ ನಾಯಿಯನ್ನು ತಂದನು. ನೀಳವಾದ ಬಡಕಲು ಮೈಯ ಮುದ್ದಣ್ಣನ ಸೊಂಟದೆತ್ತರಕ್ಕೆ ಬರುವ, ಜೋಲು ನಾಲಗೆಯ ನಾಯಿ, ರಕ್ತದ ವಾಸನೆ ಹಿಡಿದು, ಲಂಘಿಸಲು ಸಿದ್ಧವಾಗಿ ಮೊರೆದಿತು. ಅದರ ಬೆನ್ನು ತಟ್ಟಿ, ದಾಸಿಯತ್ತ ನೋಡಿ ಹೇಳಿದ ಮುದ್ದಣ್ಣ—

ಈಗ ಯಾವ ನಾಯಕನೂ ನಿನ್ನನ್ನು ಉಳಿಸಲಾರ. ಏನು—ಹೇಳುತ್ತೀಯೊ ಇಲ್ಲವೋ."

"ನನಗೆ ಗೊತ್ತಿಲ್ಲ."

"ಗೊತ್ತಿಲ್ಲವೆ? ದಾಸಣ್ಣ, ಅವಳನ್ನು ಕಂಭದಿಂದ ಬಿಚ್ಚಿಬಿಡು."

–ಎಂದ, ದಾಸಣ್ಣ, ಮುದ್ದಣ್ಣನ ಮಾತಿನಂತೆ, ದಾಸಿಯ ಕೈಕಾಲುಗಳನ್ನು ಬಿಗಿದಿದ್ದ ಹಗ್ಗವನ್ನು ಬಿಚ್ಚಿದ ಕೂಡಲೇ, ಹೆಣ್ಣು ಕತ್ತರಿಸಿದ

ಬಾಳೆಯ ದಿಂಡಿನಂತೆ ನೆಲದ ಮೇಲುರುಳಿದಳು. ಅದನ್ನು ಕಂಡ ನಾಯಿ ಅವಳ ಮೇಲೆ ಹಾರಲು ಸಿದ್ಧವಾಗಿ ಮುದ್ದಣ್ಣ ಕೈಯಲ್ಲಿ ಹಿಡಿದಿದ್ದ ಸರಪಳಿಯನ್ನು ಎಳೆದೆಳೆದು ಮೊರೆದಿತು.

"ಈಗಲೂ ಅವಕಾಶವಿದೆ—ಹೇಳಿಬಿಡು."

"ನನಗೆ ಗೊತ್ತಿಲ್ಲ"

"ಹಾಗಾದರೆ—ಅನುಭವಿಸು."

—ಎಂದವನೇ ನಾಯಿಯನ್ನು ಹಿಡಿದಿದ್ದ ಸರಪಳಿಯನ್ನು ಬಿಟ್ಟ. ಆ ಕೂಡಲೇ ಬೇಟೆಯ ನಾಯಿ ಮುಂಗಾಲುಗಳಮೇಲೆ ಮೈಯ ಭಾಗವನ್ನು ಬಿಟ್ಟು, ನೀಳವಾದ ತನ್ನ ಮೈಯನ್ನು ಹಿಂದಕ್ಕೆ ಎಳೆದು ಚಾಚಿ, ಹಿಂಗಾಲುಗಳ ಮೇಲೆ ನಿಂತು, ಅತ್ತಿತ್ತ ನೋಡುತ್ತಾ ಕತ್ತು ಕೊಡವಿ. ಗಂಟಲಲ್ಲೇ ಮೊರೆದು ಒಂದೇ ಬಾರಿಗೆ ದಾಸಿಯಮೇಲೆ ಹಾರಿತು. ಮೃತ್ಯುವಿನಂತೆ ಕವಿದು ಬಂದ ನಾಯಿಯನ್ನು ಕಂಡ ಹೆಣ್ಣು ಚಿಟಾರನೆ ಚೀರಿ ಮೇಲೆದ್ದು ಓಡಲೆತ್ನಿಸಿದಳು. ಆದರೆ ಅವಳ ಮೇಲೆ ಬಿದ್ದ ನಾಯಿ ಗಂಟಲಿಗೇ ಬಾಯಿ ಹಾಕಿತು. ಹರಿದ ಗಂಟಲಿಂದ ರಕ್ತ ಸೂರಿನವರೆಗೂ ಚಿಮ್ಮಿತು. ಆ ಕೈಕಾಲುಗಳ ಹೊಯ್ದಾಟವನ್ನು, ಮೈಯ ಮುರಿತವನ್ನೂ ನೋಡಲಾರದೆ ದಾಸಣ್ಣನೂ ಕಣ್ಣುಮುಚ್ಚಿ ಗೋಡೆಗೆ ಮುಖ ತಿರುಗಿಸಿದನು.

ದಾಸಿಯ ಕತ್ತು ಮುರಿದ ನಾಯಿ, ನೆತ್ತರುಗಾರುವ ಜೋಲುನಾಲಗೆಯನ್ನು ಅಲ್ಲಾಡಿಸುತ್ತಾ, ಮೆಚ್ಚುಗೆಪಡೆಯಲು ಮುದ್ದಣ್ಣನ ಬಳಿ ಬಂದು ನಿಂತು, ಕತ್ತುಚಾಚಿ ಅವನತ್ತ ನೋಡಿತು.

"ಶಾಭಾಸು! ನೀನೊಬ್ಬನೇ ನಚ್ಚಿನ ಬಂಟ."

—ಎಂದು ಅದರ ಬೆನ್ನುತಟ್ಟಿ ನೆತ್ತಿಯನ್ನು ನೇವರಿಸಿದ ಮುದ್ದಣ್ಣ; ಪ್ರಾಣಹೋದರೂ ಗುಟ್ಟುಬಿಡದೆ ಸತ್ತ ದಾಸಿಯ ಮೇಲೆ ಕ್ರೋಧತೀರದೆ ನಾಯಿ ಹರಿದ ಮೈಯನ್ನು ಕಾಲಿನಿಂದ ಒದ್ದು—

"ಇವಳನ್ನೆಲ್ಲಿಯಾದರೂ ದೂರ ಬಂಡೆಗಳಲ್ಲಿ ಬಿಸಾಡಿಸು ದಾಸಣ್ಣ."

—ಎಂದು ಹೇಳಿ, ನೆಲಮಾಳಿಗೆಯಿಂದ ಹೊರಬರುತ್ತಿದ್ದ ಹಾಗೆಯೇ ಅವನು ಹೊರಬರುವುದನ್ನೇ ಕಾಯುತ್ತಿದ್ದ ರಾಮಣ್ಣ—

"ಪರಶುರಾಮಪ್ಪ, ದಳವಾಯಿ ಭರಮಣ್ಣ ಬಂದಿದ್ದಾರೆ."

—ಎಂದು ಹೇಳಿದ.

ಅವರ ಹೆಸರು ಕೇಳುತ್ತಿದ್ದ ಹಾಗೇ ಮತ್ತೆ ಮುದ್ದಣ್ಣನ ಮೊಗದಲ್ಲಿ ಕಾರ್ಮುಗಿಲು ಕವಿಯಿತು.

"ಆಯಿತು ಕೈತೊಳೆದು ಬರುತ್ತೇನೆ. ಬರುತ್ತೇನೆ ಎಂದು ಹೇಳು. ನೀನು ಇಲ್ಲೇ ಎಲ್ಲಿಯಾದರೂ ಕೂಗಳತೆಯಲ್ಲಿರು. ಅಗತ್ಯ ಬಿದ್ದರೆ ಬರುವೆಯಂತೆ."

—ಎಂದು ಹೇಳಿ ಮುದ್ದಣ್ಣ, ಆಳು ಸಿದ್ಧವಾಗಿಟ್ಟದ್ದ ನೀರಿನ ಪಾತ್ರೆಯಲ್ಲಿ ನೆತ್ತರಾಗಿದ್ದ ಕೈಯನ್ನು ತೊಳೆಯಲು ಅದ್ದಿದ. ಅವನ ಕೈ ಸೋಂಕಿನಿಂದೆಂಬಂತೆ ಪಾತ್ರೆಯಲ್ಲಿದ್ದ ನೀರು ಕೆಂಪಾಯಿತು. ಅದನ್ನು ನೋಡುತ್ತ ಅವನ ಕಣ್ಣು ಮತ್ತೆ ಕೆಂಪೇರಿತು. 'ಇನ್ನೆಷ್ಟು ಬಾರಿ ಹೀಗೆ ಕೈತೊಳೆಯಬೇಕೋ' ಎಂದುಕೊಂಡು, ವಸ್ತ್ರದಲ್ಲಿ ಕೈವರಿಸಿಕೊಂಡು, ಪರಶುರಾಮಪ್ಪ, ಭರಮಣ್ಣನನ್ನು ನೋಡಲು ಚಾವಡಿಗೆ ಬಂದ.

ತಾನು ಚಾವಡಿಯೊಳಗೆ ಬಂದ ಕೂಡಲೇ ಎದ್ದುನಿಂತು, ನಮಸ್ಕಾರಮಾಡಿದ ಪರಶುರಾಮಪ್ಪ, ಭರಮಣ್ಣನಿಗೆ ಪ್ರತಿವಂದನೆಮಾಡಿ—

"ಏನು ಅಪರೂಪವಾಗಿ ಬಲುದೂರ ದಯಮಾಡಿಸಿದಿರಿ. ಏಕೋ ಇಂದು ನಮ್ಮ ಭಾಗ್ಯ ಒಲಿದಂತೆ ಕಾಣುತ್ತದೆ."

—ಎಂದು ಮುದ್ದಣ್ಣ ಕೃತಕವಾದ ನಗೆನಗುತ್ತಾ:.ಒತ್ತಾಯದಿಂದ ಎಳೆತಂದ ನಗೆಯನ್ನು ಮುಖದಮೇಲೆ ಸುಳಿಸಿದರೂ, ಆ ನಗೆಯಿಂದ ಮುದ್ದಣ್ಣನ ಮೊಗದಮೇಲೆ ಮೂಡಿದ್ದ ಕರಾಳ ಮೃತ್ಯುಮುದ್ರೆ ಮರೆಯಾಗಲಿಲ್ಲ. ಅದನ್ನು ಕಂಡ ಪರಶುರಾಮಪ್ಪನಿಗೆ, ಶಕುನ ಕೇಳ ಬಂದಾಗ ಅಪಶಕುನದ ವಸ್ತು ಇದಿರಾದಂತಾಗಿ, ಬಂದಹಾಗೇ ಹಿಂದಿರುಗಬೇಕು ಎನಿಸಿತು. ಆದರೆ ಅದು ಸಾಧ್ಯವಿರಲಿಲ್ಲವಾದುದರಿಂದ ಮುದ್ದಣ್ಣ ತೋರಿಸಿದ ಪೀಠದಲ್ಲಿ ಕುಳಿತ.

"ಎಲ್ಲಿದ್ದವರನ್ನು ಎಂಥವರನ್ನು ತಮ್ಮ ಬಳಿಗೆ ಬರಮಾಡುವ ಶಕ್ತಿ ಪ್ರಧಾನಿಗಳಿಗೆ ಪ್ರಾಪ್ತವಾಗಿದೆ. ಹಾಗಿರುವಾಗ ನಾವು ಬಂದುದೇನು ದೊಡ್ಡದು?"

—ಎಂದು ಭರಮಣ್ಣನೇ ಮಾತು ಪ್ರಾರಂಭಿಸಿದ.

"ಹಾಗೇ? ಅಂಥ ಶಕ್ತಿ ನಮ್ಮಲ್ಲಿದೆಯೇ? ನಮಗದು ಗೊತ್ತೇ ಇಲ್ಲ."

"ನಿಮ್ಮ ಶಕ್ತಿ ನಿಮಗೆ ತಿಳಿಯದಿದ್ದರೆ ಹೀಗೆ ಮಾಡುತ್ತಿದ್ದಿರಾ? ಶಕ್ತಿ ಇದೆಯೆಂದೇ ಇದೆಲ್ಲಾ........"

—ಭರಮಣ್ಣ ಸಣ್ಣಗೆ ಕೆರಳುತ್ತಾ ಹೇಳಿದ.

"ತಮ್ಮನ್ನು ಇಷ್ಟುದೂರ ಕರೆತರುವಂಥ ಕೆಲಸ ನಮ್ಮಿಂದ ಏನಾಯಿತೋ ತಿಳಿಸಬೇಕು."

—ಎಂದ ಮುದ್ದಣ್ಣ, ಭರಮಣ್ಣನ ಮಾತಿನಲ್ಲಿದ್ದ ಸಿಟ್ಟಿನ ಸೂಕ್ಷ್ಮದ ಸೆಳೆತ ಮನವರಿಕೆಯಾಗದವನಂತೆ.

"ಹೆಚ್ಚು ಮಾತಿಗೆ ನಮಗೀಗ ಸಮಯವಿಲ್ಲ ಪ್ರಧಾನಿಗಳೇ–ನಮಗೆ ಬೇಕಾದುದಿಷ್ಟೆ—ಮಠಕ್ಕೆ ಕಾವಲು ಏಕೆ ಹಾಕಿದ್ದೀರಾ?"

ಭರಮಣ್ಣ ಸಹನೆಯನ್ನು ಕಳೆದುಕೊಳ್ಳುತ್ತ ಕೇಳಿದ.

"ಅದೇ? ಅದು, ತಮ್ಮನ್ನು ನಮ್ಮ ಮನೆ ಬಾಗಿಲವರೆಗೂ ಕರೆತರುವಷ್ಟು ದೊಡ್ಡ ವಿಚಾರವೆಂದು ನಾವು ತಿಳಿದಿರಲಿಲ್ಲ. ಅಲ್ಲದೆ ದುರ್ಗದ ಶಾಂತಿರಕ್ಷಣೆ, ಹಿತರಕ್ಷಣೆಯ ದೃಷ್ಟಿಯಿಂದ ನಾವು ಮಾತ್ರ ಮಾಡಬಹುದಾದ ಮಾಮೂಲಿನ ಕೆಲಸಗಳಿಗೆ ನಾವು ಎಲ್ಲರಿಗೂ ವಿವರಣೆ ಕೊಡುವುದು ಅಗತ್ಯವೆಂದು ತಿಳಿದಿಲ್ಲ."

—ಮುದ್ದಣ್ಣನೂ ಸೆಡೆಯುತ್ತಾ ಹೇಳಿದ. ಹೀಗೆಯೇ ಬಿಟ್ಟರೆ ಮಾತು ವಿಕೋಪಕ್ಕೆ ಹೋಗಿ, ಕ್ರೋಧದ ಸುಳಿಗೆ ಸಿಗಬಹುದೆಂದು ಹೆದರಿ ಅದುವರೆಗೂ ಸುಮ್ಮನಿದ್ದ ಪರಶುರಾಮಪ್ಪ ಹೇಳಿದ—

"ತಾವು ಹೇಳಿದಂತೆ ದುರ್ಗದ ಹಿತರಕ್ಷಣೆ, ಶಾಂತಿರಕ್ಷಣೆಯ ದೃಷ್ಟಿಯಿಂದ ಯಾವ ಕೆಲಸ ಮಾಡುವುದಕ್ಕೂ ನಿಮಗೆ ಅಧಿಕಾರವಿದೆ. ಅದಕ್ಕೆ ನೀವು ಯಾರಿಗೂ ವಿವರಣೆ ಕೊಡಬೇಕಾಗಿಲ್ಲ. ವಿವರಣೆ ಕೇಳುವ ದೃಷ್ಟಿಯಿಂದಲೂ ನಾವು ಬರಲಿಲ್ಲ. ನಮಗೂ ತಮ್ಮಂತೆಯೇ ದುರ್ಗದ ಹಿತವೇ ಮುಖ್ಯವಾಗಿರುವುದರಿಂದ, ಸಮಾನ ಧರ್ಮೀಯರಲ್ಲಿರುವ ಸಖ್ಯದಲ್ಲಿ ಹೀಗಾಯಿತಲ್ಲಾ, ಏಕೆ ಹೀಗಾಯಿತೋ ಎಂದು ವಿಚಾರಿಸಲು ಬಂದೆವು. ತಮಗೆ ಬೇಕಾದವರಿಗೆ ಏನಾದರೂ ಆದರೆ ತಮಗೆ ಅಸಮಾಧಾನವಾಗು

ವುದು ಸ್ವಾಭಾವಿಕವಲ್ಲವೇ ಪ್ರಧಾನಿಗಳೇ? ಸ್ನೇಹಿತರಲ್ಲಿ ಅಲ್ಲದೆ ಬೇರೆ ಎಲ್ಲಿ ನಾವು ನಮ್ಮ ಅಸಮಾಧಾನವನ್ನು ತೋಡಿಕೊಳ್ಳುವುದು, ಮನ ಬಿಚ್ಚಿ ಮಾತನಾಡುವುದು? ನಮ್ಮೆದುರಿಗೂ ನಾವು ಹೃದಯದಲ್ಲೇನೋ ಒಂದಿಟ್ಟುಕೊಂಡು, ಬಾಯಲ್ಲಿ ಏನೋ ಮಾತನಾಡಿದರೆ, ಸ್ನೇಹಿತರು ಅಂದುಕೊಂಡಿದ್ದು ಸಾರ್ಥಕವಾಗುತ್ತದೆಯೋ? ಆದ್ದರಿಂದಲೇ ಭರಮಣ್ಣ ನೇರವಾಗಿ ಕೇಳಿದುದು. ಅದು ಕೂಡದು ಎಂದರೆ ಬೇಡ—ಬಂದ ದಾರಿ ಹಿಡಿದು ಹೋಗುತ್ತೇವೆ."

ಭರಮಣ್ಣನು ಕೇಳಿದ ಪ್ರಶ್ನೆಯನ್ನೇ, ಸಿಟ್ಟಾಗಲು ಏನೂ ಕಾರಣ ಸಿಗದ ರೀತಿಯಲ್ಲಿ ಕೇಳಿದ ಪರಶುರಾಮಪ್ಪನ ಮಾತಿನ ಚಾತುರಿಯನ್ನು ಕಂಡು ಮುದ್ದಣ್ಣನಿಗೂ "ಶಾಭಾಸು" ಎನ್ನಬೇಕು ಎನಿಸಿತು. ಸಮ ಬಲಸಾದ ಎದುರಾಳಿಯನ್ನು ಕಂಡಾಗ ಮೂಡುವ ಗೌರವ ಮೂಡಿತು. ಹಾಗೆಯೇ ಉಳಿದವರಿಂದ ಇವನಲ್ಲಿ ಹೆಚ್ಚು ಎಚ್ಚರವಾಗಿ ನಡೆದುಕೊಳ್ಳ ಬೇಕೆಂಬ ಅರಿವೂ ಮೂಡಿತು. ಅದರಿಂದಾಗಿ, ಕೊಂಚ ಕಾವೇರಿದ್ದ ಧ್ವನಿ ಯನ್ನು ಹದಕ್ಕೆ ತಂದು ಹೇಳಿದ—

"ನೀವು ಹೇಳುವುದು ನಿಜ, ಪರಶುರಾಮಪ್ಪನವರೇ. ನಿಮ್ಮ ಮಾತಿಗೆ ಇಲ್ಲವೆನ್ನುವುದಿಲ್ಲ. ಆದರೆ ಹತ್ತಾರು ಕೆಲಸಗಳ ಜಂಜಾಟದಿಂದ ನಮಗೂ ತಲೆ ಕೆಟ್ಟು ಹೋಗಿರುತ್ತದೆ. ಅಲ್ಲದೆ ನಮಗೂ ವಯಸ್ಸಾಗುತ್ತಾ ಬಂದು, ತಾಳ್ಮೆಯೂ ಮೊದಲಿನಷ್ಟಿಲ್ಲ. ಆದ್ದರಿಂದ ತಾವು, ನಾವು ಕೊಂಚ ತಾಳ್ಮೆ ಗೆಟ್ಟು ಮಾತನಾಡಿದರೆ ಅನ್ಯಥಾ ಭಾವಿಸಬಾರದು. ಭರಮಣ್ಣನವರಲ್ಲೂ ಅದೇ ವಿನಂತಿ."

"ತಾವು ಈ ದಿನ ಮಠಕ್ಕೆ ಹೋಗಿದ್ದಿರಿ. ಬರುವಾಗ ಏಕೋ ಮಠಕ್ಕೆ ಯಾರೂ ಹೋಗಬಾರದು, ಅಲ್ಲಿಂದ ಯಾರೂ ಹೊರಗೆ ಬರ ಬಾರದು ಎಂದು ಕಾವಲು ಹಾಕಿ ಬಂದಿರಿ ಎಂದು, ದಿನದಂತೆ ಮಠದ ಬಳಿ ಹೋದಾಗ ತಿಳಿಯಿತು. ಅದಕ್ಕೆ ಏನಾಯಿತೋ ಎಂದು ತಮ್ಮನ್ನೇ ಕೇಳಲು ಬಂದೆವು."

—ಮಾತನ್ನು ಮತ್ತೆ ಭರಮಣ್ಣನ ಸಿಟ್ಟಿನ ಕೈಗೆ ಕೊಡದೆ, ತಾನೇ ನಡೆಸುತ್ತಾ ಕೇಳಿದ ಪರಶುರಾಮಪ್ಪ.

“ನೀವೂ, ನಿತ್ಯವೂ ಮಠಕ್ಕೆ ಹೋಗುತ್ತಿದ್ದಿರಾ?”

—ಪರಶುರಾಮಪ್ಪನಾಡಿದ ಮಾತಿನಿಂದ ಆಶ್ಚರ್ಯವಾದಂತೆ, ಹುಬ್ಬು ಏರಿಸಿ ಕೇಳಿದ ಮುದ್ದಣ್ಣ.

“ನಿಜ. ನಮಗೆ ಬೇರೇನು ಕೆಲಸ ಹೇಳಿ?”

“ಏಕೆ? ಬೇರೆ ಏನೂ ಕೆಲಸವಿಲ್ಲವೇ? ಮಠಕ್ಕೆ ಹೋಗುವುದೊಂದೇ ಕೆಲಸವೇ?”

—ಬಹು ನವಿರಾದ ಧ್ವನಿಯಲ್ಲಿ ಕೇಳಿದ ಮುದ್ದಣ್ಣ.

“ದುರ್ಗದ ರಾಜಕಾರಣ, ಕ್ಷೇಮ ಚಿಂತನೆಯ ಹೊಣೆಯನ್ನೆಲ್ಲಾ ನೀವೇ ಹೊತ್ತು, ನಮ್ಮ ಮೇಲೆ ಆ ಭಾರ ಬೀಳದಂತೆ ಉಪಕಾರಮಾಡಿದುದರಿಂದ, ನಮಗಿನ್ನೇನು ಕೆಲಸ ಇದೆ ಹೇಳಿ? ಹಿರಿಯರ ಆಶೀರ್ವಾದದಿಂದ ಸಂಸಾರ ತಾಪತ್ರಯ ಅಷ್ಟಿಲ್ಲ. ಆದ್ದರಿಂದ ಹೆಗಲಮೇಲೆ ಭಾರವಾಗಿರುವ ಹೊತ್ತನ್ನು ಕಾಡ ಹರಟೆಯಲ್ಲಿ ಕಳೆಯುವುದಕ್ಕಿಂತ, ದೇವತಾದರ್ಶನ, ಗುರುವಚನಾಸ್ವಾದನಗಳಲ್ಲಿ ಕಳೆಯುವುದು ಮೇಲು ಎಂದುಕೊಂಡಿದ್ದೇವೆ. ಬೇರೇನು ಮಾಡುವುದು ಹೇಳಿ?”

“ನೀವು ಹೇಳುವುದು ನಿಜ, ಪರಶುರಾಮಪ್ಪನವರೇ—ಕಾಲ ಸಿಕ್ಕಿದಾಗ, ಅದನ್ನು ಅಲ್ಲಸಲ್ಲದ ಉಪದ್ವ್ಯಾಪಿತನದಲ್ಲಿ ಹಾಳುಮಾಡುವುದಕ್ಕಿಂತ ಹೀಗೆ ಸದ್ವಿನಿಯೋಗ ಮಾಡುವುದು ಮೇಲು. ಆದರೆ ನಿಮ್ಮ ಬುದ್ಧಿ ಎಲ್ಲರಿಗೂ ಇರುವುದಿಲ್ಲ. ಹೊತ್ತಿದೆ ಎಂದು ಗುಡ್ಡತೋಡಿ ಮೈಮೇಲೆ ಕೆಡವಿಕೊಳ್ಳುವ ಹವ್ಯಾಸಕ್ಕೆ ಬೀಳುವವರೇ ಬಹಳ ಮಂದಿ. ನಿಮ್ಮ ಬುದ್ಧಿ ನಿಮ್ಮ ಗುರುಗಳಿಗಿದ್ದಿದ್ದರೆ, ನಾವು ಮಠದ ವಿಚಾರದಲ್ಲಿ ಪ್ರವೇಶಿಸಬೇಕಾದ ಆಗತ್ಯವೇ ಬರುತ್ತಿರಲಿಲ್ಲ.”

“ಅಂದರೆ—ತಮ್ಮ ಮಾತು ಅರ್ಥವಾಗಲಿಲ್ಲ. ಗುರುಗಳು ಏನು ಮಾಡಿದರು?”

“ನಮ್ಮ ಎಚ್ಚರಿಕೆಯನ್ನು ಧಿಕ್ಕರಿಸಿ ನಡೆದರು.”

“ಹೇಗೆ?”

“ಮೊದಲೇ ಒಂದುಬಾರಿ ನಾವು ಅವರಿಗೆ ಮರ್ಯಾದೆಯಿಂದಲೇ—ನೀವು ವಿರಕ್ತರು, ರಾಜಕಾರಣಕ್ಕೂ ನಿಮಗೂ ಸಂಬಂಧವಿಲ್ಲ, ಧರ್ಮ

ನಿಮ್ಮ ರಂಗ—ರಾಜಕಾರಣ ನಮ್ಮ ರಂಗ, ನಾವಿಬ್ಬರೂ ಪರಸ್ಪರ ಸ್ಥಾನವನ್ನು ಅವರಿಗೇ ಬಿಟ್ಟು ನಡೆದುಕೊಳ್ಳೋಣ ಎಂತ. ಈಗ ನಾವು ದುರ್ಗದ ಪ್ರಧಾನಿಗಳು, ಜನ ನಾವು ಹೇಳಿದುದನ್ನು ಕೇಳುತ್ತಾರೆ ಎಂದು ಧರ್ಮಬೋಧನೆಗೆ ಹೊರಟರೆ ಕೇಳುತ್ತಾರೆಯೇ? ಹಾಗೆಯೇ ಗುರುಗಳೂ. ಅವರು ರಾಜಕಾರಣಕ್ಕೆ ಇಳಿಯಬಾರದು. ಈ ಮಾತು ಸ್ಪಷ್ಟವಾಗಿಯೇ ಹೇಳಿದೆವು. ಆದರೂ ಅವರಿಗೆ ನಮ್ಮ ಮಾತು ಮಾನ್ಯವಾಗಲಿಲ್ಲ. ಹಾಗಾಗಿ ನಾವು ಈ ಆಜ್ಞೆ ಮಾಡಬೇಕಾಯಿತು."

"ಗುರುಗಳು ರಾಜಕಾರಣಕ್ಕೆ ಇಳಿದರೇ?"

"ಇಳಿದಿರುವರೆಂದು ನಿಮಗೇ ಗೊತ್ತಿರಬೇಕಲ್ಲ. ನಮಗಿಂತ ಚೆನ್ನಾಗಿ ನಿಮಗೆ ತಿಳಿದಿರಬೇಕು. ಬೇಡವೆಂದುದನ್ನು ಮಾಡಿದರೆ, ಆಗ ಬಾರದ್ದನ್ನೂ ಅನುಭವಿಸಬೇಕು. ಅದನ್ನು ಯಾರು ತಪ್ಪಿಸಲು ಸಾಧ್ಯ? ಅಲ್ಲದೆ ಈ ಉಪದ್ವಾಪಿತನ ಇವರ ಜಾತಿ ಲಕ್ಷಣ."

"ಅಂದರೆ—"

—ಗುರುಗಳ ಬಗ್ಗೆ ತಾತ್ಸಾರವಾಗಿ ಹೇಳಿದ್ದನ್ನು ಕೇಳಿ ಅದುವರೆಗೂ ಸುಮ್ಮನಿದ್ದ ಭರಮಣ್ಣ ಸಿಡಿದು ಕೇಳಿದ.

"ಅವರ ಬಳಿ ಅಷ್ಟು ವಿಶೇಷವಾಗಿ ಓಡಾಡುತ್ತಿದ್ದಿರಿ—ಅವರು ಮಾಡುವ ವಿಷಯ ನಿಮಗೆ ಅಷ್ಟು ಗೊತ್ತಿಲ್ಲವೇ? ಇವರ ಬಾಯಿಂದಲೇ ನಾವು, ಇವರು ಚಿಕ್ಕಣ್ಣನಾಯಕರ ಮುಂದೆ ಹೇಳುವಾಗ ಕೇಳಿದ್ದೆವು. ಇವರ ಮತಸ್ಥಾಪಕ ಬಸವೇಶ್ವರ, ಉಪ್ಪಿಟ್ಟ ಧಣಿ ಬಿಜ್ಜಳನ ಕೊಲೆ ಮಾಡಿಸಿ, ಕಲ್ಯಾಣದ ಬೀದಿಗಳಲ್ಲಿ ರಕ್ತದ ಕೋಡಿ ಹರಿಯಿಸಿದನಂತೆ—ದೊರೆ ತನ್ನ ಮಾತು ಕೇಳಲಿಲ್ಲ ಎಂದು. ಆ ಗುರುವಿಗೆ ತಕ್ಕ ಶಿಷ್ಯರು ಇವರು. ಇದನ್ನು ತಿಳಿದೇ ಚಿಕ್ಕಣ್ಣನಾಯಕರು ಇವರನ್ನು ದೂರ ಮಾಡಿದ್ದು. ಹಾವು ಹಾಲೆರೆದರೂ ಹಾವೇ!"

"ಗುರುಗಳ ಬಗ್ಗೆ, ಮತದ ಬಗ್ಗೆ ಹೆಚ್ಚು ತಿಳಿಯದೆ ನಿಂದಿಸಹೋಗ ಬಾರದು ಪ್ರಧಾನಿಗಳೇ."

—ಪರಶುರಾಮಪ್ಪನೂ ಗುರುನಿಂದೆಯನ್ನು ಕೇಳಿ, ತಾಳ್ಮೆ ಸೋಲುತ್ತಾ ಹೇಳಿದ.

"ಅದು ನಮಗೆ ಆಗತ್ಯವೂ ಇಲ್ಲ. ಅವರು ದೊಡ್ಡವರು ತಾನೇ. ದೂರ ಇರಲಿ. ಹಾಗಲ್ಲದೆ ತಮ್ಮ ಸ್ಥಾನವನ್ನು ಅತಿಕ್ರಮಿಸಿ ನಡೆದರಾದರೆ ಅವರು ಯಾರೇ ಆಗಿದ್ದರೂ ಅವರಿಗೆ ತಕ್ಕ ಬಂದೋಬಸ್ತು ಮಾಡುವುದು ನಮ್ಮ ಕರ್ತವ್ಯ."

"ಕರ್ತವ್ಯ ಮಾಡುವಾಗಲೂ ಬೇರೆಯವರ ಮನಸ್ಸಿಗೆ ಹಿಂಸೆಯಾಗ ದಂತೆ ಮಾಡಬಹುದಲ್ಲವೇ?"

"ಈಗ ಯಾರ ಮನಸ್ಸಿಗೆ ಹಿಂಸೆಯಾಗಿದೆ?"

"ನಮ್ಮೆಲ್ಲರ ಮನಸ್ಸಿಗೂ."

"ಏಕೆ—ನೀವು ಬ್ರಾಹ್ಮಣರು. ನಿಮಗೂ ಅವರು ಗುರುಗಳೇ?"

—ಚಕಿತನಾದಂತೆ ಕೇಳಿದ ಮುದ್ದಣ್ಣ.

"ನಿಜ—ಗುರುಗಳಾಗಲು ಮುಖ್ಯವಾದದ್ದು ಜಾತಿಯಲ್ಲ, ಗುಣ. ಆ ದೃಷ್ಟಿಯಿಂದ ಸ್ವಾಮಿಗಳು ನನಗೆ ನಿಮಗೇ ಅಲ್ಲ; ಲೋಕಕ್ಕೇ ಗುರು ವಾಗ ಬಲ್ಲ ತಪಸ್ವಿಗಳು. ಆದುದರಿಂದ ನಾನು ಹೇಳುತ್ತೇನೆ—ಅವರ ಬಳಿ ಹತ್ತುಜನ ಹೋದರೆ ಅವರಿಗೆ ಶ್ರೇಯಸ್ಸೇ ವಿನಾ ಗುರುಗಳಿಗಲ್ಲ. ಆ ದೃಷ್ಟಿಯಿಂದ ತಾವು ಮಠಕ್ಕೆ ಕಾವಲು ಹಾಕಿದುದು ಸರಿಯಲ್ಲವೇನೋ ಎನಿಸುತ್ತದೆ."

"ಎನಿಸುವುದೇನು ಬಂತು? ಅದು ಸರಿಯಲ್ಲ."

—ನಿರ್ದಾಕ್ಷಿಣ್ಯವಾಗಿ ಹೇಳಿದ ಭರಮಣ್ಣ.

"ಅಹುದೇ?"

—"ನಾವು ಮಾಡಿದುದರಲ್ಲಿ ತಪ್ಪುಕಂಡು ಹಿಡಿಯುವಷ್ಟು ಎದೆ ಗಾರಿಕೆಯೇ" ಎಂಬರ್ಥದ ದೃಷ್ಟಿಯಲ್ಲಿ ಭರಮಣ್ಣನನ್ನು ನೋಡುತ್ತಾ ಕೇಳಿದ ಮುದ್ದಣ್ಣ.

"ನಾವು ತಪ್ಪು ಎಂದು ಹೇಳಿದರೆ ನೀವು ಒಪ್ಪಿಕೊಳ್ಳುತ್ತೀರಾ?"

—ಸವಾಲು ಹಾಕಿದಂತೆ ಹೇಳಿದ ಭರಮಣ್ಣ.

"ನಾವು ಒಪ್ಪುವುದು, ಬಿಡುವುದು ಬೇರೆ. ಹೇಳಬೇಕಾದುದನ್ನು ಹೇಳಬಹುದು."

"ನಾವೇ ಹೇಳಬಹುದಾದರೆ, ಇದು ಸರಿಯಾಗಲಿಲ್ಲ. ಈ ಕಾವಲು ಕಟ್ಟು ತೆಗೆದುಬಿಡಿ."

"ಮಠಕ್ಕೆ ಕಾವಲು, ಕಟ್ಟುಹಾಕಬೇಕೆಂಬ ಹಟವೇನೂ ನಮಗಿಲ್ಲ. ಗುರುಗಳು ನಮ್ಮ ಮಾತಿಗೆ ಒಪ್ಪುವುದಾದರೆ, ಈ ಗಳಿಗೆಯಲ್ಲೇ ಕಾವಲು ತೆಗೆಸಲು ಸಿದ್ಧವಾಗಿದ್ದೇವೆ."

"ಏನು ಮಾತು?"

—ಕತ್ತಲಲ್ಲಿ ಬೆಳಕಿನ ಕಿರಣಕಂಡವನಂತೆ ಕೊಂಚ ಗೆಲುವಾಗಿ ಕೇಳಿದ ಪರಶುರಾಮಪ್ಪ.

"ಇಷ್ಟೇ—ನಮಗೆ ಗುರುಗಳು ರಾಜಕಾರಣದಲ್ಲಿ ಪ್ರವೇಶಿಸುತ್ತಿಲ್ಲ ಎಂದು ನಂಬಿಕೆಯಾಗುವವರೆಗೂ, ನಮ್ಮಿಂದ ಅಪ್ಪಣೆ ಚೀಟಿತರದವರನ್ನು ಮಠಕ್ಕೆ ಸೇರಿಸುವುದಿಲ್ಲ. ನಮಗೆ ತಿಳಿಸದೆ, ನಮ್ಮವರ ಇದುರಿನಲ್ಲಲ್ಲದೆ, ನಾಯಕರನ್ನು ನೋಡುವುದಿಲ್ಲ ಎಂದು ಗುರುಗಳು ವಚನ ಕೊಡಬೇಕು. ಹಾಗೆ ಮಾಡಿದರೆ ಧರ್ಮಶ್ರವಣಕ್ಕಾಗಿ ಬರುವ ಭಕ್ತರನ್ನು ನೋಡಲು ಗುರುಗಳಿಗೂ ತೊಂದರೆಯಾಗುವುದಿಲ್ಲ; ಭಕ್ತರಿಗೂ ತೊಂದರೆಯಾಗುವುದಿಲ್ಲ. ಈ ಮಾತಿಗೆ ಅವರು ಒಪ್ಪಿದರೆ, ನಿಂತಕಾಲಲ್ಲಿ ಕಾವಲು ತೆಗೆಸಲು ಸಿದ್ಧವಾಗಿದ್ದೇನೆ."

"ಗುರುಗಳನ್ನು ಯಾರು ನೋಡಬಹುದು, ಯಾರು ನೋಡಕೂಡದು ಎಂದು ನಿರ್ಧರಿಸುವರು ಯಾರು?"

'ನಾವು"

"ಒಂದು ವೇಳೆ ಗುರುಗಳು ಇಂಥ ಷರತ್ತಿಗೆ ಒಪ್ಪದೆ ಹೋದರೆ—"

"ಅದುವರೆಗೂ ಕಾವಲು ಕದಲುವುದಿಲ್ಲ. ಅದನ್ನು ಮೀರಿ ನಡೆವರೆ ದುರ್ಗದ ಸೀಮೆಯಿಂದಾಚೆಗೆ ಅವನ್ನು ಕಳುಹಿಸಬೇಕಾಗುವುದೆಂದೂ ಹೇಳಿಬಂದಿದ್ದೇನೆ."

"ಗುರುಗಳಿಗೆ ಹೀಗೆ ಆಜ್ಞೆಮಾಡುವುದು ಅಪಮಾನಕರವಲ್ಲವೇ ಪ್ರಧಾನಿಗಳೇ."

"ಅವರು ನಿಮಗೆ ಗುರುಗಳಾಗಿರಬಹುದು; ನಮಗಲ್ಲ. ಅಲ್ಲದೆ ಅವರಿಗೆ ಕಾಷಾಯ ವಸ್ತ್ರದ ರಕ್ಷಣೆ ಇಲ್ಲವಾದಲ್ಲಿ ಬೇರೇ ರೀತಿಯಲ್ಲಿಯೇ ಅವರೊಡನೆ ವ್ಯವಹರಿಸುತ್ತಿದ್ದೆವು."

"ಅಂದರೆ—"

"ರಾಜದ್ರೋಹಿಗಳನ್ನು ನಾವು ನಡೆಸಿಕೊಳ್ಳುವ ರೀತಿ ನಿಮಗೇ ಗೊತ್ತಿದೆ ಭರಮಣ್ಣನವರೇ. ರಾಜದ್ರೋಹಿಯನ್ನು ದಂಡಿಸುವಾಗ ಅವರ ಸ್ಥಾನವನ್ನು ನಾವು ಲೆಕ್ಕಿಸುವುದಿಲ್ಲ. ಅಲ್ಲಿ ವಿನಯಕ್ಕಾಗಲೀ, ಕರುಣೆಗಾಗಲೀ ಎಡೆಯಿಲ್ಲ. ರಾಜದ್ರೋಹಿಗಳಿಗೆ ವಿಹಿತವಾದ ಶಿಕ್ಷೆ ನಿಮಗೆ ತಿಳಿಯದೇ ಭರಮಣ್ಣ ?"

"ತಿಳಿಯದು—ತಾವೇ ಅಪ್ಪಣೆಕೊಡಿಸಬೇಕು."

"ನಾವೇ ಹೇಳಬೇಕೆ? ಅದೇ ನಿಮ್ಮ ಇಚ್ಛೆಯಾದರೆ ಹಾಗೇ ಆಗಲಿ. ಇರುವ ಮಾತನ್ನು ಹೇಳಲು ನಾವು ಹಿಂಜರಿಯಬೇಕಾದ ಅಗತ್ಯವಿಲ್ಲ. ರಾಜದ್ರೋಹಿಗೆ ಒಂದೇ ಶಿಕ್ಷೆ—ಶೂಲದ ಮರ."

"ಪ್ರಧಾನಿಪಟ್ಟದ ಪಿತ್ತ ನಿಮ್ಮ ನೆತ್ತಿಗೇರಿದಂತಿದೆ ಪ್ರಧಾನಿಗಳೇ."

—ಭರಮಣ್ಣ ತಾಳ್ಮೆ ಸೋತು, ರೋಷದಲ್ಲಿ ಸಿಡಿದು ಹೇಳಿದ.

"ದಳವಾಯಿಗಳಿಗೆ ಎಲ್ಲಿ ಹೇಗೆ ಮಾತನಾಡಬೇಕೆಂಬುದು ತಿಳಿದಿರಬೇಕು. ಆ ಅರಿವು ಅವರಿಗಿಲ್ಲವಾದರೆ, ನನುಗಿದೆ. ನಾಲಗೆ ಹರಿಬಿಡುವುದು ಬೇಡಿ."

"ಪ್ರಧಾನಿಗಳು ಹೇಳುವುದು ನಿಜ, ಭರಮಣ್ಣ. ಕೊಂಚ ಸೈರಣೆಯಿರಲಿ. ತಮ್ಮನ್ನೊಂದು ಮಾತು ಕೇಳಬಹುದೇ ಪ್ರಧಾನಿಗಳೇ."

"ಅದೇನು ಹೇಳಿ."

"ಈ ವಿಷಯದಲ್ಲಿ ತಾವು ನಾಯಕರ ಸಲಹೆ ತೆಗೆದುಕೊಂಡಿರಾ ?"

"ಇಂಥ ಸಣ್ಣ ವಿಷಯದಲ್ಲಿ ನಾಯಕರ ಸಲಹೆ ಪಡೆಯಬೇಕಾದ ಆಗತ್ಯವಿಲ್ಲ."

"ಇದು ಸಣ್ಣ ವಿಷಯವೇ ?"

"ಅಲ್ಲವೇ ?"

"ಅಲ್ಲ. ಗುರುಗಳು ನಾಯಕರ ಪ್ರಜೆಗಳಾಗಿರುವ ಒಂದು ಮತದವರ ಗುರುಗಳು. ತಮ್ಮ ಗುರುಗಳಿಗೆ ಅವಮರ್ಯಾದೆಯಾಯಿತೆಂದರೆ, ಆ ಮತದ ಅಷ್ಟೂ ಜನ ಕುಪಿತರಾಗುವರು. ಆ ಗುಂಪು ಬಹುಸಂಖ್ಯಾಕವೋ, ಅಲ್ಪಸಂಖ್ಯಾಕವೋ ಎನ್ನುವುದು ಮುಖ್ಯವಲ್ಲ, ಪ್ರಧಾನಿಗಳೇ. ಅವರು ಎಷ್ಟೇ ಮಂದಿಯಾದರೂ, ಪ್ರಜಾಕ್ರೋಧ ಅರಸೊತ್ತಿಗೆಯ ಅಡಿ

ಪಾಯಕ್ಕೆ ಹಾಕಿದ ಸುರಂಗ ಮದ್ದು. ಆದುದರಿಂದಲೇ ಇದು ಸಣ್ಣ ವಿಷಯವಲ್ಲ."

"ನಿಮಗೆ ಹಾಗೆ ತೋಚಬಹುದು."

"ಹೋಗಲಿ—ನಮಗೆ ತೋಚಿದ ಈ ಮಾತನ್ನು ನಾಯಕರಲ್ಲಿ ವಿನಂತಿ ಮಾಡಿಕೊಳ್ಳಬಹುದೇ ?"

"ಮಾಡಿಕೊಳ್ಳಬಹುದು, ಪ್ರಭುಗಳು ತಮ್ಮ ಭೇಟಿಗೆ ಅಪ್ಪಣೆ ದಯಪಾಲಿಸಿದರೆ. ಯಾರೂ ಅವರನ್ನು ಕಾಣಬಹುದು. ಅದಕ್ಕೆ ನಮ್ಮ ಅಭ್ಯಂತರವೇನೂ ಇಲ್ಲ. ಆದರೆ ಸ್ನೇಹಿತರು ಸ್ನೇಹಿತರಲ್ಲಿ ಮನಬಿಚ್ಚಿ ಮಾತನಾಡುವುದೇ ಮೇಲು ಎಂದಲ್ಲವೇ ನೀವು ಹೇಳಿದ್ದು—"

"ಅಹುದು."

"ಆ ಮಾತು ನಮಗೂ ಒಪ್ಪಿತವೇ. ಆದ್ದರಿಂದಲೇ ಹೇಳುತ್ತೇವೆ. ಈ ವಿಷಯದಲ್ಲಿ ನೀವು ನಾಯಕರನ್ನು ಕಾಣುವುದಾದರೆ, ಅದು ನಾಯಕರಲ್ಲಿ ನಮ್ಮ ವಿರುದ್ಧ ದೂರು ಒಯ್ದಂತಾಗುವುದು. ಅಷ್ಟು ಮಾತ್ರ ನೆನಪಿರಲಿ."

"ನಮ್ಮ ಬೇಡಿಕೆಗೆ ಅದೇ ಕೊನೆಯುತ್ತರವೇ ?"

"ಮತ್ತೇನಾದರೂ ಇದ್ದರೆ ಅಪ್ಪಣೆ ಕೊಡಿಸಬೇಕು, ತಮ್ಮ ಸೇವೆಗೆ ಸದಾ ಸಿದ್ಧವಾಗಿದ್ದೇನೆ."

"ತಮ್ಮ ಚಿತ್ತ, ಬರಲು ನಮಗಿನ್ನು ಅಪ್ಪಣೆಯೇ."

"ನಿಮ್ಮ ಹಿತಾಹಿತಗಳು ನಿಮಗೆ ತಿಳಿದಿದೆಯೆಂದು ನಾವು ನಂಬಿದ್ದೇವೆ. ಇದರ ಮೇಲೆ ತಮಗೆ ಸವಿಕಂಡಂತೆ ಮಾಡಬಹುದು. ತಿಳಿದವರಿಗೆ ಹೆಚ್ಚು ಹೇಳಲು ನಾವು ಶಕ್ತರಲ್ಲ. ಶರಣು."

—ಎಂದ ಮುದ್ದಣ್ಣ 'ನೀವಿನ್ನು ಹೊರಡಬಹುದು' ಎಂದು ಮಾತಿನ ಧ್ವನಿಯಲ್ಲೇ ಸೂಚಿಸಿ.

"ನಮಸ್ಕಾರ"

—ಎಂದು ಹೇಳಿ, ಪರಶುರಾಮಪ್ಪನೂ, ಭರಮಣ್ಣನೂ ಪ್ರಧಾನಿಗಳ ಚಾವಡಿಯಿಂದ ಹೊರಗೆ ಹೋದರು. ಅವರು ಅಂಗಳವನ್ನು ದಾಟಿ ಹೋಗುವವರೆಗೂ ಸುಮ್ಮನೆ ಅವರತ್ತಲೇ ನೋಡುತ್ತಿದ್ದು ಮುದ್ದಣ್ಣ

ಚಪ್ಪಾಳೆತಟ್ಟಿ 'ರಾಯಣ್ಣ' ಎಂದು ಕೂಗಿದ. ಆ ಕೂಗಿಗೇ ಕಾದಿದ್ದ ರಾಯಣ್ಣ 'ಏನು' ಎಂದು ಕೇಳಿದ.

"ಪರಶುರಾಮಪ್ಪ, ಭರಮಣ್ಣ ಬಂದದ್ದು ಏಕೆಂದು ತಿಳಿಯಿತೇ ?"

"ತಿಳಿಯಿತು."

"ಅವರೀಗ ನಾಯಕರನ್ನು ಕಾಣಲು ಹೊರಟಿದ್ದಾರೆ."

"ಅದೂ ತಿಳಿಯಿತು, ಹೋಗಲಿ. ಅರಮನೆಯ ಬಾಗಿಲು ನೋಡಿ ಕೊಂಡು ಹಿಂದಿರುಗಬೇಕಾಗುತ್ತದೆ."

"ಇರಬಹುದು. ಅದೂ ನನಗೆ ಗೊತ್ತು. ಆದರೆ ಅವರು ಅರ ಮನೆಯ ಬಾಗಿಲ ಬಳಿಯೂ ಹೋಗಕೂಡದು. ಅರಮನೆಯ ಇದಿರು ಯಾವ ಹಗರಣವೂ ನಡೆಯಕೂಡದು."

"ಹಾಗಾದರೆ—"

—ಮುದ್ದಣ್ಣನ ಅಪ್ಪಣೆಯನ್ನು ನೆರವೇರಿಸಲು ಸಿದ್ಧನಾಗಿ ನಿಂತ ರಾಯಣ್ಣ. ಮುದ್ದಣ್ಣ ತನ್ನ ಬೇಟೆಯ ನಾಯಿಯಂತೆಯೇ ತನ್ನ ಆಜ್ಞೆ ಯನ್ನು ನೆರವೇರಿಸಲು ಸಿದ್ಧವಾಗಿನಿಂತ ರಾಯಣ್ಣನ ಮೊಗವನ್ನು ದಿಟ್ಟಿಸಿ ನೋಡಿ, ನಸುನಕ್ಕ—

"ಅವರು ಅರಮನೆಯ ಬಳಿ ಹೋಗಬಾರದು" ಎಂದ.

"ಅಂದರೆ—"

"ಅವರು ಅರಮನೆಗೆ ಹೋಗುವ ಪ್ರಯತ್ನ ಮಾಡಿದರೆ ದಾರಿ ಯಲ್ಲೇ—"

"ದಾರಿಯಲ್ಲೇ ಅವರನ್ನು ಹಿಡಿಸಿ—"

—ಎಂದು ತನ್ನ ಕೈಬೆರಳಿನಿಂದ ಕತ್ತನ್ನು ಸೂಚಿಸಿ ಮಾತನ್ನು ಮುಗಿಸಿದ ರಾಯಣ್ಣ.

"ಊಹೂ. ಸದ್ಯಕ್ಕೆ ಅಷ್ಟುದೂರ ಹೋಗಬೇಕಾಗಿಲ್ಲ. ಒಂದು ದಿನಕ್ಕೆ ಒಂದು ಸಾವು ಸಾಕು ಅಲ್ಲವೇ !"

"ರಾಯಣ್ಣನ ಸೂಚನೆಗೆ ತನ್ನ ಮೆಚ್ಚುಗೆಯನ್ನು ಸೂಚಿಸಿಯೂ, 'ಅದೀಗ ಬೇಡ, ಅದು ಯಾವಾಗ ಬೇಕಾದರೂ ಮಾಡಬಹುದಾದ ನಮ್ಮ ವಶದಲ್ಲೇ ಇರುವ ಕೆಲಸ' ಎಂಬುದನ್ನು ಧ್ವನಿಯಿಂದ ಸೂಚಿಸಿ, ಹೇಳಿದ ಮುದ್ದಣ್ಣ.

"ಹಾಗಾದರೆ—"

"ಪರಶುರಾಮಪ್ಪ, ಭರಮಣ್ಣ ಏನು ಮಾಡುತ್ತಾರೆಂಬುದರ ಮೇಲೆ ಕಣ್ಣಿರಲಿ. ಅವರು ತಮ್ಮ ಹಟವನ್ನೇ ಮುಂದುವರಿಸಿದರೆ, ಸೆರೆಹಿಡಿಸಿ, ಹುಲಿಗೊಂದಿಯ ಹಳ್ಳದ ಬಳಿಯ ನೆಲಮನೆಯಲ್ಲಿ ಇಡಿಸು. ಮುಂದೆ ಹೇಗೆ ಅಗತ್ಯವೋ ಹಾಗೆ ಮಾಡಬಹುದು."

—ಎಂದ.

"ಅಪ್ಪಣೆ."

—ಎಂದು ಕೈಮುಗಿದು ಹೊರಟ ರಾಯಣ್ಣ. ಮುದ್ದಣ್ಣ ಅವನನ್ನೂ, ಬಾಗಿಲನ್ನೂ, ಬಾಗಿಲಾಚೆ ಕಾಣುವ ದುರ್ಗದ ಕೋಟೆಯನ್ನೂ, ಕೆಕ್ಕರಿಸಿ ನೋಡುತ್ತಾ ನಿಂತಿದ್ದ.

೧

ಲಿಂಗಣ್ಣನಾಯಕನ ಮನಸ್ಸಿಗೇಕೋ ಹಗಲಿನಿಂದ ನೆಮ್ಮದಿ ಇರಲಿಲ್ಲ. ಮಾಡಲು ಕೆಲಸವೇನೂ ಇಲ್ಲದೆ ಒಂಟಿಯಾಗಿ ಕುಳಿತ ಅವನ ಚಿತ್ತವನ್ನು, ಹೆಣಕ್ಕೆ ಎರಗುವ ಹದ್ದುಗಳ ಗುಂಪಿನಂತೆ, ಎಷ್ಟು ನಿವಾರಿಸಲೆತ್ನಿಸಿದರೂ ಬಿಡದೆ ಅಶುಭಯೋಚನೆಗಳು ಕವಿಯುತ್ತಿದ್ದವು. ಅದರಿಂದಾಗಿ ಅವನ ಮನಸ್ಸು ಕಿಡಿಕಿಡಿಯಾಗಿತ್ತು. ಅವನ ಮನಸ್ಸಿನಂತೆಯೇ ಅರಮನೆಯಲ್ಲಿಯೇ ಏನೋ ಒಂದು ಬಗೆಯ ಹೊಸದಾದ, ಅಶುಭವಾದ ನೆರಳು ಸುಳಿಯುತ್ತಿರುವಂತಿತ್ತು. ಎಲ್ಲಿ ನೋಡಿದರೂ ಹಳೆಯ ಮುಖಗಳೊಂದೂ ಕಾಣದೆ, ಎಲ್ಲೆಡೆಯಲ್ಲೂ ಹೊಸ ಮುಖಗಳೇ ಕಾಣುತ್ತಿದ್ದವು. ಅಲ್ಲದೆ ದಿನಕ್ಕಿಂತ ಅರಮನೆಯಲ್ಲಿ ಕಾವಲು ಭಟರ ಸಂಖ್ಯೆ ಹೆಚ್ಚಿದಂತಿತ್ತು. ದಾಸ, ದಾಸಿಯರಿಗಿಂತ ಹೆಚ್ಚಾಗಿ ಸೈನಿಕರೇ ಕಾಣುತ್ತಿದ್ದರು. ಅವನ ಸಜ್ಜೆ ಊಳಿಗಕ್ಕೂ ಹಿಂದೆ ದಿನವೂ ಬರುತ್ತಿದ್ದ ದಾಸಿ ಬರದೆ ಹೊಸಬಳೊಬ್ಬಳು ಬಂದಿದ್ದಳು. ಆಕೆಯೂ ನಾಯಕನನ್ನು ನೋಡುವ ರೀತಿಯೂ ವಿಚಿತ್ರವಾಗಿತ್ತು. ಆ ನೋಟ ಗೌರವದ ನೋಟವಷ್ಟೇ ಆಗದೆ, ಬೋನಿನಲ್ಲಿರುವ ಹಿಂಸ್ರ ಪಶುವಿನೊಂದಿಗೆ ವ್ಯವಹರಿಸಬೇಕಾಗಿ ಬಂದಾಗ ಇರುವ ಒಂದು ಬಗೆಯ ಭೀತಿಮಿಶ್ರವಾದ ಎಚ್ಚರಿಕೆಯ ನೋಟವಾಗಿತ್ತು. ಹೀಗೇಕೆ ಎಂದು ಆಶ್ಚರ್ಯವಾಯಿತು, ನಾಯಕನಿಗೆ. ಅವಳನ್ನೇ ಕೇಳಿದ:

"ದಿನವೂ ಬರುತ್ತಿದ್ದಾಕೆ ಇಂದೆಲ್ಲಿ?"

—ನಾಯಕರ ಮಾತು ಕೇಳಿ ಆಕೆಯನ್ನು ದಿಗ್ಗನೆ ಭೀತಿಕವಿದು, ನಾಯಕರ ಮಾತಿಗೆ ಉತ್ತರಕೊಡದೆ, ಗರಬಡಿದವಳಂತೆ ನಿಂತಲ್ಲಿಯೇ ನಿಂತು ಅತ್ತಿತ್ತ ನೋಡತೊಡಗಿದಳು. ಅವಳ ಭೀತಿ ನಾಯಕನಿಗೂ ಅರ್ಥವಾಯಿತು,

"ನಮ್ಮೊಡನೆ ಮಾತನಾಡಲು ಅಷ್ಟು ಭಯಬೇಡ."

"ನಮ್ಮನ್ನು ಏನೂ ಕೇಳಬೇಡಿ ಪ್ರಭು. ನಿಮ್ಮೊಂದಿಗೆ ನಾವು ಮಾತನಾಡುತ್ತೇವೆ ಎಂದು ತಿಳಿದರೆ ನಮ್ಮ ತಲೆ ಉಳಿಯುವುದಿಲ್ಲ."

—ಭೀತಿಯಲ್ಲಿ ಆರ್ತಳಾಗಿ, ಗಂಟಲು ದಾಟಿ ಆಚೆಯೇ ಬರದ ಪಿಸುದನಿಯಲ್ಲಿ ಅಂಗಲಾಚಿ ಬೇಡಿದಳು ದಾಸಿ. ಅವಳ ಭೀತಿಯನ್ನು ಕಂಡು ನಾಯಕನಿಗೆ ಅತ್ಯಂತ ಆಶ್ಚರ್ಯವಾಯಿತು. ಆ ಆಶ್ಚರ್ಯ ದಲ್ಲಿಯೇ ಕೇಳಿದ—

"ಏಕೆ?"

"ಕಾರ್ಯಭಾರಿಗಳ ಅಪ್ಪಣೆ."

"ನಮ್ಮೊಂದಿಗೆ ಅರಮನೆಯ ಊಳಿಗದವರೂ ಮಾತನಾಡಕೂಡ ದೆಂದು ಕಾರ್ಯಭಾರಿಗಳ ಅಪ್ಪಣೆಯೇ?"

ಆ ಮಾತಿಗೆ ಮಾತಿನ ಉತ್ತರಕೊಡದೆ ದಾಸಿ ಅಹುದು ಎಂದು ತಲೆ ಸನ್ನೆಯಿಂದಲೇ ಸೂಚಿಸಿ, ತನ್ನನ್ನು ಮನ್ನಿಸಬೇಕು ಎಂದು ಬೇಡುವಂತೆ ಅವನತ್ತ ನೋಟವನ್ನು ಸುಳಿಸಿ, ಬಾಗಿಲ ಬಳಿ ಯಾರು ನಿಂತಿರುವರೋ ಎಂದು, ಬಿಲದಲ್ಲಿ ಅವಿತ ಸಣ್ಣ ಪ್ರಾಣಿ ಹೆದರಿ ಹೊರಗೆ ನೋಡುವಂತೆ ಒಮ್ಮೆ ಇಣುಕಿ ನೋಡಿದಳು. ಒಂದೇ ಓಟಕ್ಕೆ ಕೋಣೆಯಿಂದಾಚೆಗೆ ಓಡಿ ದಳು. ಅದನ್ನು ಕಂಡು ನಾಯಕನ ಮೈಯಲ್ಲಿ ಒಮ್ಮೆಲೇ ಸಿಟ್ಟು ಕವಿದು ಬಂದಿತು. ತನ್ನೊಡನೆ ಅರಮನೆಯ ದಾಸಿಯರೂ ಮಾತನಾಡ ಬಾರದೆಂದು ಅಪ್ಪಣೆ ಮಾಡುವಷ್ಟು ಸೊಕ್ಕೇ ಈ ಕಾರ್ಯಭಾರಿಗೆ ಎಂಬ ಕ್ರೋಧದ ಜೊತೆಗೆ, ದಾಸಿಯ ಆರ್ತಸ್ಥಿತಿಯನ್ನು ಕಂಡು ಕನಿಕರವೂ ಬೆರೆತು, ಸಿಟ್ಟನ್ನು ಬೆಳಸಿತು. ಆ ಸಿಟ್ಟಿನಲ್ಲೇ—

"ಯಾರಲ್ಲಿ?"

—ಎಂದು ಕೂಗಿದ.

ನಾಯಕರು ಎರಡು ಬಾರಿ ಕೂಗಿದ ಮೇಲೆ ಶಸ್ತ್ರ ಸಜ್ಜಿತನಾದ ಕಾವಲುಭಟನೊಬ್ಬ ಬಂದು, ಮುಜುರೆಯೊಪ್ಪಿಸಿ—

"ಏನಪ್ಪಣೆ ಪ್ರಭು?"

"ಕಾರ್ಯಭಾರಿಗಳು ಚಾವಡಿಯಲ್ಲಿದ್ದರೆ ಕೂಡಲೇ ಬರಲು ಹೇಳು. ಹಾಗೆಯೇ ಹೊರಕೆನಾಯಕರಿದ್ದರೆ ಕಳುಹಿಸು.

—ಎಂದ ಲಿಂಗಣ್ಣನಾಯಕ. ಆದರೆ ಕಾವಲಾಳು ನಾಯಕನ ಆಜ್ಞೆಯನ್ನು ಕೂಡಲೇ ಪಾಲಿಸದೆ, ಸುಮ್ಮನೆ ನಿಂತು ಅತ್ತಿತ್ತ ನೋಡ

ತೊಡಗಿದ. ಅದನ್ನು ಕಂಡು ನಾಯಕನಲ್ಲಿ ಹುಚ್ಚು ಕ್ರೋಧ, ಉನ್ಮತ್ತ ಪಶುವಿನಂತೆ ವಿಜೃಂಭಿಸಿ, ತನ್ನಾಜ್ಞೆಯನ್ನು ಪಾಲಿಸದ ಭಟನ ಮೇಲೆ ಮಿಂಚಿನ ವೇಗದಲ್ಲಿ ಹಾಯ್ದು, ಅವನ ಕೆನ್ನೆಗೆ ತಲೆಸುತ್ತುವಂತೆ ಅಪ್ಪಳಿಸಿ, ಅವನು ಆ ಏಟಿನ ಮತ್ತಿನಲ್ಲಿರುವಾಗಲೇ, ಅವನ ಸೊಂಟದಲ್ಲಿದ್ದ ಕತ್ತಿಯನ್ನೇ ಹಿರಿದುಕೊಂಡು, ಅಬ್ಬರಿಸಿ ಹೇಳಿದ—

"ನಮ್ಮಾಜ್ಞೆಯನ್ನು ಕೇಳಿಯೂ ಸುಮ್ಮನೆ ನಿಲ್ಲುವ ಸೊಕ್ಕೇ ಕುನ್ನಿ. ಇನ್ನೊಂದು ಗಳಿಗೆ ತಡಮಾಡಿದರೆ ನಿನ್ನ ತಲೆ ನೆಲಕ್ಕುರುಳುವುದು."

—ಎಂದ ಕತ್ತಿಯನ್ನೊಮ್ಮೆ ಗಾಳಿಯಲ್ಲಿ ಸುಯ್ಯನೆ ಸೆಳೆದು. ಅದನ್ನು ಕಂಡ ಭಟ ಜೀವಭೀತಿಯಿಂದ ಕಂಗಾಲಾಗಿ, ನಾಯಕರ ಕಾಲ ಮೇಲೆ ಬಿದ್ದು—

"ಪ್ರಭೋ—ಕ್ಷಮಿಸಬೇಕು."

ಎಂದು ಅಂಗಲಾಚಿದ.

"ಹೋಗು—ಕಾರ್ಯಭಾರಿಗಳಿಗೆ ನಮ್ಮ ಅಪ್ಪಣೆ ತಿಳಿಸಿ, ಹೊರಕೆ ನಾಯಕರನ್ನು ಕರೆ"

ಎಂದ. ಆ ಮಾತುಕೇಳಿ, ಭಟ ನಾಯಕರ ಆಜ್ಞೆಯನ್ನು ಜಾರಿ ಮಾಡಲು ಒದೆತಿಂದ ನಾಯಿಯಂತೆ ಓಡಿದ. ಅವನು ಹೋದ ಸ್ವಲ್ಪಹೊತ್ತಿನಲ್ಲಿಯೇ ಶಸ್ತ್ರಧಾರಿಯಾದ ಹೊರಕೆನಾಯಕ ಓಡುತ್ತಾ ಬಂದು—

"ಏನಪ್ಪಣೆ ಪ್ರಭು"

—ಎಂದು ಕೇಳಿದ.

"ಕೂಡಲೇ ಹೋಗಿ, ನಾವು ನಂಬಬಹುದಾದ ನಾಲ್ವರು ಭಟರೊಂದಿಗೆ ಬೇಗ ಬಂದು ಆ ತೆರೆಯ ಹಿಂದಿರಿ. ಅಗತ್ಯಬಿದ್ದರೆ ಕರೆಯುತ್ತೇನೆ."

"ಏಕೆ? ಏನಾಯಿತು ಪ್ರಭು?"

—ಭಯತುಂಬಿದ ಧ್ವನಿಯಲ್ಲಿ ಕೇಳಿದ ಹೊರಕೆನಾಯಕ.

"ಭಯಪಡುವಂಥದ್ದೇನೂ ಆಗಿಲ್ಲ. ಅಂಥ ಸಂದರ್ಭ ಬಂದರೆ ಇರಲಿ ಎಂದೇ ನಿಮಗೆ ಹೇಳಿ ಕಳುಹಿಸಿದ್ದು. ಈ ದಿನ ಅರಮನೆಯಲ್ಲಿ ಯಾರ ಮಾತು ನಡೆಯಬೇಕೋ ಇತ್ಯರ್ಥ ಮಾಡಬೇಕಾಗಿದೆ.

ಕಾರ್ಯಭಾರಿಗಳಿಗೆ ಹೇಳಿಕಳುಹಿಸಿದ್ದೇನೆ. ಅವರು ಬರುವುದರೊಳಗಾಗಿ ನೀನಿಲ್ಲಿ ಇರಬೇಕು."

—ಎಂದ ಲಿಂಗಣ್ಣನಾಯಕ. ಆ ಮಾತು ಕೇಳಿ ಹೊರಕೆನಾಯಕ ಮಿಂಚಿನ ವೇಗದಿಂದ ಓಡಿ, ತನ್ನ ಕಡೆಯ ಆರು ಜನ ಭಟರೊಂದಿಗೆ ಬಂದು ನಾಯಕನ ಅಪ್ಪಣೆಯಂತೆ ತೆರೆಯ ಹಿಂದೆ ನಿಂತ. ಲಿಂಗಣ್ಣ ನಾಯಕ ಕಾರ್ಯಭಾರಿ ಬರುವುದನ್ನೇ ಕಾಯುತ್ತಿದ್ದ.

ಅನತಿ ಕಾಲದಲ್ಲಿಯೇ ಅರಮನೆಯ ಕಾರ್ಯಭಾರಿಯಾದ ಚುಕ್ಕಣ್ಣ ಶಸ್ತ್ರಧಾರಿಯಾದ ಭಟನೊಬ್ಬನನ್ನು ಬೆಂಗಾವಲಾಗಿಟ್ಟುಕೊಂಡು ನಾಯಕ ನನ್ನು ನೋಡಲು ಬಂದ. ಒಳಗೆ ಬರುತ್ತಿದ್ದ ಹಾಗೆ ಕತ್ತಿ ಹಿರಿದು ನಿಂತ ನಾಯಕನನ್ನು ಕಂಡು, ಅವನ ಎದೆಯಲ್ಲೂ ದಿಗ್ಗನೆ ಭೀತಿ ಕವಿದು, ಸಂಶಯ ದಿಂದ ಕೋಣೆಯ ಸುತ್ತಲೂ ಕಣ್ಣಾಡಿಸಿ ನೋಡಿ, ಯಾರೂ ಇಲ್ಲವೆಂದು ತನ್ನ ಮನಸ್ಸಿಗೆ ನಂಬಿಕೆಮಾಡಿಕೊಂಡು, ನಾಯಕನಿಗೆ ಮುಜರೆ ಮಾಡಿ—

"ಬರಬೇಕೆಂದು ಮಹಾಸ್ವಾಮಿಯವರ ಅಪ್ಪಣೆಯಾಯಿತಂತೆ. ಸೇವಕನಿಂದ ಏನಾಗಬೇಕೋ ಅಪ್ಪಣೆಯಾಗಬೇಕು."

—ಎಂದ. ಅವನು ಒಳಗೆ ಬಂದ ಗಳಿಗೆಯಿಂದಲೇ ಚುಕ್ಕಣ್ಣನ ಮುಖವನ್ನು ಸೂಕ್ಷ್ಮವಾಗಿ ನೋಡುತ್ತಿದ್ದ ನಾಯಕ, ಅವನನ್ನು ಕಂಡ ಕೂಡಲೇ ಕವಿದುಬಂದ ಸಿಟ್ಟನ್ನು ಸಂತಯಿಸಿಕೊಂಡು, ಕೈಯಲ್ಲಿದ್ದ ಕತ್ತಿಯ ಮೇಲೆಯೇ ಎರಡು ಕೈಗಳನ್ನೂರಿ ನಿಂತು, ಚುಕ್ಕಣ್ಣನ ಮುಖವನ್ನೇ ನೋಡುತ್ತಾ—

"ಅರಮನೆಯಲ್ಲಿ ಕೆಲವರು ಊಳಿಗದವರ ಉದ್ಧಟತನ ಮೇರೆ ಮೀರಿದಂತಿದೆ ಕಾರ್ಯಭಾರಿಗಳೇ"—ಎಂದ.

"ಯಾರೊ, ಏನು ಮಾಡಿದರೋ ಅಪ್ಪಣೆಯಾಗಬೇಕು ಪ್ರಭು. ಅಂಥವನನ್ನು ಚಾವಟಿಯಿಂದ ಹೊಡೆಸಿ ಶಿಕ್ಷೆ ಮಾಡುತ್ತೇನೆ."

"ಉದ್ಧಟತನದಿಂದ ನಡೆಯುವವನಿಗೆ ಚಾವಟಿ ಏಟಿನ ಶಿಕ್ಷೆಯೇ ಸರಿಯಾದದ್ದು. ಅದೇ ಆಗಬೇಕು."

"ನಿಜ, ಪ್ರಭು. ತಪ್ಪಿಗೆ ತಕ್ಕ ಶಿಕ್ಷೆ ಅದು. ಪ್ರಭುಗಳಲ್ಲಿ ಯಾರು ಅವಿನಯದಿಂದ ನಡೆದರೋ ಹೇಳಬೇಕು."

ಚುಕ್ಕಣ್ಣನ ಮಾತು ಕೇಳಿ, ಒಂದು ಗಳಿಗೆ ಸುಮ್ಮನಿದ್ದು, ಅವನನ್ನು ಬೆಲೆಕಟ್ಟುವ ನೆವದಿಂದ ನೋಡುತ್ತಾ ಕೇಳಿದ ನಾಯಕ—

“ಅಪರಾಧಿ ಯಾರಾದರೂ ಶಿಕ್ಷೆ ಅದೇ ತಾನೇ ?”

“ಅಹುದು ಪ್ರಭು.”

“ಒಂದು ವೇಳೆ ನೀವೇ ಆ ಅಪರಾಧಿಗಳಾಗಿದ್ದರೋ—”

ಸುಳಿವು ಕೊಡದೆ ಚಾಟಿಯಿಂದ ಜಡಿಯುವಂತೆ ಕೇಳಿದ ನಾಯಕ. ಪಟಕ್ಕನೆ ಬಂದ ಆ ಪ್ರಶ್ನೆಯ ಆಘಾತಕ್ಕೆ ತತ್ತರಿಸಿ ಹೋದ ಚುಕ್ಕಣ್ಣ. ಆ ಮಾತು ಕೇಳಿ ಅವನ ಮುಖದ ರಕ್ತಬಸಿದು ಹೋಯಿತು. ಆದರೆ ಮರುಗಳಿಗೆಯೇ ಆ ಆಘಾತದಿಂದ ಸಾವರಿಸಿಕೊಂಡು—

“ಪ್ರಭುಗಳು ಸೇವಕನಲ್ಲಿ ವಿನೋದವಾಡುವಂತಿದೆ.”

—ಎಂದ ಇಲ್ಲದ ಒಣನಗೆ ನಗುತ್ತಾ.

“ನಿಮ್ಮೊಂದಿಗೆ ಸರಸವಾಡಲು ನಮಗೆ ವೇಳೆಯಿಲ್ಲ ಚುಕ್ಕಣ್ಣ.”

—ಸಿಟ್ಟಿನಲ್ಲಿ ಸಿಡಿದು ನಿಂತು ಹೇಳಿದ ಲಿಂಗಣ್ಣನಾಯಕ.

“ನನ್ನಿಂದ ಅಂಥ ಅಪರಾಧ ಏನಾಗಿದೆಯೋ ಪ್ರಭುಗಳು ಅಪ್ಪಣೆ ಮಾಡಬೇಕು. ಅದಕ್ಕೆ ತಕ್ಕಶಿಕ್ಷೆ ಅನುಭವಿಸಲು ಸೇವಕಸಿದ್ಧನಾಗಿದ್ದಾನೆ.”

“ಅರಮನೆಯ ಆಳುಗಳಿಗೆ ನಮ್ಮೊಂದಿಗೆ ಮಾತನಾಡಬಾರದು ಎಂದು ಅಪ್ಪಣೆಮಾಡಿದ್ದೀರಾ? ಚುಕ್ಕಣ್ಣ.”

—ಸಿಟ್ಟಿನಲ್ಲಿ ಹಲ್ಲುಕಡಿದು ಕೇಳಿದ.

“ಹಾಗೆಂದು ಯಾರಾದರೂ ಪ್ರಭುಗಳಲ್ಲಿ ತಪ್ಪು ನುಡಿದಿದ್ದರೆ, ಯಾರೆಂದು ಹೇಳಬೇಕು. ಯಾರು ಹೇಳಿದರೋ ಅವರನ್ನು ನನ್ನ ಇದುರಿಗೇ ಕರೆಸಿ ವಿಚಾರಣೆ ಮಾಡಬೇಕು, ಪ್ರಭು.”

“ಆ ಪಂಚಾಯಿತಿ, ದಶಾಯತಿಗಳ ಅಗತ್ಯವೇ ಇಲ್ಲ ಚುಕ್ಕಣ್ಣ. ಅಂಥ ಆಜ್ಞೆಯನ್ನು ಹೊರಡಿಸಬಹುದೆಂಬ ಉದ್ಧಟತನ ನಿಮಗಿದೆಯೆಂದು ನಾವು ಒಲ್ಲೆವು. ಇದೇ ಮೊದಲಲ್ಲ. ಈ ಹಿಂದೆಯೇ ನಾವು ಹಲವಾರು ಬಾರಿ ನಿಮ್ಮ ಉದ್ಧಟತನವನ್ನು ಅವಿನಯವನ್ನು ಕಂಡುಕೊಂಡಿದ್ದೇವೆ. ನಾಲ್ಕುದಿನ ಕಳೆದರೆ ನೀವಾಗಿಯೇ ಇದನ್ನು ಬಿಟ್ಟು ಇಲ್ಲಿ ಹೇಗೆ ನಡೆದುಕೊಳ್ಳಬೇಕೋ ಹಾಗೆ ನಡೆದುಕೊಳ್ಳುವಿರೆಂದರೆ, ದಿನದಿನಕ್ಕೆ ನಿಮ್ಮ ಉದ್ಧಟತನ ಮೇರೆ ಮೀರುತ್ತಾ ನಡೆದಿದೆ.”

—ಅರಳು ಹುರಿದಂತೆ ಪಟ ಪಟ ಮಾತನಾಡಿ ಹೇಳಿದ ನಾಯಕ. ಆ ಮಾತನ್ನು ಕೇಳಿ, ಬಿಟ್ಟು ಬಿಡದೆ ಎಡಬಲ ಕೆನ್ನೆಗಳಿಗೆ ಹೊಡೆದಂತಾಗಿ ಚುಕ್ಕಣ್ಣನ ಮುಖ ಕೆಂಪೇರಿತು. ಉಕ್ಕಿಬಂದ ಸಿಟ್ಟಿನಲ್ಲಿ ಹಲ್ಲು ಕೆಳತುಟಿಯನ್ನು ಕಚ್ಚಿತು. ಆದರೂ ಆ ಸಿಟ್ಟನ್ನು ತೋರಗೊಡದೆ—

"ಪ್ರಭುಗಳು ನನ್ನ ಮೇಲೆ ಬಹು ಭಾರಿ ಆರೋಪವನ್ನು ಮಾಡುತ್ತಿರಲಾಗಿದೆ. ನನ್ನಿಂದ ಅಂಥ ಕಾರ್ಯ ಏನಾಯಿತೆಂದು ಅಪ್ಪಣೆ ಮಾಡಬೇಕು."

—ಎಂದ, ಒಳಗಿನ ಸಿಟ್ಟನಿಂದ ನಸುಕಂಪಿಸುತ್ತಿರುವ ಧ್ವನಿಯಲ್ಲಿ.

"ಕಾರಣ ಹೇಳಬೇಕೇ? ತಮ್ಮ ಆಳುಗಳಿಗೆ ನಾಯಕರು ಕಾರಣ ಕೊಡಬೇಕಾದ ಆಗತ್ಯವಿಲ್ಲ. ಆದರೂ ಹೇಳುತ್ತಿದ್ದೇನೆ. ನಮ್ಮ ಸೆಜ್ಜೆಯ ದಾಸಿಯನ್ನು ಬದಲಾಯಿಸಲು ನಿಮಗಾರು ಹೇಳಿದರು."

"ಯಾರೂ ಹೇಳಲಿಲ್ಲ........

"ಯಾರೂ ಹೇಳದೆ ನೀವೇ ಮಾಡಿದಿರಿ. ಅಲ್ಲವೇ?" ಚುಕ್ಕಣ್ಣನ ಮಾತನ್ನು ನಡುವೆಯೇ ತಡೆದು ಕೇಳಿದ ನಾಯಕ—"ಅರಮನೆಯಲ್ಲಿ ನೀವು ಯಾರನ್ನೂ ಕೇಳದೆ, ಯಾರಿಗೂ ತಿಳಿಸದೆ ಏನು ಬೇಕಾದದ್ದು ಮಾಡಬಹುದು ಎಂದುಕೊಂಡಿರಾ? ಅರಮನೆಯಲ್ಲಿ ನೀವು ನಮ್ಮ ಆಜ್ಞೆಯನ್ನು ನಡೆಸುವ ಕಾರ್ಯಭಾರಿಗಳಷ್ಟೇ ಅಲ್ಲದೆ, ಸರ್ವಾಧಿಕಾರಿಗಳಲ್ಲ ಎಂಬುದನ್ನು ಮರೆತುಬಿಟ್ಟಂತೆ ಕಾಣುತ್ತದೆ. ಯಾರನ್ನೂ ಕೇಳಲಿಲ್ಲ.... ಏಕೆ ಬದಲಾಯಿಸಿದಿರಿ ಆವಳನ್ನು? ಏನು ಅಗತ್ಯವಿತ್ತು?"

"ದಾಸ ದಾಸಿಯರನ್ನು ಸೆಜ್ಜೆಗೆ ಬದಲಾಯಿಸುವುದು ಮಾಮೂಲು ವಿಷಯ. ಅಷ್ಟು ಅಲ್ಪವಿಷಯವನ್ನು ಪ್ರಭುಗಳ ಗಮನಕ್ಕೆ ತರಬೇಕು ಎಂಬುದು ನಮಗೆತಿಳಿದಿರಲಿಲ್ಲ. ಮುಂದೆ ಅಪ್ಪಣೆಯಾವಂತೆಮಾಡುತ್ತೇನೆ."

"ಮುಂದಿನ ಮಾತು ಹಾಗಿರಲಿ. ಅದು ನೀವು ಮುಂದೆಯೂ, ಕಾರ್ಯಾಭಾರಿಗಳಾಗಿಯೇ ಉಳಿದರೆ ಯೋಚಿಸುವ ಮಾತು. ಈಗ ಕೇಳುವಷ್ಟು ಪ್ರಶ್ನೆಗೆ ಉತ್ತರ ಕೊಡಿ. ಏಕೆ ಬದಲಾಯಿಸಿದಿರಿ."

"ಆಕೆ ನಡೆದುಕೊಳ್ಳುವ ರೀತಿಯಲ್ಲಿ ನಡೆದುಕೊಳ್ಳಲಿಲ್ಲವೆಂದು ದೂರು ಬಂದಿತ್ತು........"

"ಯಾರು ದೂರು ಕೊಟ್ಟರು?"

"ಇದು ಬಹಳ ಅಲ್ಪವಿಷಯ. ಆದುದರಿಂದ ದೂರು ಕೊಟ್ಟವರು ಯಾರೆಂಬುದು ನನಗೆ ನೆನಪಿಲ್ಲ. ಅಪ್ಪಣೆಯಾದರೆ ವಿಚಾರಿಸಿ ಹೇಳು ತ್ತೇನೆ."

"ಅದರ ಅಗತ್ಯವಿಲ್ಲ—ಆಕೆ ಎಲ್ಲಿ? ಯಾವ ಸಜ್ಜೆಯಲ್ಲಿ ಊಳಿಗ ದಲ್ಲಿದ್ದಾಳೆ? ಕರೆಯಿಸಿ. ಆಕೆಯನ್ನೇ ಕೇಳೋಣ—ಏನು ಅಪರಾಧ ಮಾಡಿದಳೋ ಎಂದು. ಹೇಗೂ ನಿಮ್ಮೊಂದಿಗೆ ಆಳನ್ನು ಕರೆತಂದಿದ್ದಿ ರಲ್ಲಾ, ಹೇಳಿಕಳುಹಿಸಿ....ಏಕೆ....ಏನು ಯೋಚನೆ ಮಾಡುತ್ತಿದ್ದೀರಿ ಚುಕ್ಕಣ್ಣ."

ಅನಿರೀಕ್ಷಿತವಾಗಿ ಒದಗಿಬಂದ ಈ ಪ್ರಶ್ನೆಗೆ ಏನು ಉತ್ತರಕೊಡ ಬೇಕೆಂಬುದು ಕೂಡಲೇ ತೋಚದೆ, ಎರಡು ಗಳಿಗೆ ಚಿಂತಿಸಿ ಹೇಳಿದ ಚುಕ್ಕಣ್ಣ—

"ಪ್ರಭುಗಳು ಮನ್ನಿಸಬೇಕು. ಆಕೆಯನ್ನು ನಾನು ಕರಸುವಂತಿಲ್ಲ."

"ಏಕೆ?"

"ಆಕೆ ಅರಮನೆಯಲ್ಲಿಲ್ಲ."

"ಊಳಿಗದಿಂದಲೇ ತೆಗೆದಿರಾ?"

"ಇಲ್ಲ."

"ಮತ್ತೆಲ್ಲಿ? ಆಕಾಶ ನೋಡಬೇಡಿ, ಚುಕ್ಕಣ್ಣ. ಕೇಳಿದ ಮಾತಿಗೆ ಬೇಗ ಉತ್ತರಕೊಡಿ. ಸುಮ್ಮನೆ ನಿಂತು ನಮ್ಮ ತಾಳ್ಮೆಯನ್ನು ಪರೀಕ್ಷಿಸ ಬೇಡಿ."

—ಎಂದ ಲಿಂಗಣ್ಣನಾಯಕ, ಕತ್ತಿಯನ್ನೆತ್ತಿ, ಎದೆಯ ಮೇಲಿಟ್ಟು ಕೊಂಡು, ಉತ್ತರಕೊಡುತ್ತಿದ್ದ ಹಾಗೆಯೇ ಅವನ ಮೇಲೆ ಹಾರಿಬೀಳುವವ ನಂತೆ ನೋಡುತ್ತಾ. ಆ ನೋಟವನ್ನು ಕಂಡು ಎದೆಯಲ್ಲಿ ಭಯಕವಿದರೂ ಕೂಡಲೇ ಉತ್ತರ ಹೇಳದೆ, ಹಿಂದೆ ಮುಂದೆ ಆಲೋಚಿಸಿ ಹೇಳಿದ ಚುಕ್ಕಣ್ಣ—

"ತಮ್ಮ ಪ್ರಶ್ನೆಗೆ ಉತ್ತರಕೊಡುವ ಶಕ್ತಿ ನನಗಿಲ್ಲ ಪ್ರಭು."

"ಮತ್ತಾರಿಗಿದೆ.?"

"ಪ್ರಧಾನಿಗಳಿಗೆ."

"ಪ್ರಧಾನಿಗಳಿಗೆ? ಏಕೆ-ಪ್ರಧಾನಿಗಳಿಗೂ ಈ ವಿಷಯಕ್ಕೂ ಏನು ಸಂಬಂಧ?"

"ಈ ದಾಸಿಯ ವಿಚಾರದಲ್ಲಿ ದೂರು ಬಂದಾಗ ಹೇಗೆ ನಡೆದು ಕೊಳ್ಳಬೇಕೆಂದು ಪ್ರಧಾನಿಗಳ ಸಲಹೆ ಕೇಳಿದೆವು. ಪ್ರಧಾನಿಗಳು ಆಕೆ ಯನ್ನು ಸೆರೆಯಲ್ಲಿಟ್ಟಿದ್ದಾರೆ. ಆದ್ದರಿಂದ ಆಕೆಯನ್ನು ಪ್ರಭುಗಳಿದಿರು ಕರಸುವ ಶಕ್ತಿ ನಮಗಿಲ್ಲ. ಪ್ರಭುಗಳು ಪ್ರಧಾನಿಗಳಿಗೇ ಅಪ್ಪಣೆಮಾಡ ಬೇಕು."

"ದಾಸಿಯನ್ನು ನಮಗೆ ತಿಳಿಯಿಸದೆ ಬದಲಾಯಿಸಿದಿರಿ—ಏನು ಮಾಡಬೇಕೆಂದು ಪ್ರಧಾನಿಗಳನ್ನು ಕೇಳಿದಿರಿ. ಅವರ ಅಪ್ಪಣೆಯಂತೆ ಆಕೆ ಯನ್ನು ಸೆರೆಗೆ ತಳ್ಳಿದಿರಿ. ಏಕೆ—ಅರಮನೆಯಲ್ಲಿ ನಾವಿರಲಿಲ್ಲವೇ? ಅರಮನೆಯ ವಿಷಯಕ್ಕೂ ಪ್ರಧಾನಿಗಳ ಅಪ್ಪಣೆಯೇ ಆಗಬೇಕೋ."

—ಖಡ್ಗದ ಹಿಡಿಯಮೇಲೆ ಮುಷ್ಟಿ ಬಿಗಿಯುತ್ತಿರಲು ಕರ್ಕಶವಾದ ಧ್ವನಿಯಲ್ಲಿ ಕೇಳಿದ ನಾಯಕ.

"ಅದು ನಮಗೆ ತಿಳಿಯದು ಪ್ರಭು. ಹಾಗೆ ಮಾಡಬೇಕೆಂದು ಪ್ರಧಾನಿಗಳ ಆಜ್ಞೆ.

"ಅರಮನೆಯ ವಿಷಯದಲ್ಲಿ ಪ್ರಧಾನಿಗಳ ಆಜ್ಞೆಯೇ-ನಮಗಾವು ದನ್ನೂ ತಿಳಿಸಬೇಕಾಗಿಲ್ಲ, ನಮ್ಮ ಅಪ್ಪಣೆ ಕೇಳಬೇಕಾಗಿಲ್ಲ ಎಂದು ಪ್ರಧಾನಿಗಳು ಅಜ್ಞೆ ಮಾಡಿದ್ದಾರೆಯೇ? ಇರಲಿ. ನಿಮ್ಮನ್ನು ಇಂದಿ ನಿಂದ ಕಾರ್ಯಭಾರಿ ಕೆಲಸದಿಂದ ತೆಗೆದುಹಾಕಿದೆ. ಕೂಡಲೇ ನಿಮ್ಮ ಬಳಿ ಇರುವ ಬೀಗದ ಕೈ, ಮುದ್ರೆಗಳನ್ನು ತಂದೊಪ್ಪಿಸಿ ಹೊರಡಿ. 'ಹೂ—ನಮ್ಮಿದಿರಿನಿಂದ ತೊಲಗಿ, ಬೇಗ ನಮ್ಮ ಅಪ್ಪಣೆ ಪಾಲಿಸಿ. ಹಾಗೆಯೇ ಸಂಜೆಯೊಳಗಾಗಿ ಆ ದಾಸಿ ನಮ್ಮ ಸಜ್ಜೆಯಲ್ಲಿರಬೇಕು. ಇಲ್ಲ ವಾದರೆ—ಉರುಳುವ ನಿಮ್ಮ ತಲೆಯನ್ನು ಪ್ರಧಾನಿಗಳೂ ಉಳಿಸಲಾರೆರು. ಏನು ನೋಡುತ್ತಿದ್ದೀರಿ?"

"ಪ್ರಭುಗಳು ಕ್ಷಮಿಸಬೇಕು-ಪ್ರಭುಗಳ ಆಜ್ಞೆಯನ್ನು ಪಾಲಿಸಲು ಸಾಧ್ಯವಿಲ್ಲ."

—ತನ್ನ ಮತ್ತು ನಾಯಕನ ನಡುವಿನ ದೂರವನ್ನು ದೃಷ್ಟಿಯಿಂದಲೇ ಅಳೆದು ನೋಡಿ, ತಾನೂ ಒರೆಯಲ್ಲಿದ್ದ ಖಡ್ಗದ ಹಿಡಿಯನ್ನು ಹಿಡಿದು ಹೇಳಿದ ಚುಕ್ಕಣ್ಣ.

"ಏನು—ನಮ್ಮ ಆಜ್ಞೆಯನ್ನು ಧಿಕ್ಕರಿಸುವಷ್ಟು ಉದ್ಧಟತನವೇ"

ಎಂದವನೇ ನಾಯಕ ತಟ್ಟನೆ, ಚುಕ್ಕಣ್ಣನ ಕೆನ್ನೆಗೆ ಹೊಡೆದು ಹೇಳಿದ–

"ಕುನ್ನಿ? ಇನ್ನೊಮ್ಮೆ ಎದುರು ಮಾತನಾಡಿದರೆ ತಲೆಯುರುಳೀತು ಎಚ್ಚರಿಕೆ."

ನಾಯಕ ಚುಕ್ಕಣ್ಣನ ಕೆನ್ನೆಗೆ ಹೊಡೆದ ಏಟಿನ ವೇಗಕ್ಕೆ ಅವನ ತಲೆಯ ಮೇಲಿದ್ದ ಪಾಗು ಅಷ್ಟು ದೂರ ಹಾರಿಬಿತ್ತು. ಆ ಏಟಿನ ಚುರುಕಿನಿಂದ ಕೆರಳಿದ ಚುಕ್ಕಣ್ಣ, ಒರೆಯಿಂದ ಕತ್ತಿಯನ್ನು ಹಿರಿದ. ಹಿರಿದ ಕತ್ತಿಯನ್ನು ಅವನು ಬೀಸುವುದರೊಳಗಾಗಿ, ಮತ್ತೊಂದು ಕತ್ತಿಯ ಏಟಿನಿಂದ, ಅವನ ಕೈಯಲ್ಲಿದ್ದ ಕತ್ತಿ ಅಷ್ಟು ದೂರ ಹಾರಿ ಬಿದ್ದು, ಇಬ್ಬರು ಬಲವಾದ ಆಳುಗಳು ಅವನ ಕೈಯನ್ನು, ವಜ್ರಮುಷ್ಟಿ ಯಿಂದ ಹಿಡಿದು ನಿಂತರು. ಅವನ ಬೆಂಗಾವಲಿಗೆ ಬಂದ ಭಟನೂ ಬಂಧಿತ ನಾಗಿದ್ದ. ಇದೇನಾಯಿತು; ತನ್ನನ್ನು ಹಿಡಿದವರು ಯಾರು ಎಂದು ಚುಕ್ಕಣ್ಣ ಬಲೆಗೆ ಬಿದ್ದ ಹಿಂಸ್ರಪಶುವಿನಂತೆ ಭೀತಿಕ್ರೋಧಮಿಶ್ರಿತವಾದ ಆಚ್ಚರಿಯಿಂದ ಅತ್ತಿತ್ತ ನೋಡುತ್ತಿರುವಾಗಲೇ ನಾಯಕ ಹೇಳಿದ—

"ಹೊರಕೆನಾಯಕ, ಕಾರ್ಯಭಾರಿಗಳ ಚಾವಡಿಗೆ ಹೋಗಿ, ಬೇಗ ಮುಪ್ಪೈಯ ಗುರಿಕಾರರಿಂದ, ಅವನ್ನು ತೆಗೆಸಿಕೊಂಡು ಬನ್ನಿ. ಹಾಗೆ ಕಾರ್ಯಭಾರಿಗಳನ್ನು ಸೈನಿಕರ ಕಾವಲಿನಲ್ಲಿ ಅರಮನೆಯಿಂದ ಆಚೆಗೆ ದಾಟಿಸಿ. ಚುಕ್ಕಣ್ಣ–ಇದು ಕಡೆಯಬಾರಿ ಹೇಳುತ್ತಿರುವುದು. ಅರಮನೆ ಯತ್ತ ನಿನ್ನ ನೆರಳೂ ಸುಳಿಯಕೂಡದು. ಹಾಗೆಯೇ ಆ ದಾಸಿಯ ಗತಿ ಏನಾಯಿತೆಂದೂ ವಿಚಾರಿಸುತ್ತೇವೆ. ಅವಳ ನೆತ್ತಿಯ ಕೂದಲು ಕೊಂಕಿದ್ದರೂ, ನಿನ್ನ ನೆತ್ತಿ ನೆಲಕ್ಕುರುಳುವುದು. ಇದು ಪ್ರಧಾನಿಗಳ ಆಜ್ಞೆಯಲ್ಲ. ನಾಯಕರ ಸುಗ್ರೀವಾಜ್ಞೆ. ನೆನಪಿರಲಿ. ಎಳೆದುಕೊಂಡು ಹೋಗಿ ಈ ಕುನ್ನಿಯನ್ನು ನಮ್ಮ ಕಣ್ಣಾಚೆಗೆ."

—ಎಂದು ಆಜ್ಞಾಪಿಸಿದ.

ಹೊರಕೆನಾಯಕನೊಂದಿಗೆ ಬಂದಿದ್ದ ಭಟರು ಚುಕ್ಕಣ್ಣನನ್ನು, ಅವನ ಬೆಂಗಾವಲಿಗೆ ಬಂದ ಭಟನನ್ನು ಹೊರಗೆಳೆದುಕೊಂಡು ಹೋದ ಮೇಲೆ ನಾಯಕ ಹೊರಕೆನಾಯಕನಿಗೆ ಹೇಳಿದ—

"ಹೊರಕೆನಾಯಕ, ಇಂದಿನಿಂದ ನೀನು ಅರಮನೆಯ ಕಾರ್ಯ ಭಾರಿ. ಯಾರನ್ನು ಎಲ್ಲಿ, ಯಾವ ಊಳಿಗಕ್ಕೆ ಬೇಕೋ ನೇಮಿಸು. ಹಾಗೆಯೇ ಆ ದಾಸಿಯ ಗತಿ ಏನಾಯಿತೆಂದು ತಿಳಿದು ಬಂದು ಅಪ್ಪಣೆ ಮಾಡು. ಪರಶುರಾಮಪ್ಪನವರಿಗೂ, ಭರಮಣ್ಣನವರಿಗೂ ಇಂದು ಸಂಜೆ ಬರುವಂತೆ ಹೇಳಿಕಳುಹಿಸು."

"ಅಪ್ಪಣೆ ಪ್ರಭು. ಆದರೆ ಈ ಚುಕ್ಕಣ್ಣನನ್ನು ಏನು ಮಾಡುವುದು?"

"ಹಾಳಾಗಿ ಹೋಗಲಿ, ಬಿಟ್ಟುಬಿಡು"

"ಪ್ರಭುಗಳ ಇದಿರು ಮಾತಾಡುವೆನೆಂದು ಬಗೆಯಬಾರದು. ಇವ ನನ್ನು ಹೀಗೆ ಬಿಡಬಾರದು. ವಿಷಕ್ರಿಮಿ"

"ನಿಜ. ಅದು ವಿಷಕ್ರಿಮಿ ಎಂದು ನಾವೂ ಬಲ್ಲೆವು. ಆದಕ್ಕೇ ಹೋಗಲಿ ಎಂದು ಬಿಟ್ಟುದು. ಕ್ರಿಮಿ ರಕ್ತದಿಂದ ನಮಗೆ ಕೀರ್ತಿ ಬರುವು ದಿಲ್ಲ; ಕಲಂಕಬರುತ್ತದೆ. ನಾನಾಡಬೇಕಾದದ್ದು ಹುಲಿಯ ಬೇಟೆ; ಹೊರಕೆನಾಯಕ, ಇಂಥ ಇಲಿಗಳ ಬೇಟೆಯನ್ನಲ್ಲ. ಆ ಹುಲಿಯ ಬೇಟೆಗೆ ಸಿದ್ಧವಾಗಿರಿ."

"ಒಪ್ಪಿದೆ ಪ್ರಭು. ಆದರೆ ಆ ಹುಲಿಯ ಬೇಟೆ ಮುಗಿಯುವವರೆಗೂ ಇವನನ್ನು ಹೊರಗೆ ಬಿಡದೆ ಸೆರೆಯಲ್ಲಿಟ್ಟರೆ ಒಳಿತು. ಪ್ರಧಾನಿಗಳ ಗುಂಪಿನಲ್ಲಿ ಒಂದು ಕೈ ಕಡಮೆಯಾಗುತ್ತದೆ."

"ಇಂಥ ಇಲಿ ಎಲ್ಲಿದ್ದರೂ ಒಂದೇ. ಹೊರಕೆನಾಯಕ, ನಮಗೆ ಅದರ ಭೀತಿಯಿಲ್ಲ, ಅದಕ್ಕೆ ನಾವು ಹೆದರುತ್ತೇವೆ ಎಂದು ತೋರಿಸುವುದೂ ನಮಗೆ ಅಪಮಾನ. ಅರಮನೆಯಿಂದಾಚೆಗೆ ಒದ್ದು ಅಟ್ಟಿಬಿಡಿ. ಅಷ್ಟು ಅಪಮಾನ ಅವನಿಗೆ ಸಾಕು."

"ಪ್ರಭುಗಳ ಔದಾರ್ಯದಂತೆಯೇ, ವೀರವೂ ಉದಾತ್ತವಾದದ್ದು. ತಮಗೆ ಹೇಳುವ ಶಕ್ತಿ ನನಗಿಲ್ಲ, ಅಪ್ಪಣೆಯಾದಂತೆ ಮಾಡುತ್ತೇನೆ."

—ಎಂದು ನಾಯಕನಿಗೆ ಮುಜುರೆ ಮಾಡಿಹೋದ ಹೊರಕೆ ನಾಯುಕ.

## ೨

ತಿಮ್ಮಣ್ಣನಾಯಕನ ಕೆರೆಯಿಂದ ಕೊಂಚ ಕೆಳಭಾಗಕ್ಕೆ ಬಂದರೆ, ದುರ್ಗದಲ್ಲಿ ಅಧಿಕಾರಮಾಡುತ್ತಿದ್ದ ವಿಜಯನಗರದ ಅರಸರ ಪ್ರತಿನಿಧಿಗಳಾದ ಮಲ್ಲಪ್ಪ ಒಡೆಯರು, ಕೆಳದುರ್ಗಕ್ಕೆ, ಮುಖ್ಯವಾಗಿ ಬ್ರಾಹ್ಮಣರ ಅಗ್ರಹಾರಕ್ಕೆ ಜಲಾಶಯವಾಗಿ ನಿರ್ಮಿಸಿದ ಒಡ್ಡು ಇದೆ. ಅದರ ಏರಿಯ ಕೆಳಗೇ, ಸುಮಾರು ಆರಡಿ ಚದುರದ ಸಣ್ಣ ಕೊಳವೊಂದನ್ನು ಕಟ್ಟಿ, ಅದರ ಎದುರಿಗೆ ಪುಟ್ಟದಾದ, ಮಾಟವಾದ ಶಿವಾಲಯ ಕಟ್ಟಿ, ಅದರ ಸುತ್ತಲೂ ಸುಂದರವಾದ ಉದ್ಯಾನವನ್ನು ಬೆಳೆಸಿದ್ದಾರೆ. ಪುಷ್ಕರಣಿಯ ನಾಲ್ಕು ಮೂಲೆಗಳಲ್ಲೂ, ನೀರಿನಿಂದ ಕೊಂಚ ಮೇಲುಭಾಗದಲ್ಲಿ ಮಂಚದ ಕಾಲುಗಳನ್ನು ಇಡಲು ಅನುಕೂಲವಾಗುವಂಥ ಶಿಲಾಪೀಠಗಳನ್ನು ಕಟ್ಟಿದ್ದಾರೆ. ಬೇಸಿಗೆಯಲ್ಲಿ ಬೆಳುದಿಂಗಳ ಕಾಲದಲ್ಲಿ ನಾಯಕರು ಆ ಕೊಳದ ಮೇಲೆ ಬೆಳ್ಳಿಯ ಮಂಚಹಾಕಿಸಿಕೊಂಡು, ವಿಲಾಸವತಿಯರೊಂದಿಗೆ ಚಂದ್ರಿಕಾಮೋದವನ್ನು ಸವಿಯುತ್ತಾರೆ.

ಆ ಶೃಂಗಾರಸರಸಿಯ ಮೇಲೆ ಇಟ್ಟಿರುವ ಬೆಳ್ಳಿಯ ಮಂಚದ ಮೇಲೆ ಇಂದು ಪ್ರಧಾನಿ ಮುದ್ದಣ್ಣ ಮೈಚಾಚಿದ್ದಾನೆ. ಲಾವಣ್ಯವತಿಯರಾದ ದಾಸಿಯರಿಬ್ಬರು ಆತನ ಕಾಲು ಒತ್ತುತ್ತಿದ್ದಾರೆ. ಮತ್ತೊಬ್ಬಳು ತಲೆಯ ಬಳಿ ಕುಳಿತು, ಅವನು ಕೈಚಾಚಿದಾಗ, ಅವನ ಕೈಯಲಿರುವ ಬಟ್ಟಲಿಗೆ ಮದ್ಯವನ್ನು ಹಾಕುತ್ತಿದ್ದಾಳೆ. ದೇವಾಲಯದ ಮುಂದಿನ ರಂಗವೇದಿಕೆಯಲ್ಲಿ ವೀಣೆ ಹಿಡಿದ ಹೆಣ್ಣೊಬ್ಬಳು ಸಮಯೋಚಿತವಾದ ರಾಗದಲ್ಲಿ ಶೃಂಗಾರ ರಸೋದ್ರೇಕಕರವಾದ ಜಾವಡಿಯೊಂದನ್ನು, ಇನಿದಾದ ಧ್ವನಿಯಲ್ಲಿ ಹಾಡುತ್ತಿದ್ದಾಳೆ. ಬೆಳ್ಳಿಯ ಹೊಳಪಿನಂಥ ಬೆಳುದಿಂಗಳು, ಮಾದಕವಾದ ಗಾನ, ತಂಪುಗಾಳಿ, ಮದ್ಯಪಾನಗಳಲ್ಲಿ ಮುದ್ದಣ್ಣ ಮೈಮರೆತು ಅರೆಗಣ್ಣು ಮುಚ್ಚಿ, ಕಣ್ಣೆದುರಿಗೆ ಬೆಳುದಿಂಗಳಿನಲ್ಲಿ ಬೆಳ್ಳಿಯಲ್ಲಿ ಕಡೆದಿಟ್ಟಂತೆ ಕಾಣುವ ರಣಬತೇರಿ, ಕಹಳೆ ಬತೇರಿ, ಆ ಸುತ್ತಿನ ಕೋಟೆಸಾಲುಗಳನ್ನು

ನೋಡುತ್ತಾ ಮಲಗಿದ್ದ. ಬೆಳದಿಂಗಳು ಜಗತ್ತಿಗೇ ಶಾಂತಿಯಸ್ನಾನ ಮಾಡಿಸಿತ್ತಾದರೂ, ಮುದ್ದಣ್ಣನ ಮನಸ್ಸಿನಲ್ಲಿ ಮಾತ್ರ ಶಾಂತಿ ಇರಲಿಲ್ಲ. ಆ ಮಧ್ಯಾಹ್ನ ಚುಕ್ಕಣ್ಣನಿಂದ, ಲಿಂಗಣ್ಣನಾಯಕ ತಾನೇ ಸ್ವಾತಂತ್ರ್ಯ ವಹಿಸಿ, ಚುಕ್ಕಣ್ಣನನ್ನು ಕಾರ್ಯಭಾರಿ ಕೆಲಸದಿಂದ ಕಿತ್ತುಹಾಕಿ, ತನ್ನ ಕಡೆಯುವನೊಬ್ಬನಿಗೆ ಆ ಕೆಲಸವನ್ನು ಕೊಟ್ಟು, ಅರಮನೆಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡನೆಂಬುದನ್ನು ಕೇಳಿದಾಗಲಿಂದಲೂ ಅವನ ಚಿತ್ತ ಶಾಂತಿ ಎತ್ತಲೋ ಎಗರಿ ಹೋಗಿತ್ತು. ಚುಕ್ಕಣ್ಣನಿಗಾದ ಅಪಮಾನ ಬರಲಿರುವ ಸಮರದ ಮೊದಲ ಕಹಳೆ ಎಂಬುದು ಅವನಿಗೆ ಅರಿವಾಗಿತ್ತು. ಆದರೆ ದುರ್ಗದಲ್ಲಿ ಲಿಂಗಣ್ಣನಾಯಕನಿಗೆ ಬೆಂಬಲವಾಗಿ ನಿಲ್ಲಬಲ್ಲ ಪ್ರಬಲ ರಾದ ಪರಶುರಾಮಪ್ಪ, ಭರಮಣ್ಣರನ್ನು ಕೈಸೆರೆ ಹಿಡಿಸಿ ಸೆರೆಯಲ್ಲಿಟ್ಟದ್ದ ರಿಂದ, ಅವನಿಗೆ ಕೊಂಚ ಸಮಾಧಾನವಿತ್ತು. ಚುಕ್ಕಣ್ಣನಿಗಾದ ಅಪಮಾನ ದಿಂದ ಕುದಿದೆದ್ದ ತಮ್ಮಂದಿರಿಗೆ ಅದೇ ಮಾತು ಹೇಳಿದ್ದ—

"ರೆಕ್ಕೆ ಪುಕ್ಕ ಕತ್ತರಿಸಿದ ಈ ಹಕ್ಕಿ ಅಷ್ಟಿಷ್ಟು ಹಾರಾಡುವುದಾದರೆ ಹಾರಾಡಲಿ. ಅದರಿಂದ ಅಷ್ಟೇನೂ ಭಯವಿಲ್ಲ. ಯಾವ ಗಳಿಗೆಯಲ್ಲಿ ಬೇಕಾದರೂ ಅರಮನೆಯನ್ನು ಮತ್ತೆ ನಮ್ಮ ವಶಕ್ಕೆ ತಂದುಕೊಳ್ಳ ಬಹುದು."

"ಹಾಗಲ್ಲ ಅಣ್ಣ. ಈ ನಾಯಿ ಮೊದಲು ಹಲ್ಲು ಕಿರಿದಾಗಲೇ ಮುಸುಡಿಯ ಮೇಲೆ ಹೊಡೆತಬಿದ್ದರೆ ಮತ್ತೆಂದೂ ಹಲ್ಲು ಕಿರಿಯುವುದಿಲ್ಲ. ಅದು ಬಿಟ್ಟು, ಇರಲಿ ಎಂದು ಸದರಕೊಟ್ಟರೆ, ಇಂದು ನನ್ನ ಅಧಿಕಾರಕ್ಕೆ ಮುಳುಗುನೀರು ಬಂದಂತೆ, ನಾಳೆ ನಮ್ಮ ತಲೆಗೂ ಸಂಚಕಾರ ಬರ ಬಹುದು. ನೀವು ಇದನ್ನು ಈಗಲೇ ಇತ್ಯರ್ಥ ಮಾಡುವುದು ಒಳಿತು."

"ನಿಜ ಚುಕ್ಕಣ್ಣ—ಇತ್ಯರ್ಥಮಾಡುವ ಕಾಲ ಹತ್ತಿರ ಬಂದಿದೆ ಯೆಂದು ನಮಗೂ ಗೊತ್ತು. ಆದಕ್ಕೆ ಬೇಕಾಗುವ ಸಿದ್ಧತೆಗಳನ್ನು ಮಾಡು ವುದರಲ್ಲೇ ನಾನೂ ಇದ್ದೇನೆ. ರಂಗಪ್ಪನಾಯಕ ದುರ್ಗಕ್ಕೆ ಬರುವುದನ್ನೇ ಕಾಯುತ್ತಿದ್ದೇನೆ. ಅವನು ಬಂದರೆ, ಆ ಶಿಖಂಡಿಯನ್ನು ಎದುರಿಗಿಟ್ಟು ಕೊಂಡು, ಈ ಭೀಷ್ಮವಧೆ ಮುಗಿಸಬಹುದು."

"ರಂಗಪ್ಪನಾಯಕ ಬರುವುದನ್ನು ಕಾದು ಕುಳಿತರಾಗದಣ್ಣ. ಆ

ಮೊದಲು ಅಧಿಕಾರ ನಮ್ಮ ಕೈಗೆ ಬಂದರೆ, ಆಮೇಲೆ ಹೇಗೆ ಸೂಕ್ತವೋ ಹಾಗೆ ಮಾಡಬಹುದು. ಚುಕ್ಕಣ್ಣನಿಗಾದ ಅಪಮಾನ, ನಾಯಕರೊಂದಿಗೆ ವ್ಯಾಜ್ಯತೆಗೆಯಲು ನಮಗೆ ಸರಿಯಾದ ನೆಪವನ್ನೊದಗಿಸಿದೆ. ಮತ್ತೆ ಇಂಥ ಸಂದರ್ಭ ಸಿಗದೆ ಹೋಗಬಹುದು."

– ರಾಯಣ್ಣ ಚುಕ್ಕಣ್ಣನ ಪರ ವಹಿಸಿ ಹೇಳಿದ.

"ಇದೇ ಸರಿಯಾದ ಸಂದರ್ಭವೆಂದೇ ನಿನ್ನ ಅಭಿಪ್ರಾಯವೇ ?"

"ಅಲ್ಲವೇ ?"

"ನನ್ನ ದೃಷ್ಟಿಯಲ್ಲಿ ಅಲ್ಲ. ಚುಕ್ಕಣ್ಣನನ್ನು ಅಧಿಕಾರದಿಂದ ತೆಗೆದದ್ದು, ನಮ್ಮಿಂದ ದುರ್ಗದ ಅಧಿಕಾರವನ್ನು ಕಸಿದುಕೊಳ್ಳುವ ಕೆಲಸದಲ್ಲಿ ಮೊದಲ ಹೆಜ್ಜೆ ಎಂದು ತಿಳಿದಿದ್ದಾರೆ. ನನ್ನ ದೃಷ್ಟಿಯಲ್ಲಿ, ಇದು ನಾಯಕನನ್ನು ಪಟ್ಟದಿಂದ ತಳ್ಳಲು ಮೊದಲ ಹೆಜ್ಜೆ. ಮುಂದಿನ ಹೆಜ್ಜೆ ಹೇಗೆ ಇಡುತ್ತಾನೋ ನೋಡಿಕೊಂಡು, ಆಮೇಲೆ ನಾವು ಏಟು ಹಾಕುವುದು."

"ಅದಕ್ಕಾಗಿ ಎಷ್ಟು ದಿನ ಕಾಯುವುದು ? ತೋರಿಕೆಗಾದರೂ ಅವನಿಗೆ ಪ್ರಭು, ಮಹಾಸ್ವಾಮಿ ಎನ್ನುವುದಕ್ಕೂ ನನ್ನ ಮೈ ಉರಿಯುತ್ತದೆ."

—ಚುಕ್ಕಣ್ಣ ರಂಗೇರಿ ಹೇಳಿದ.

"ಇನ್ನೂ ಆ ರಂಗಪ್ಪನಿಲ್ಲವಲ್ಲ, ಸುಮ್ಮನಿರು. ಅಷ್ಟು ಅವಸರದಲ್ಲಿ ಮಾಡುವ ಕೆಲಸವಲ್ಲ ಅದು. ಹಾಕಿದ ಏಟಿಗೆ ಬೇಟೆ ಮುಗಿಯಲೇ ಬೇಕು. ಅದು ಕೊಂಚ ಗುರಿತಪ್ಪಿದರೂ ನಮ್ಮ ನೆತ್ತಿ ಉಳಿಯುವುದಿಲ್ಲ ದಳವಾಯಿ ಭರಮಣ್ಣ ಸೆರೆಯಲ್ಲಿರುವುದರಿಂದ ನಮಗಷ್ಟು ಭಯವಿಲ್ಲ. ಆತನೊಬ್ಬನೇ ಹೆದರಬೇಕಾದ ಎದಿರಾಳಿ."

"ಪರಶುರಾಮಪ್ಪ?"

"ಹ್ಚ! ಅದೊಂದು ವೇದಾಂತದ ಗೊಡ್ಡು, ಅದರ ಚಿಂತೆ ನನಗಿಲ್ಲ."

—ಎಂದು ಮುದ್ದಣ್ಣ, ಪರಶುರಾಮಪ್ಪ ತನ್ನ ದೃಷ್ಟಿಯಲ್ಲಿ ಮನುಷ್ಯನೇ ಅಲ್ಲ, ಹುಳು ಎಂಬಷ್ಟು ತಾತ್ಸಾರದ ಧ್ವನಿಯಲ್ಲಿ ರಾಯಣ್ಣನಿಗೆ ಉತ್ತರಕೊಟ್ಟ.

"ಇರಬಹುದು. ಆದರೆ ಅವರನ್ನ ಎಷ್ಟುದಿನ ಸೆರೆಯಲ್ಲಿಡಲು ಸಾಧ್ಯ? ರಾಯಣ್ಣನ ಮಾತಿನಂತೆ ನಿನ್ನೆಯೇ ಅವರ ಕಥೆ ಮುಗಿಸಿಬಿಟ್ಟಿದ್ದರೆ ಚೆನ್ನಾಗಿತ್ತು.

—ಅದುವರೆಗೂ ಸುಮ್ಮನಿದ್ದ ಚಿಕ್ಕಣ್ಣ ಹೇಳಿದ.

"ತಲೆ ತೆಗೆದರೆ ತೆಗೆದವರು ನಾವೇ ಎಂದು ಬಹು ಬೇಗ ಗೊತ್ತಾಗುತ್ತದೆ. ಕೊಲೆಯನ್ನು ಮುಚ್ಚಿಡುವುದು ಕೊಲೆ ಮಾಡಿದಷ್ಟು ಸುಲಭವಲ್ಲ ಚಿಕ್ಕಣ್ಣ. ದೇಸಣ್ಣನ ಕೊಲೆಯನ್ನು ನಾನೇ ಕೈಯಾರ ಮಾಡಿದುದು ದುಡುಕಾಯಿತು. ಇಂದಿನ ಎಚ್ಚರ ಅಂದಿದ್ದರೆ ಬೇರೆ ರೀತಿ ಅದನ್ನು ಮುಗಿಸ ಬಹುದಾಗಿತ್ತು. ಅದೇನೋ ಹೇಗೋ ಆಯಿತು, ಹೋಯಿತು. ಆದರೆ ಮತ್ತೆ ಅಂಥ ತಪ್ಪು ಮಾಡಬಾರದು."

"ಅಂದರೆ–ಅವರು ಬದುಕಿರಲೇಬೇಕೆಂದು ನಿಮ್ಮ ಅಭಿಪ್ರಾಯವೇ?"

"ಅವರು ಬದುಕಿದ್ದು, ನಾವೂ ಬದುಕಿರಲು ಸಾಧ್ಯವೇ, ಚಿಕ್ಕಣ್ಣ? ಅದು ಸಾಧ್ಯವೇ ಇಲ್ಲದ ಮಾತು."

"ಮತ್ತೆ?"

"ಅವರು ಸಾಯಬೇಕು, ಆದರೆ ಆ ದೂರು ನಮ್ಮ ಮೇಲೆ ಬರದ ರೀತಿಯಲ್ಲಿ ಸಾಯಬೇಕು. ಈಗ ಅವರನ್ನು ನಮ್ಮ ಕಡೆಯವರು ಹಿಡಿದ ವಿಚಾರ ಯಾರಿಗಾದರೂ ಗೊತ್ತಿದೆಯೇ ರಾಯಣ್ಣ ?"

"ಊಹು—ಭರಮಣ್ಣನ ಹೆಸರಿನಲ್ಲಿ ಪರಶುರಾಮಪ್ಪ. ಪರಶು ರಾಮಪ್ಪನ ಹೆಸರಿನಲ್ಲಿ ಭರಮಣ್ಣನನ್ನು ಕರಸಿ, ನಡುರಾತ್ರಿಯಲ್ಲೇ ಹಿಡಿದು ಅವರನ್ನು ಸಾಗಿಸಿರುವುದರಿಂದ ನಮ್ಮ ಮೇಲೆ ಯಾರಿಗೂ ಅನುಮಾನ ಬರಲು ಕಾರಣವಿಲ್ಲ. ಬಹಳ ಸೊಗಸಾಗಿ ಸಾಧಿಸಿದೆ ಆ ಕೆಲಸವನ್ನು."

—ತನ್ನ ಜಾಣ್ಮೆಯನ್ನು ತಾನೇ ಮೆಚ್ಚಿಕೊಳ್ಳುತ್ತ ಹೇಳಿದ ರಾಯಣ್ಣ.

"ಅದೇನೋ ಸರಿಯಾಯಿತು. ಅವರ ಉಸ್ತುವಾರಿಗೆ ಯಾರನ್ನು ನೇಮಿಸಿದ್ದೀಯ."

"ಗುರಿಕಾರ ಚಿನ್ನಯ್ಯನನ್ನು."

"ಅವನನ್ನು ನಂಬಬಹುದೇ ?"

"ನಂಬಬಾರದಂಥ ಕೆಲಸವನ್ನು ಇಂದಿನವರೆಗೂ ಅವನೇನೂ ಮಾಡಿಲ್ಲ. ಅಲ್ಲದೆ ಅವನ ಮೇಲೆ ನಮ್ಮ ಕಡೆಯವನೊಬ್ಬನನ್ನು ಉಸ್ತುವಾರಿಗಿಟ್ಟಿದ್ದೇನೆ."

"ಅದು ಸರಿಯಾದ ದಾರಿ. ಹೇಗೋ-ಕೈಗೆ ಸಿಕ್ಕಿ ಬೇಟೆ ಕೈಯಿಂದ ತಪ್ಪಿಸಿಕೊಂಡು ಹೋಗಬಾರದು; ಅಷ್ಟೆ."

"ಅದರ ಜವಾಬುದಾರಿ ನನಗಿರಲಿ. ಕೊಂಚ ಮಿಸುಗಿದರೆ ಅವರು ಹುಟ್ಟಿರಲಿಲ್ಲ ಎನ್ನಿಸಿ ಬಿಡುತ್ತೇನೆ. ಇರುವುದೆಲ್ಲಾ ಇದ್ದಕ್ಕಿದ್ದ ಹಾಗೇ ಎಗರಾಡಲಾರಂಭಿಸಿರುವ ನಾಯಕನದೊಂದೇ."

"ಅವನು ಎಗರಾಡಬೇಕು, ಕೆರಳಬೇಕು—ಆಗಲೇ ಅವನನ್ನು ಮುಗಿಸಲು ಸರಿಯಾದ ಪಟ್ಟು ನಮಗೆ ಸಿಗಬೇಕು. ಗಾಯಗೊಂಡು ಗವಿಸೇರಿದ ಹುಲಿಯನ್ನು ಕೆರಳಿಸಿ ಹೊರಗೆ ತಂದು ಬೇಟೆಯಾಡುವಂತೆ ನಾಯಕನ ಬೇಟೆಯಾಡಬೇಕು. ರಾಯಣ್ಣ, ಆದರೆ ಈ ಬಾರಿ ಸೇನೆ ಸಂಪೂರ್ಣವಾಗಿ ನನ್ನ ಮಾತು ಕೇಳುವಂತಿರಬೇಕು."

"ಅದಕ್ಕೆ ಬೇಕಾದ ಬಂದೋಬಸ್ತನ್ನೆಲ್ಲಾ ನಾವು ಮಾಡಿದ್ದೇವೆ."

—ಎಂದ ಚಿಕ್ಕಣ್ಣ.

"ಕೈ ಎತ್ತಿದ ಕೂಡಲೇ—ಹೇಳಿದ ಕೆಲಸ ಮಾಡಲು ಸಿದ್ಧವಾಗಿರ ಬೇಕು."

"ಹಾಗಿದೆ."

"ಸರಿ-ಹಾಗಾದರೆ ಸಮಾಧಾನವಾಗಿರು. ಉಳಿದ ಚಿಂತೆ ನನ ಗಿರಲಿ."

—ಎಂದು ಮುದ್ದಣ್ಣ ತನ್ನ ಕೆರಳಿದ ಸೋದರರನ್ನು ಸಮಾಧಾನ ಮಾಡಿ ಬಂದಿದ್ದ. ಆದರೆ ಉಳಿದವರಿಗೆ ಸಮಾಧಾನ ಹೇಳಿದ ಅವನ ಮನಸ್ಸಿಗೇ ಸಮಾಧಾನವಿರಲಿಲ್ಲ, ಏನೇನೋ ಅಂದಾಜುಗಳು. ಒಂದನ್ನು ಮುಚ್ಚಿದರೆ ನೂರು, ಕೆಣಕಿದ ಮುಳ್ಳು ಹಂದಿಯ ಮೈಯ ಕಣೆಗಳಂತೆ ಎದ್ದು ನಿಂತು, ಅವನನ್ನು ಅಶಾಂತಿಯಿಂದ ಇರಿಯುತ್ತಿದ್ದವು. ಈ ಅಶಾಂತಿಯನ್ನು ಮರೆಯಲೆಂದು ಮೇಲಿಂದ ಮೇಲೆ ಮದ್ಯಪಾನ ಮಾಡುತ್ತ, ಅದರಿಂದ ಅವನ ಅಶಾಂತಿ ತೀರದೆ, ಮೈಯ ಮತ್ತಿನಂತೆ, ಮನಸ್ಸಿನ ಅಶಾಂತಿಯೂ ಬಲಿದು ಉಮ್ಮಳಿಸುತ್ತಿದ್ದ.

ಮನಸ್ಸಿನ ಬೇಗೆಯಲ್ಲಿ ಮುಳ್ಳಿನ ಮೇಲೆ ಮಲಗಿದಂತೆ ಮುದ್ದಣ್ಣ ಚಡಪಡಿಸುತ್ತಿರುವಾಗಲೇ, ಉದ್ಯಾನದ ಹೊರ ಬಾಗಿಲಲ್ಲಿದ್ದ ಕಾವಲಿನ

ವನು ಬಂದು ಕೈಮುಗಿದ. ಅವನನ್ನು ನೋಡಿ, ಮುದ್ದಣ್ಣನ ಅಶಾಂತಿ ಸಿಟ್ಟಾಗಿ ಹೊರಹೊಮ್ಮಿತು. ಕವಕ್ಕನೆ ರೇಗಿ ಕೇಳಿದ.

"ಏನು ಬಂದೆ?"

"ತಮ್ಮನ್ನು ಅವಸರವಾಗಿ ಬರಹೇಳಿ ನಾಯಕರು ಗುರಿಕಾರರನ್ನು ಕಳುಹಿಸಿದ್ದಾರೆ.

"ಈಗ ನಮ್ಮನ್ನು ಕಾಣಲು ಸಾಧ್ಯವಿಲ್ಲ. ಹಗಲು ಬರಬಹುದು ಎಂದು ಹೇಳಲಿಲ್ಲವೇ ಗುರಿಕಾರನಿಗೆ! ಎಷ್ಟು ಬಾರಿ ಹೇಳಬೇಕು ನಿನಗೆ– ಇಲ್ಲಿ ನಾವು ಯಾರನ್ನೂ ನೋಡುವುದಿಲ್ಲ, ಯಾರೂ ಇಲ್ಲಿಗೆ ನಮ್ಮನ್ನು ಕಾಣಲು ಬರಕೂಡದು ಎಂದು."

"ಕ್ಷಮಿಸಬೇಕು ಬುದ್ಧಿ. ಗುರಿಕಾರನಿಗೆ ಆ ಮಾತು ಹೇಳಿದೆ. ಆದರೆ ಅವರು ಕೇಳಲಿಲ್ಲ."

"ಏನು? ಅಷ್ಟು ಸೊಕ್ಕು ಬಂತೇ ಅವರಿಗೂ."

"ಅವನಿಗೆ ಸೊಕ್ಕೆಲ್ಲಿ ಬುದ್ಧಿ? ನಾಯಕರು ಹಾಗೆ ಹೇಳಿಕಳಿಸವರೆ."

"ಏನೆಂದು?"

"ಬುದ್ಧಿಯವರಿಗೆ ಕೂಡಲೆ ಅರಮನೆಗೆ ಹೋಗಲು ಬಿಡುವಿಲ್ಲದೆ ಹೋದರೆ ನಾಯಕರೇ ಇಲ್ಲಿಗೆ ಬರುತ್ತಾರಂತೆ. ಏನು ಮಾಡುವುದು? ನಾಯಕರಿಗೆ ಏನು ಹೇಳುವುದು? ಬುದ್ಧಿಯವರನ್ನು ವಿಚಾರಿಸಿಕೊಂಡು ಬಾ ಎಂದರು ಗುರಿಕಾರರು. ಬುದ್ಧಿಯವರ ಅಪ್ಪಣೆಯಾದಂತೆ ತಿಳಿಸುತ್ತೇನೆ."

ಕಾವಲಿನವನು ಹೇಳಿದ ಮಾತನ್ನು ಕೇಳಿ ಮುದ್ದಣ್ಣನ ಮೆದುಳನ್ನು ಕವಿದಿದ್ದ ಮದ್ಯದ ಅಮಲು ಸರ್ರನೆ ಇಳಿದುಹೋಗಿ, ಅವನ ಬುದ್ಧಿ ಮತ್ತೆ ಚುರುಕಾಗಿ ಕೆಲಸಮಾಡಲಾರಂಭಿಸಿತು. ಅರಮನೆಯಿಂದ ಬಂದ ಈ ಅವಸರದ, ಕಡ್ಡಾಯದ ಕರೆಯ ಅರ್ಥ ಏನು? ರಾತ್ರಿಯಲ್ಲೇ ನೆತ್ತಿ ಹೋಗುವಂಥ ಕೆಲಸವೇನು? ಪರಶುರಾಮಪ್ಪ, ಭರಮಣ್ಣನವರನ್ನು ಸೆರೆಹಿಡಿದ ಸುದ್ದಿ ನಾಯಕನಿಗೆ ತಿಳಿದಿರಬಹುದೇ? ಅದೇ ಈ ಕರೆಗೆ ಕಾರಣವೇ? ಅಥವಾ ತನಗೇ ಅರಿವಾಗದಂತೆ ಮತ್ತೇನಾದರೂ ಸಂಭವಿಸಿರಬಹುದೋ? ಮೊದಲೇ ರೇಗಿರುವ ನಾಯಕನ ಇದಿರು

ತಾನು ಅನಿರೀಕ್ಷಿತವಾಗಿ, ಒಂಟಿಯಾಗಿ, ಅರಮನೆಗೆ ಹೋಗಬಹುದೇ? ಒಂದುವೇಳೆ ನಾಯಕನ ಕರೆಯನ್ನು ತಿರಸ್ಕರಿಸಿದರೆ ಹೇಗೆ? ತಾನು ಹೋಗದಿದ್ದರೆ, ತನ್ನ ಮಾತಿನಂತೆ ನಾಯಕನೇ ಇಲ್ಲಿಗೆ ಬಂದರೆ—

ನೂರಾರು ಪ್ರಶ್ನೆಗಳು ಮುದ್ದಣ್ಣನ ಮನದಿದಿರು ಸುಳಿದು ಹೋದವು—ಹತ್ತೂ ನಿಮಿಷ ಹಾಗೆಯೇ ಯೋಚಿಸಿ, ಕಡೆಗೊಂದು ನಿರ್ಧರಕ್ಕೆ ಬಂದು ಕಾವಲಿನವನಿಗೆ—

"ಪ್ರಧಾನಿಗಳು ನಿದ್ದೆಯಲ್ಲಿದ್ದರು. ಈಗ ಬರುತ್ತಾರೆ ಎಂದು ನಾಯಕರಿಗೆ ಹೇಳುವಂತೆ ಗುರಿಕಾರನಿಗೆ ಹೇಳು."

—ಎಂದು ಹೇಳಿ ಕಳುಹಿಸಿ ಬಳಿಯಲ್ಲೇ ಇದ್ದ ಮತ್ತೊಬ್ಬ ಭಟನಿಗೆ ಹೇಳಿದ:

"ನಮಗೆ ಅರಮನೆಯಿಂದ ಅವಸರದ ಕರೆ ಬಂದಿದೆ. ಹೋಗಲೇ ಬೇಕಾಗಿದೆ. ಅಷ್ಟು ಜನ ಖಾಸಾಪಡೆಯವರೊಡನೆ ಬೇಗ ಬರಬೇಕೆಂದು ದಳವಾಯಿ ರಾಯಣ್ಣನವರಿಗೆ ಹೇಳು. ನಾವು ಇಲ್ಲಿಯ ಬಾಗಿಲಿಂದಲೇ ಅರಮನೆಗೆ ಹೋಗುತ್ತೇವೆ. ಅರ್ಧದಾರಿಯಲ್ಲಿ ಅವರು ಬಂದು ನಮ್ಮನ್ನು ಕಲೆಯಬೇಕು. ಎಷ್ಟು ಮಾತ್ರವೂ ತಡವಾಗಕೂಡದು. ಹಾಗೆಯೇ ಪಂಜಿನವರಿಗೆ ದಾರಿ ತೋರಲು ಸಿದ್ಧವಾಗಬೇಕೆಂದು ಹೇಳು."

"ಮೇನೆ ಬೇಡವೇ?"

"ಬೇಡ. ಕಾಲು ನಡಗೆಯಲ್ಲೇ ಹೋಗುತ್ತೇವೆ. ಹಾಗಾದರೆ ರಾಯಣ್ಣನವರಿಗೂ ನಮ್ಮನ್ನು ಕಲೆತುಕೊಳ್ಳಲು ಹೊತ್ತು ಸಿಗುತ್ತದೆ."

ಎಂದು ಹೇಳಿ ಭಟನನ್ನು ಕಳುಹಿಸಿ, ತಾನೂ ಶಾಲು ಹೊದ್ದು ಸೊಂಟಕ್ಕೆ ಸೊಂಟದ ಪಟ್ಟಿಯಂತಿದ್ದ ಕತ್ತಿಯನ್ನು ಬಿಗಿದುಕೊಂಡು ಹೊರಡಲು ಸಿದ್ಧನಾದ.

೩

ಕೆರಳಿದ ಹುಲಿಯಂತೆ ನಾಯಕ ಅತ್ತಂದಿತ್ತ ಶತಪಥ ಹಾಕುತ್ತಿದ್ದ—ಮುದ್ದಣ್ಣ ಬರುವುದನ್ನೇ ಕಾಯುತ್ತಾ. ಮುದ್ದಣ್ಣನಿಂದ ಗುರುಗಳಿಗಾದ ಅಪಮಾನವನ್ನರಿತು ಅವನೆದೆಯಲ್ಲಿ ಕ್ರೋಧಪ್ರಜ್ವಲಿಸುತ್ತಿತ್ತು. ಹಾಗೆಯೇ

ಏಕಕಾಲಕ್ಕೆ ಪರಶುರಾಮಪ್ಪ, ದಳವಾಯಿ ಭರಮಣ್ಣ ಇಬ್ಬರೂ ದುರ್ಗ ದಲ್ಲಿಲ್ಲವೆಂದು, ನಡುರಾತ್ರಿಯಲ್ಲಿ ಒಬ್ಬರನ್ನೊಬ್ಬರು ಕಾಣಹೋದವರು ಮತ್ತೆಲ್ಲಿಯೂ ಕಾಣುತ್ತಿಲ್ಲವೆಂದೂ, ಆದಿನ ಅವರಿಬ್ಬರೂ ಒಟ್ಟಾಗಿ ಪ್ರಧಾನಿ ಗಳನ್ನು ಕಾಣಲು ಹೋಗಿದ್ದರೆಂಬುದನ್ನು, ನಾಯಕನ ಅಪ್ಪಣೆಯಂತೆ ಅವನ ಮನೆಗೆ ಹೋಗಿ ವಿಚಾರಿಸಿಕೊಂಡು ಬಂದ ಹೊರಕೆನಾಯಕನಿಂದ ತಿಳಿದು, ಭಯಂಕರವಾದ ಸಂದೇಹ, ಅವನನ್ನು ನಿಂತತ್ತ ನಿಲ್ಲಗೊಡದೆ ಕಾಡುತ್ತಿತ್ತು. ನಾಯಕನ ಸಂದೇಹವನ್ನು ನಿವಾರಣೆ ಮಾಡುವ ಶಕ್ತಿ ಇದ್ದದ್ದು ಪ್ರಧಾನಿಯೊಬ್ಬನಿಗೇ. ಎಂತಲೇ ರಾತ್ರಿಯಾದರೂ ಅದನ್ನು ಲೆಕ್ಕಿಸದೆ, ಪ್ರಧಾನಿಯನ್ನು ಕೂಡಲೇ ಬರುವಂತೆ ಹೇಳಿಕಳುಹಿಸಿ ಅವನು ಬರುವುದನ್ನೇ ಕಾಯುತ್ತಿದ್ದ. ಒಂದೊಂದು ಗಳಿಗೆಯೂ ಕಾಲೆಳೆದು ಕಾಲು ನಡಗೆಯಿಂದ ಸಾಗಿ ಶತಮಾನದಂತೆ ತೋರುತ್ತಿತ್ತು ನಾಯಕನಿಗೆ.

ಶತಪಥ ಸುತ್ತುತ್ತಿರುವಾಗಲೇ, ಬಾಗಿಲಾಳು ಬಂದು ಪ್ರಧಾನಿಗಳು ಬರುತ್ತಿದ್ದಾರೆ ಎಂದು ತಿಳಿಸಿದ. ಆ ಸುದ್ದಿಯನ್ನು ಹಿಂಬಾಲಿಸಿ ಮುದ್ದಣ್ಣನೇ ಪ್ರವೇಶಿಸಿದ.

"ಪ್ರಧಾನಿಗಳು ಬರಬೇಕು. ರಾತ್ರಿಯ ಈ ವೇಳೆಯಲ್ಲಿ ಹೇಳಿ ಕಳುಹಿಸಿದುದು ತೊಂದರೆಯಾಯಿತೇನೋ."

—ಎಂದು ಕೇಳಿದ ನಾಯಕ, ತನ್ನೆದೆಯಲ್ಲಿ ಕುದಿಯುತ್ತಿರುವ ಬೇಗುದಿಯನ್ನು ಮಾತಿನಲ್ಲಿ ತೋರಗೊಡದೆ.

"ಪ್ರಭುಗಳ ಅಪ್ಪಣೆ ಎಂದಮೇಲೆ ಊಳಿಗದವರು ಎದುರಾಡಿದರೆ ಆದೀತೇ? ಹೇಗಿದ್ದವನು ಹಾಗೆಯೇ ಬಂದೆ. ಉಡುಪಿನ ಅಸ್ತವ್ಯಸ್ಥೆ ಯನ್ನು ಪ್ರಭುಗಳು ಮನ್ನಿಸಬೇಕು."

—ಎಂದ ಮುದ್ದಣ್ಣ ಅತ್ಯಂತ ವಿಧೇಯನಾದ ಊಳಿಗದವನ ಧ್ವನಿಯಲ್ಲಿ.

"ಉಡುಪೇನು ಮಾಡುತ್ತದೆ ಪ್ರಧಾನಿಗಳೇ, ವಿಶ್ವಾಸ ಮುಖ್ಯ. ಅದೊಂದು ಚೆನ್ನಾಗಿದ್ದರೆ ಉಳಿದಾವುದೂ ಲೆಕ್ಕಕ್ಕೆ ಬರುವುದಿಲ್ಲ."

"ನಮ್ಮಲ್ಲಿ ಪ್ರಭುಗಳಿಗೆ ಅಷ್ಟು ವಿಶ್ವಾಸವಿಲ್ಲದಿದ್ದರೆ ಈ ವೇಳೆಯಲ್ಲಿ

ಹೇಳಿಕಳುಹಿಸುತ್ತಿದ್ದಿರಾ? ಕರಸಿದ ಕಾರಣವೇನೆಂದು ತಿಳಿಸಿದರೆ ಮನಸ್ಸಿನ ತಹತಹ ಕೊಂಚ ಕಡಮೆಯಾಗುತ್ತದೆ."

—ಮುದ್ದಣ್ಣನ ಮಾತು, ವಿಷಯವನ್ನರಿಯುವ ಆತುರದಲ್ಲಿ ತಾನೇ ತಾನಾಗಿ ತೋರುತ್ತಿದ್ದ ಕೃತ್ರಿಮವನ್ನು ಕಂಡು ನಾಯಕನಿಗೆ ಅಸಹ್ಯವಾಗಿ 'ನನ್ನಿದಿರಿನಲ್ಲಿ ನಿಲ್ಲಬೇಡ ಹೋಗು' ಎಂದು ಹೇಳಬೇಕೆನ್ನಿಸಿತು. ಹಾಗೆಯೇ ಕ್ರೋಧವೂ ತಾನೇ ತಾನಾಗಿ ಅವನಲ್ಲಿ ಕಡೆದು ಬಂದಿತು. ಆದರೆ ತಾನಾಗಿ ತನ್ನ ಸಿಟ್ಟನ್ನು ವ್ಯಕ್ತಮಾಡಿದರೆ, ಪ್ರಧಾನಿಯ ವಶದಲ್ಲೆಲ್ಲಿಯೋ ಇರಬಹುದಾದ ಪರಶುರಾಮಪ್ಪ, ಭರಮಣ್ಣನವರ ಜೀವಕ್ಕೆ ಅಪಾಯವಾಗಬಹುದೆಂದು ಹೆದರಿ, ಮನಸ್ಸಿನಲ್ಲಿಲ್ಲದ ಸೌಮ್ಯವನ್ನು ಮಾತಿನಲ್ಲಿ ವ್ಯಕ್ತಗೊಳಿಸುತ್ತಾ ಹೇಳಿದ—

"ಅಷ್ಟು ಅವಸರದ ಮಾತಾದುದರಿಂದಲೇ, ಅವೇಳೆಯಾದರೂ, ತಮಗೆ ತೊಂದರೆಯಾದರೂ ತಾವು ಲೆಕ್ಕಿಸುವುದಿಲ್ಲ ಎಂದೇ ತಿಳಿದು ಹೇಳಿ ಕಳುಹಿಸಿದೆವು."

"ಅದೇನೋ ಅಪ್ಪಣೆಯಾಗಲಿ. ನನ್ನಿಂದಾದುದನ್ನು ಮಾಡಲು ಸದಾ ಸಿದ್ಧನಾಗಿದ್ದೇನೆ."

"ಈ ದಿನ ಸಂಜೆ ಪರಶುರಾಮಪ್ಪ, ದಳವಾಯಿ ಭರಮಣ್ಣನವರನ್ನು ನೋಡಬೇಕೆಂದು ಹೇಳಿಕಳುಹಿಸಿದ್ದೆವು. ಆದರೆ ನಿನ್ನೆಯ ರಾತ್ರಿಯಿಂದ ಅವರು ಪತ್ತೆ ಇಲ್ಲವಂತೆ. ಎಲ್ಲೆಲ್ಲಿ ವಿಚಾರಿಸಿದರೂ ಅವರ ಸುಳಿವು ತಿಳಿಯಲಿಲ್ಲ. ತಮಗೇನಾದರೂ ಗೊತ್ತಿರಬಹುದೇನೋ ಎಂದು ವಿಚಾರಿಸೋಣ ಎಂದು ಕರಸಿದೆ."

"ಹಾಗೇ? ನಿನ್ನೆಯಿಂದ ಅವರಿಬ್ಬರೂ ಪತ್ತೆಯೇ ಇಲ್ಲವೇ?"

—ನಾಯಕನ ಮಾತಿನಿಂದ ಆಶ್ಚರ್ಯವಾದವನಂತೆ ಕೇಳಿದ ಮುದ್ದಣ್ಣ.

"ನಿಜ. ನಿಮಗೇನಾದರೂ ಅವರು ಎಲ್ಲಿರಬಹುದೆಂದು ಗೊತ್ತೆ?"

"ನನಗೆ ತಿಳಿಯದು ಪ್ರಭು. ತಮ್ಮ ಅಂತರಂಗವನ್ನು ನಮ್ಮಲ್ಲಿ ತಿಳಿಸುವಷ್ಟು ವಿಶ್ವಾಸ ಅವರಿಗೆ ನಮ್ಮಲ್ಲಿಲ್ಲ. ಇದು ಪ್ರಭುಗಳಿಗೂ ತಿಳಿದಿರುವ ವಿಚಾರವಾದ್ದರಿಂದ ಅದರಲ್ಲಿ ಮುಚ್ಚುಮರೆ ಮಾಡಿ ಏನು ಉಪ

ಯೋಗ? ಅವರು ನಮ್ಮಲ್ಲಿ ಬಂದು ಹೋಗುವುದೇ ಅಪಮಾನ; ಮಾತನಾಡುವುದಂತೂ ಇದ್ದದ್ದೂ ಕಡಮೆ. ಹೀಗಿರುವಾಗ, ಇನ್ನು ಅವರ ರಹಸ್ಯ ಚಲನವಲನಗಳ ವಿಚಾರ ನಮಗೆ ತಿಳಿವ ಬಗೆಯೆಂತು? ನನಗಂತೂ ತಿಳಿಯದು."

"ಆದರೆ ನಿನ್ನೆ ಸಂಜೆ ಅವರು ನಿಮ್ಮಲ್ಲಿಗೆ ಬಂದಿದ್ದರಂತೆ."

"ನಿಜ. ಬಂದಿದ್ದರು."

"ಯಾವ ವಿಚಾರಕ್ಕಾಗಿ?"

"ಮಠದ ವಿಚಾರದಲ್ಲಿ ಮಾತು ಕಥೆಯಾಡಲು."

"ಓ—ಅದೋ? ಅಂದಹಾಗೆ ಆ ವಿಷಯದಲ್ಲಿ ನಾವೂ ನಿಮ್ಮನ್ನೊಂದು ಮಾತು ಕೇಳಬೇಕು ಎಂದಿದ್ದೆವು. ಮಠಕ್ಕೆ ಕಾವಲುಹಾಕಿಸಿದೀರಂತಲ್ಲಾ ಏಕೆ?"

"ಮಠದವರು ಆಡಳಿತದವರ ಆಜ್ಞೆಗೆ ವಿರೋಧವಾಗಿ ವರ್ತಿಸಿದ್ದರಿಂದ."

"ಅಂದರೆ ನಮಗೆ ವಿರೋಧವಾಗಿ ವರ್ತಿಸಿದರೆಂದೇ?—"

"ಅಹುದು."

"ಒಂದು ವೇಳೆ ಹಾಗೇನೂ ಇಲ್ಲ ಎಂದು ನಾವೇ ಹೇಳುವುದಾದರೆ—?"

"ಪ್ರಭುಗಳಿಗೆ ನಮ್ಮ ಆಜ್ಞೆ ಸೂಕ್ತವಲ್ಲವೆಂದು ತೋರಿದರೆ, ಕಾವಲು ತೆಗೆಸಲು ಅಪ್ಪಣೆಮಾಡಬಹುದು."

"ನಿಜ ಈದಿನ ಸಂಜೆ ಆ ಸುದ್ದಿ ಮೊದಲ ಬಾರಿಗೆ ತಿಳಿದಾಗ ಹಾಗೆ ಮಾಡಬೇಕು ಎಂದೇ ತೋರಿತ್ತು."

"ಹಾಗೆ ತೋರಿದ್ದರೆ ಆಜ್ಞೆಯನ್ನು ಮಾಡಬಹುದಾಗಿತ್ತು."

"ಆಜ್ಞೆಯನ್ನು ಮಾಡಬಹುದಾಗಿತ್ತು. ಆದರೆ ಹಾಗೆ ಮಾಡುವುದು ಸೂಕ್ತವಲ್ಲವೆಂದು ಸುಮ್ಮನಾದೆವು."

"ಏಕೆ?"

"ಕಾವಲು ಹಾಕುವ ಆಜ್ಞೆಮಾಡಿದವರು ಪ್ರಧಾನಿಗಳು. ನಾಯಕರೇ ಆ ಆಜ್ಞೆಗೆ ವಿರುದ್ಧವಾದ ಆಜ್ಞೆಮಾಡಿದರೆ, ಜನಕ್ಕೆ ನಾಯಕರಿಗೂ

ಪ್ರಧಾನಿಗಳಿಗೂ ಒಮ್ಮತವಿಲ್ಲವೆಂಬ ಭಾವನೆ ಬರಬಹುದು. ಅಲ್ಲದೆ ಆ ಸೈನಿಕರು ನಿಮ್ಮ ಕೈಕೆಳಗಿನ ಜನ. ಇಂದಲ್ಲ ನಾಳೆಯೂ ನಿಮ್ಮ ಅಪ್ಪಣೆಯಂತೆ ನಡೆಯಬೇಕಾದವರು. ಹೀಗಿರುವಾಗ ನಿಮ್ಮ ಆಜ್ಞೆಗೆ ವಿರುದ್ಧವಾಗಿ ನಡೆಯಿತೆಂದರೆ ನಾಳೆ ಅವರಿಗೆ ನಿಮ್ಮ ಮಾತಿನಲ್ಲಿ ವಿಶ್ವಾಸ ಉಳಿದೀತೇ? ಅದಕ್ಕಾಗಿ, ನೀವೇ ಆ ಆಜ್ಞೆ ಮಾಡಿದರೆ ಆಯಿತು ಎಂದು ಸುಮ್ಮನಾದೆವು. ನಾಳೆಯೇ ಕಾವಲು ತೆಗೆಸುವ ಆಜ್ಞೆಮಾಡಿ, ಹಾಗೆಯೇ ಗುರುಗಳಲ್ಲಿಯೂ ತಪ್ಪಾಯಿತು ಎಂದು ಮಾತು ಹೇಳಿ ಬನ್ನಿ. ಅವರು ನೊಂದುಕೊಂಡರೆ ಯಾರಿಗೂ ಒಳಿತಾಗದು. ನಾವೇನೋ ಅವರನ್ನು ಕಂಡು ನಮ್ಮಿಬ್ಬರ ಪರವಾಗಿಯೂ ತಪ್ಪಾಯಿತು ಎಂದು ಹೇಳಿಬಂದಿದ್ದೇವೆ. ಆದರೂ ಆ ಮಾತನ್ನು ನೀವೇ ಹೇಳಿದರೆ ಚೆನ್ನ."

"ಪ್ರಭುಗಳು ಗುರುಗಳ ದರ್ಶನಮಾಡಿ ಬಂದಿರಾ?"

"ಈ ಸುದ್ದಿ ತಿಳಿದಕೂಡಲೇ ನಾವು ಅವರನ್ನು ಹೋಗಿ ಕಂಡು ಬರುವುದು ನಮ್ಮ ಕರ್ತವ್ಯವಾಗಿರಲಿಲ್ಲವೇ? ಅದಕ್ಕಾಗಿ ಹೋಗಿಬಂದೆವು. ನಾಳೆ ನೀವೂ ನಾವು ಹೇಳಿದ ಕೆಲಸ ಮಾಡಿ. ಅಲ್ಲದೆ—ನೀವು ಇಂಥ ಆಜ್ಞೆ ಮಾಡುವ ಮೊದಲು ನಮ್ಮನ್ನು ಒಂದು ಮಾತು ಕೇಳಿಮಾಡಿದರೆ ಇಂಥ ಪರಿಸ್ಥಿತಿ ಒದಗುವುದಿಲ್ಲ. ಈಗೇನೋ ಆದದ್ದಾಯಿತು ಬಿಡಿ— ಮುಂದೆ ಹೀಗಾಗದಿದ್ದರೆ ಸರಿ. ಈಗ ಅದು ಮುಖ್ಯವಾದ ಮಾತಲ್ಲ. ಈಗ ಮುಖ್ಯವಾಗಿರುವುದು ಪರಶುರಾಮಪ್ಪ, ಭರಮಣ್ಣನವರ ವಿಚಾರ. ಆ ಬಗ್ಗೆ ಹೇಗೆ ಮಾಡುವುದು?"

ನಾಯಕ ನಯವಾದ ರೀತಿಯಲ್ಲೇ ಮಾತನಾಡಿದರೂ, ಮಾತು ಮಾತಿಗೂ ತನ್ನನ್ನು ಛೀ ಎಂದು, ಮುಂದೆ ಹೀಗೆ ಮಾಡಬೇಡ ಎಂದು ಬುದ್ಧಿ ಹೇಳಿ, ಮುಂದೆ ನೀನು ನಾನು ಹೇಳಿದಂತೆ ಕೇಳಬೇಕು ಎಂಬ ಧ್ವನಿ ಅವನ ಮಾತಿನಲ್ಲಿದ್ದುದು ಮುದ್ದಣ್ಣನಿಗೆ ಅರಿವಾಗಿ, ಅವನ ಮನಸ್ಸು ಕಿಡಿಕಿಡಿಯಾಯಿತು. ತಪ್ಪುಮಾಡಿದ ಹುಡುಗನಿಗೆ, ಅವನಲ್ಲಿ ಪ್ರೀತಿ ಯುಳ್ಳ ಹಿರಿಯರು ಛೀಮಾರಿ ಮಾಡುವ ರೀತಿಯಲ್ಲಿ ನಾಯಕ ತನಗೆ ನೀತಿ ಹೇಳುತ್ತಿದ್ದಾನೆ. ಹಿಂದೆ ಯಾರೂ ಅವನಲ್ಲಿ ಈ ಬಗೆಯ ಮಾತೆ ನ್ನಾಡಿ, ಹೆಸರು ಹೇಳಲು ಬದುಕಿರಲಿಲ್ಲ. ಈಗಲೂ ಈ ಮಾತನ್ನು

ಹೀಗೆಯೇ ಮುಂದುವರಿಯಲು ಬಿಟ್ಟರೆ, ಇದೇ ಸದರದಿಂದ ನಾಯಕ ತನ್ನ ಮೇಲೆ ಮತ್ತಷ್ಟು ಅಪಮಾನ ಹೇರಬಹುದು, ಈಗಲೇ ಬಿಗಿಯಾಗಿರಬೇಕು ಎಂದು ಮನದಲ್ಲಿಯೇ ನಿಶ್ಚಯಿಸಿ ಹೇಳಿದ ಮುದ್ದಣ್ಣ—

"ಮಠದ ವಿಷಯದಲ್ಲಿ ನಾವು ಮಾಡಿದ ಆಜ್ಞೆ ಸರಿಯಲ್ಲವೆಂದು ತೋರಿದರೆ, ಪ್ರಭುಗಳು ಅದನ್ನು ಉಪಸಂಹರಿಸಬಹುದು. ಆ ಶಕ್ತಿ ತಮಗಿದೆ. ಆದರೆ ಗುರುಗಳಲ್ಲಿ ಕ್ಷಮೆ ಕೇಳುವ ವಿಚಾರ ಮಾತ್ರ ನಮ್ಮಿಂದ ಸಾಧ್ಯವಿಲ್ಲ."

"ಏಕೆ? ತಪ್ಪು ಆಜ್ಞೆ ಮಾಡಿದವರು, ತಮ್ಮದು ತಪ್ಪು ಆಜ್ಞೆ ಎಂದು ತಿಳಿದ ಮೇಲೆ ತಪ್ಪಾಯಿತು ಎನ್ನುವುದರಲ್ಲಿ ಲೋಪವೇನು?"

"ನಮ್ಮ ಆಜ್ಞೆ ಪ್ರಭುಗಳ ದೃಷ್ಟಿಯಲ್ಲಿ ತಪ್ಪಿರಬಹುದು—"

"ತಮ್ಮ ದೃಷ್ಟಿಯಲ್ಲಿ?"

—ಮುದ್ದಣ್ಣನ ಮಾತನ್ನು ನಡುವೆಯೇ ತಡೆದು ಕೇಳಿದ ನಾಯಕ.

"ನಮ್ಮ ಆಜ್ಞೆ ತಪ್ಪಲ್ಲ. ಆಡಳಿತದ ದೃಷ್ಟಿಯಿಂದ ಸೂಕ್ತವಾದುದೆಂದು ತೋರಿದುದನ್ನೇ ಮಾಡಿದ್ದೇವೆ."

"ಗುರುಮನೆಗೆ, ದೇವಾಲಯಕ್ಕೆ ಸೇನೆಯ ಕಾವಲು ಹಾಕುವುದು ಸೂಕ್ತವಾದದ್ದೇ?"

"ಆಡಳಿತ ದೃಷ್ಟಿಯಿಂದ, ಗುರುಗಳಾಗಲಿ, ಮಠವಾಗಲಿ, ನಮ್ಮ ವ್ಯಾಪ್ತಿಗೆ ಹೊರಪಟ್ಟದ್ದು ಎಂದು ನಾವು ತಿಳಿದಿಲ್ಲ. ಗುರುಗಳು ಮಠದಲ್ಲಿ ಗುರುಗಳೇ ವಿನಾ, ಆಡಳಿತ ದೃಷ್ಟಿಯಲ್ಲಿ ಅವರೂ ಪ್ರಜೆಗಳೇ. ಸಾಮಾನ್ಯ ಪ್ರಜೆಗಳಿಗೆ ಅನ್ವಯಿಸುವ ಶಾಸನಗಳೆಲ್ಲಾ ಅವರಿಗೂ ಅನ್ವಯಿಸುತ್ತವೆ."

"ಪ್ರಧಾನಿಗಳ ಮಾತು ಕೇಳಿದರೆ—ನಮಗೆ ಶಾಸನಶಾಸ್ತ್ರ ಕಲಿಸಲು ಹೊರಟಂತಿದೆ."

"ಆ ಉದ್ಧಟತನ ನಮಗಿಲ್ಲ. ಆದರೆ ಹೊಸದಾಗಿ ಪಟ್ಟಕ್ಕೆ ಬಂದ ತಮಗೆ ಆಡಳಿತದ ಅಂತರಂಗವೆಲ್ಲಾ ಇಷ್ಟುಬೇಗ ತಿಳಿಯುವುದು ಕಷ್ಟ, ಆದುದರಿಂದ ನಾಯಕರು ಅಷ್ಟುದಿನ, ಆ ವಿಷಯಗಳನ್ನೆಲ್ಲಾ ತಿಳಿದವರನ್ನು ನಂಬಿ ನಡೆದರೆ ಮೇಲು. ಇದರ ಮೇಲೆ, ಯಾವಾಗಲೂ ತಮಗೆ ಸರಿಕಂಡಂತೆ ಮಾಡುವ ಅಧಿಕಾರ ನಾಯಕರಿಗಿದ್ದೇ ಇದೆ."

"ಅಷ್ಟು ಅಧಿಕಾರ ನಮಗಿದೆ ಎಂದು ನೀವೂ ನಂಬುತ್ತೀರಾ ಪ್ರಧಾನಿಗಳೇ?"

—ಮುದ್ದಣ್ಣನ ಮಾತನ್ನು ನಂಬದವನಂತೆ ಕೇಳಿದ ಲಿಂಗಣ್ಣ ನಾಯಕ

"ನಂಬದಿದ್ದರೆ, ಸಾಮಾನ್ಯ ದಾಸಿಯೊಬ್ಬಳ ವಿಚಾರದಲ್ಲಿ ನಾಯಕರೇ ಪ್ರವೇಶಮಾಡಿ, ಆ ಸಂದರ್ಭದಲ್ಲಿ ಆಗಿರುವ ಅಲ್ಪಲೋಪಕ್ಕಾಗಿ ಕಾರ್ಯಭಾರಿಗಳನ್ನೇ ನಿಂತ ಕಾಲಿನಮೇಲೆ ಕೆಲಸದಿಂದ ಹೊರದೂಡುತ್ತಿರಲಿಲ್ಲ. ಹಾಗೆ ಹೊರದೂಡುವಾಗಲೂ, ಕಾರ್ಯಭಾರಿಗಳ ಲೋಪಕ್ಕೆ ಕಾರಣರಾದ ನಮ್ಮನ್ನು ಒಂದು ಮಾತು ಕೇಳುತ್ತಿದ್ದಿರಿ."

—ಮುದ್ದಣ್ಣ ಮಾತನ್ನು ನಯವಾಗಿ ನಾಯಕನ ಮೇಲಿನ ಆರೋಪಣೆಯಾಗಿ ತಿರುಗಿಸಿದ್ದನ್ನು ಕಂಡು, ನಾಯಕನಿಗೆ ರೇಗಿತು.

"ಅವೆಲ್ಲಾ ಸದ್ಯಕ್ಕೆ ಅಮುಖ್ಯ ವಿಷಯಗಳು ಪ್ರಧಾನಿಗಳೇ. ಇನ್ನೊಮ್ಮೆ ಅದರ ಚರ್ಚೆಯಾಗಲಿ. ಆ ಚರ್ಚೆಗೆ ಖಂಡಿತ ಅವಕಾಶ ಮಾಡಿಕೊಡುತ್ತೇವೆ. ಆಗ ನಮ್ಮಲೋಪದೋಷವನ್ನು ನೀವು ತೋರಿಸುವುದೋ, ನಿಮ್ಮ ಲೋಪದೋಷವನ್ನು ನಾವು ತೋರಿಸುವುದೋ ನಡೆಯಲಿ. ಆದರೆ ಸದ್ಯಕ್ಕೆ ಅದು ಅಪ್ರಕೃತ. ಈಗ ಮುಖ್ಯವಾಗಿರುವುದು ಪರಶುರಾಮಪ್ಪ, ಭರಮಣ್ಣನವರು ಕಾಣೆಯಾಗಿರುವ ವಿಷಯ. ನಿಮ್ಮನ್ನು ನಾವು ಈ ಅವೇಳೆಯಲ್ಲಿ ಕರೆಸಿದ್ದು ಆ ವಿಷಯಕ್ಕಾಗಿ. ಆ ವಿಷಯದಲ್ಲಿ ಹೇಗೆ ಮಾಡಬೇಕೋ ತಿಳಿಸಬೇಕು."

"ಆ ವಿಷಯವೇ ನಮಗೆ ತಿಳಿಯದು ಎಂದಮೇಲೆ ನಾವು ಏನು ತಾನೇ ಸಲಹೆಕೊಡಲು ಸಾಧ್ಯ?"

"ಪ್ರಧಾನಿಗಳಿಗೆ ತಿಳಿಯದೆ ಈ ದುರ್ಗದಲ್ಲಿ ಗಾಳಿಯೂ ಸುಳಿಯುವುದಿಲ್ಲವೆಂದು ನಾವು ಕೇಳಿದ್ದೇವೆ. ಹೀಗಿರುವಾಗ ಈ ವಿಷಯದಲ್ಲಿ ಏನೂ ತಿಳಿದಿಲ್ಲವೆಂದರೆ ನಿಮ್ಮನ್ನು ನಂಬಬಹುದೇ?"

—ಲಿಂಗಣ್ಣನಾಯಕ ಮುದ್ದಣ್ಣನನ್ನು ಕೆಣಕಿ ಹೇಳಿದ.

"ಇರುವ ವಿಚಾರವನ್ನು ಹೇಳುವುದು ನಮ್ಮ ಹೊಣೆ—ನಂಬುವುದೂ, ಬಿಡುವುದೂ ಪ್ರಭು ಚಿತ್ತ."

"ಆ ಮಾತಿಗೆಲ್ಲಾ ಈಗ ಹೊತ್ತಿಲ್ಲ ಪ್ರಧಾನಿಗಳೇ. ನಮಗೂ ಪರಶುರಾಮಪ್ಪನವರಿಗೂ ಭರಮಣ್ಣನವರಿಗೂ ಇರುವ ಸ್ನೇಹ ಭಾಂಧವ್ಯ ನಿಮಗೆ ತಿಳಿದಿದೆ. ಆವರ ಕೂದಲು ಕೊಂಕಿದರೂ ಅದಕ್ಕೆ ಕಾರಣರಾದವರ ತಲೆ ಉಳಿಸುವುದಿಲ್ಲ ಎಂದು ನಾವು ಹಿರಿಯರ ಹೆಸರಿನ ಮೇಲೆ ಆಣೆ ಮಾಡಿದ್ದೇವೆ."

"ಇರಬಹುದು. ಅದನ್ನೆಲ್ಲಾ ನಮಗೆ ಹೇಳುವ ಅಗತ್ಯವೇನೋ ನಮಗೆ ಕಾಣುತ್ತಿಲ್ಲ. ಇದರ ಬದಲು ಹೀಗೆ ಮಾಡಿ ಎಂದರೆ ಹಾಗೆ ಮಾಡ ಬಹುದು. ಅದು ಬಿಟ್ಟು ಪ್ರಭುಗಳು ಈ ರೀತಿ ಸುತ್ತುಬಳಸು ಮಾತ ನಾಡುವುದನ್ನು ನೋಡಿದರೆ ಪ್ರಭುಗಳಿಗೆ ನಮ್ಮಲ್ಲೇ ಸಂದೇಹವಿರು ವಂತಿದೆ. ಹಾಗಿದ್ದರೆ, ನಿಸ್ಸಂಕೋಚವಾಗಿ ಹೇಳಬಹುದು. ಇಂಥ ಬಳಸು ಮಾತಿನಿಂದ ವಿನಾಕಾರಣ ಮನಸ್ಸಿಗೆ ವ್ಯಥೆಯಾಗುವುದಕ್ಕಿಂತ ಹೆಚ್ಚಿನದೇನೂ ಆಗುವುದಿಲ್ಲ."

ಸುತ್ತ ಬಳಸು ಮಾತು ಅಗತ್ಯವಿಲ್ಲವಲ್ಲವೇ?"

—ಸೆಡೆದು ಸವಾಲು ಹಾಕುವವನಂತೆ ಕೇಳಿದ ನಾಯಕ.

"ಖಂಡಿತವಾಗಿಯೂ ಇಲ್ಲ."

—ಅದೇ ಧ್ವನಿಯಲ್ಲಿಯೇ ಮುದ್ದಣ್ಣನೂ ಉತ್ತರಕೊಟ್ಟ.

"ಹಾಗಾದರೆ ಈ ವಿಷಯದಲ್ಲಿ ನಿಮ್ಮಲ್ಲೇ ನಮಗೆ ಸಂದೇಹವಿದೆ ಎಂದರೆ—"

"ಪ್ರಭುಗಳು ಸರಿ ಕಂಡಂತೆ ಮಾಡಬಹುದು."

"ಅಂದರೆ—"

ನಮ್ಮಲ್ಲಿ ಸಂದೇಹವಿದ್ದರೆ, ನಮ್ಮ ಮನೆಗಳನ್ನು ಶೋಧಿಸ ಬಹುದು. ನಮ್ಮನ್ನು ಬಂಧನವಲ್ಲಿಡಬಹುದು—ಹೇಗೆ ಸರಿಕಂಡರೆ ಹಾಗೆ ಮಾಡಬಹುದು. ನಾವಂತೂ ಪ್ರಭುಗಳ ಚಿತ್ತದಂತೆ ನಡೆಯಲು ಸದಾ ಸಿದ್ಧವಾಗಿರುವ ಜನ. ಅಪ್ಪಣೆ ಮಾಡಿ."

"ನಿಮ್ಮ ಗೃಹಸಂಶೋಧನೆಯಾಗಲಿ, ನಿಮ್ಮನ್ನು ಬಂಧನದಲ್ಲಿಡು ವುದಾಗಲಿ ನಮಗೆ ಬೇಕಾಗಿಲ್ಲ ಪ್ರಧಾನಿಗಳೇ. ನಮಗೆ ಬೇಕಾದುದಿಷ್ಟೇ— ನಾಳೆಯೊಂದು ದಿನದ ಅವಧಿ ನಿಮಗೆ ಕೊಟ್ಟಿದೇವೆ. ಆ ಅವಧಿಯೊಳ

ಗಾಗಿ, ಪರಶುರಾಮುಪ್ಪ, ಭರಮಣ್ಣ ಇಬ್ಬರೂ ನಮ್ಮೆದಿರು ಸುರಕ್ಷಿತ ವಾಗಿ ಬರಬೇಕು. ಇಲ್ಲವಾದರೆ—"

"ಇಲ್ಲವಾದರೆ—"

"ಇಲ್ಲವಾದರೆ ಮುಂದೇನು ಮಾಡಬೇಕೆಂಬುದನ್ನು ನಾವು ಬಲ್ಲೆವು. ಅದು ಆ ಬಳಿಕ ನಿಮಗೂ ತಿಳಿಯುತ್ತದೆ. ಅಷ್ಟೇ ನಾವು ನಿಮಗೆ ಹೇಳ ಬೇಕೆಂದಿದ್ದುದು."

"ಅಪ್ಪಣೆ ಸೇರಿತು. ಪ್ರಭುಗಳು ಕೊಟ್ಟ ಅವಧಿಯೊಳಗಾಗಿ ನಾವೂ ತಮ್ಮ ಅಪ್ಪಣೆಯನ್ನು ನೆರವೇರಿಸಲು ಯತ್ನಿಸುತ್ತೇವೆ. ನಾವಿನ್ನು ಬರಲು ಅಪ್ಪಣೆಯೇ?"

"ಆಯಿತು ಹೋಗಿ. ನಮ್ಮ ಮಾತು ನೆನಪಿನಲ್ಲಿರಲಿ."

"ಪ್ರಭುಚಿತ್ತ"

—ಎಂದು ಮುದ್ದಣ್ಣ ನಾಯಕನಿಗೆ ಮುಜರೆ ಮಾಡಿ ಹೊರಟ. ಅವನು ಅಷ್ಟು ದೂರ ಹೋಗುವವರೆಗೂ ಸುಮ್ಮನಿದ್ದು ಬಳಿಕ, ಏನನ್ನೋ ತಟಕ್ಕನೇ ಜ್ಞಾಪಿಸಿಕೊಂಡವನಂತೆ ನಾಯಕ—

"ಪ್ರಧಾನಿಗಳೇ"

—ಎಂದು ಕೂಗಿದ.

"ಮತ್ತೇನು—ಅಪ್ಪಣೆ ಮಾಡಬೇಕು"

–ಎಂದ, ನಾಯುಕನ ಕೂಗು ಕೇಳಿ ಅವನತ್ತ ತಿರುಗಿದ ಮುದ್ದಣ್ಣ.

"ನಮ್ಮ ಗುರಿಕಾರರು ತಮ್ಮನ್ನು ಕರೆಯಬಂದಾಗ, ತಾವು ಒಡ್ಡಿನ ಬಳಿಯ ಕರವರತಿಯುಲ್ಲಿದ್ದಿರೆಂದು ತಿಳಿಯಿತು."

"ಅಹುದು."

"ಆ ಕೊಳ ನಾಯುಕರ ಚಂದ್ರಿಕಾವಿಹಾರಕ್ಕಾಗಿ ಕಟ್ಟಿಸಿದುದಲ್ಲವೇ ಪ್ರಧಾನಿಗಳೇ?"

"ಹಿಂದಿನಿಂದ ಹಾಗೇ ನಡೆದು ಬಂದಿತ್ತು—"

"ಮುಂದೆಯೂ ಹಾಗೆಯೇ ನಡೆಯಬೇಕು."

—ಮುದ್ದಣ್ಣನ ಮಾತನ್ನು ನಡುವೆಯೇ ತಡೆದು ಕರ್ಕಶವಾಗಿ ಹೇಳಿದ ಲಿಂಗಣ್ಣನಾಯುಕ.

"ಆದರೆ ಚಿಕ್ಕಣ್ಣನಾಯಕರ ಕಾಲದಲ್ಲಿ ನಾವು ಅದನ್ನು ಉಪಯೋಗಿಸಬಹುದೆಂದು ಅಪ್ಪಣೆಯಾಗಿತ್ತು."

"ಇರಬಹುದು. ಆದರೆ ಈಗ ದುರ್ಗದಲ್ಲಿ ನಾಯಕರಾಗಿರುವವರು ಚಿಕ್ಕಣ್ಣನಾಯಕರಲ್ಲ."

"ತಮ್ಮ ಆಜ್ಞೆ ಅರ್ಥವಾಯಿತು."

"ಸರಿ. ಹಾಗಿದ್ದರೆ ತಾವಿನ್ನು ಹೊರಡಬಹುದು. ಈ ಮೊದಲೇ ನಾವು ಹೇಳಿದ ಮಾತನ್ನೂ ಮರೆಯಬೇಡಿ."

—ಎಂದ ಲಿಂಗಣ್ಣನಾಯಕ "ಇನ್ನು ನಿನ್ನ ಅಗತ್ಯವಿಲ್ಲ, ತೊಲಗು" ಎನ್ನುವ ಧ್ವನಿಯಲ್ಲಿ. ಮುದ್ದಣ್ಣ ನಾಯಕನಿಗೆ ಮತ್ತೊಮ್ಮೆ ಮುಜರೆ ಮಾಡಿ, ಹೋದ. ಅವನು ಕಾಲು ಹಾಕಿದ ವೇಗಕ್ಕೆ ನೆಲ ನಡುಗುವಂತಿತ್ತು.

ಅವನು ಹೋದ ಸ್ವಲ್ಪ ಹೊತ್ತಿನ ಮೇಲೆ ಹೊರಕೆನಾಯಕ ತೆರೆಯ ಮರೆಯಿಂದ ಹೊರಗೆ ಬಂದು ನಾಯಕನಿಗೆ ಕೈಮುಗಿದು ಹೇಳಿದ—

"ಪ್ರಭು, ಇದು ನೀವು ಮಾಡಿದ ಎರಡನೆಯ ತಪ್ಪು."

"ಹೇಗೆ ಹೊರಕೆನಾಯಕ?"

"ಅವನನ್ನು ಅಷ್ಟು ಕೆರಳಿಸಿದ ಬಳಿಕ ಇಲ್ಲಿಂದ ಹೊರಗೆ ಬಿಡಬಾರದಾಗಿತ್ತು."

"ಏನು ಮಾಡಬೇಕಾಗಿತ್ತು?"

"ತಲೆ ಕತ್ತರಿಸಿದ್ದರೂ ತಪ್ಪಾಗುತ್ತಿರಲಿಲ್ಲ. ಕಡೆಯಪಕ್ಷ ಹಿಡಿದು ಸೆರೆಯಲ್ಲಿಡಬೇಕಾಗಿತ್ತು."

"ಆ ವಿಚಾರ ನಮ್ಮ ಮನಸ್ಸಿಗೂ ಬರದೆ ಹೋಗಲಿಲ್ಲ. ಆದರೆ ಭರಮಣ್ಣ, ಪರಶುರಾಮಪ್ಪನವರು ಅವನ ಸೆರೆಯಲ್ಲಿರುವವರೆಗೂ, ಅವರನ್ನು ಈ ಪಿಶಾಚಿ ಎಲ್ಲಿಟ್ಟಿರುವನೆಂಬುದನ್ನು ತಿಳಿಯುವವರೆಗೂ, ಇವನ ಮೈ ಮೇಲೆ ಕೈಮಾಡಲು ಸಾಧ್ಯವಿರಲಿಲ್ಲವಾದ್ದರಿಂದ ಸುಮ್ಮನಾಗಬೇಕಾಯಿತು."

"ಏಕೆ?"

"ಇದು ಒಂದು ಹೆಡೆಯ ಹಾವಲ್ಲ, ಹೊರಕೆನಾಯಕ, ನಾಲ್ಕು

ಹೆಡೆಯ ಸರ್ಪ. ಇವನಿಗೆ ನಾವು ಏನಾದರೂ ಅಪಾಯ ಮಾಡಿದರೆ, ಆ ರಚ್ಚೆನಿಂದ, ಇವನ ತಮ್ಮಂದಿರು ಪರಶುರಾಮಪ್ಪ, ಭರಮಣ್ಣನ ಜೀವಕ್ಕೆ ಹಾನಿತಂದರೇನು ಮಾಡುವುದು? ಆ ಹೆದರಿಕೆ ನಮ್ಮ ಕೈಯನ್ನು ತಡೆ ಯಿತು. ಅದಿಲ್ಲವಾಗಿದ್ದರೆ—ಈ ದಿನ ಮುದ್ದಣ್ಣ ಇಲ್ಲಿಂದ ಜೀವಂತ ಸಾಗಿ ಹಿಂದಿರುಗುತ್ತಿರಲಿಲ್ಲ. ಅವನ ರಕ್ತಕ್ಕಾಗಿ, ನಿನ್ನಷ್ಟೇ ನನ್ನ ಹೃದ ಯವೂ ಹಾತೊರೆಯುತ್ತಿದೆ. ಒಂದು ದಿನದ ಅವಧಿ ಕೊಟ್ಟದ್ದೇವೆ. ನೋಡೋಣ, ಏನು ಮಾಡುತ್ತಾನೋ."

"ಅವರನ್ನು ತಂದೊಪ್ಪಿಸುತ್ತಾನೆ ಎಂದು ನಂಬಿದ್ದೀರಾ ನೀವು?"

"ತಂದೊಪ್ಪಿಸುತ್ತಾನೆ, ಇಲ್ಲವೇ ತನ್ನ ತಲೆ ಕಳೆದುಕೊಳ್ಳುತ್ತಾನೆ. ಎರಡರಲ್ಲೊಂದು ಖಂಡಿತ."

"ಆದರೂ........ಆದರೂ........"

"ಏನು?"

"ಪ್ರಭುಗಳು ಅವನನ್ನು ಅಷ್ಟು ದೂರ ಕೆಣಕಬಾರದಾಗಿತ್ತು."

"ಏಕೆ? ಅವನಿಗೆ ಹೆದರಿ ನಡೆಯಬೇಕಾಗಿತ್ತೇ ನಾವು? ಇನ್ನು ಅದು ಸಾಧ್ಯವಿಲ್ಲ ಹೊರಕೆನಾಯಕ. ಆ ಕಾಲ ಮುಗಿದುಹೋಯಿತು."

—ಅಚಲ ನಿರ್ಧರದ ಧ್ವನಿಯಲ್ಲಿ ಹೇಳಿದ ನಾಯಕ.

"ಅದಂತೂ ನಿರ್ಧಾರವಾದ ಹಾಗಾಯಿತು. ಆದರೆ ಇನ್ನು ಮೇಲೆ ಪ್ರಭುಗಳು ತುಂಬಾ ಎಚ್ಚರಿಕೆಯಿಂದ ಇರಬೇಕು. ಯಾವುದಕ್ಕೂ ಹೇಸು ವವನಲ್ಲ ಈ ನರಪಿಶಾಚಿ"

"ನಮಗದು ಗೊತ್ತಿದೆ ಹೊರಕೆನಾಯಕ. ಆದರೆ ಅವನ ಪಾಪದ ಕೊಡವೂ ತುಂಬುತ್ತಾ ಬಂದಿದೆ. ಇನ್ನವನ ಅಂತ್ಯ ಬಹಳ ದೂರವಿಲ್ಲ."

"ಅದು ಆದಷ್ಟು ಹತ್ತಿರವಾಗಲೆಂದೇ ನಮ್ಮ ಹಾರೈಕೆ"

—ಎಂದ ಹೊರಕೆನಾಯಕ.

"ನಮ್ಮ ಮಾತು ನಂಬು ಹೊರಕೆನಾಯಕ. ಸಜ್ಜನರ ಹಾರೈಕೆ ಸುಳ್ಳಾಗುವುದಿಲ್ಲ. ಇನ್ನು ಮಲಗು ಹೋಗು. ನಾಳೆ ಮಾಡುವ ಕೆಲಸ ಬೆಟ್ಟದಷ್ಟಿದೆ."

"ತಾವೂ ಸೆಜ್ಜೆಗೆ ದಯಮಾಡಿಸಬೇಕು. ಹಾಗೇ—ಇಂದಿನಿಂದ

ನನಗೆ ಇಲ್ಲಿಯೇ ಮಲಗಲು ಅಪ್ಪಣೆಯಾಗಬೇಕು."

"ಏಕೆ—ನಾವು ಮಲಗಿದಾಗ ಏನಾದರೂ ಆಗಬಹುದು ಎಂಬ ಭೀತಿಯೇ?"

"ಪ್ರಭೂ ತಾವೇನೋ ಭಾಗ್ಯವಂತರು. ಆದರೆ ನಮ್ಮ ಭಾಗ್ಯ ಹೇಗೋ ನಮಗೇ ನಂಬಿಕೆಯಿಲ್ಲ. ನಾವಾಗಲೇ ಒಂದು ಬಾರಿ ಕೈ ಸುಟ್ಟುಕೊಂಡ ನಿರ್ಭಾಗ್ಯರು."

"ನಾವೂ ನಿಮ್ಮ ಹಾಗೇ ಹೊರಕೆನಾಯಕ–ನಾವೂ ನಿರ್ಭಾಗ್ಯರೇ. ಇಲ್ಲವಾದರೆ ನಾಯಕರಾಗಿಯೂ ನಮಗೆ ಆ ನರಕದ ನಾಯಿಯೊಂದಿಗೆ ವಿನಯವಾಗಿ ನಡೆದುಕೊಳ್ಳುವ ದುಸ್ಥಿತಿ ಪ್ರಾಪ್ತವಾಗುತ್ತಿರಲಿಲ್ಲ."

—ಎಂದ ಲಿಂಗಣ್ಣನಾಯಕ, ಭಾರವಾದ ನಿಟ್ಟುಸಿರಿಟ್ಟು. ಹಾಸಿಗೆಗೆ ಹೋಗಿ ಮಲಗಿದ. ಆದರೆ ನಿದ್ರೆ ಮಾತ್ರ ಆತನ ಬಳಿ ಸುಳಿಯಲಿಲ್ಲ.

೪

ಆ ರಾತ್ರಿಯನ್ನು ನಿದ್ದೆಯಿಲ್ಲದೆ ಕಳೆದವನು ನಾಯಕನೊಬ್ಬನೇ ಅಲ್ಲ; ಮುದ್ದಣ್ಣ, ಅವನ ಮೂರು ಮಂದಿ ಸೋದರರಿಗೂ ನಿದ್ದೆ ಇರಲಿಲ್ಲ. ನಾಯಕನಿಂದ ಒಂದು ದಿನದ ಅವಧಿಯನ್ನು ಪಡೆದು ಬಂದ ಮುದ್ದಣ್ಣ ಚಿಂತೆಯಷ್ಟೇ ಅಲ್ಲ, ತನ್ನ ಜನ್ಮದಲ್ಲೇ ಎಂದೆಂದೂ ಅನುಭವಿಸದಂಥ ಅಪಮಾನದ ಕಾಳ್ಕಿಚ್ಚಿನಲ್ಲಿ ಬೇಯುತ್ತಿದ್ದ. ಅವನು ಅರಮನೆಯಲ್ಲಿದ್ದಾಗಲೇ ನಾಯಕನ ಮೇಲೆ ಹಾಯಬೇಕೆನ್ನುವ ಕೈಗಳನ್ನು ಅಸೀಮ ಸ್ಮರಣೆಯಿಂದ ಬಿಗಿ ಹಿಡಿದು ಬಂದಿದ್ದ. ಅರಮನೆಯನ್ನು ಬಿಟ್ಟು ಹೊರಗೆ ಬರುತ್ತಿದ್ದ ಹಾಗೆಯೇ, ಅವನ ಹೃದಯದ ಹುತ್ತದಲ್ಲಿ ಅವಿತಿದ್ದ ಕ್ರೋಧದ ಕರಾಳಸರ್ಪ ಹೆಡೆ ಬಿಚ್ಚಿ ಬುಸುಗುಟ್ಟಲಾರಂಭಿಸಿತು.

ಆತನಿಂದ ಅರಮನೆಯಲ್ಲಿ ನಡೆದುದನ್ನು ಕೇಳಿದ ಅವನ ಮೂವರು ಸೋದರರೂ ಅವನಷ್ಟೇ ಕೆರಳಿ ಉರಿಯುತ್ತಿದ್ದರು.

"ಆ ಕುನ್ನಿಯನ್ನು ಅಲ್ಲೇ ಹೊಸಗಿ ಬರಬೇಕಾಗಿತ್ತು. ಹೇಗೂ ನಾನು ಹತ್ತಿರದಲ್ಲೇ ಐವತ್ತು ಮಂದಿ ಸೈನಿಕರೊಂದಿಗೆ ಕಾದಿದ್ದೆ.

ಯಾರಾದರೂ ಕಮಕ್-ಕಿಮಕ್ ಎಂದಿದ್ದರೆ, ಅರಮನೆಗೇ ಬೆಂಕಿ ಹಚ್ಚಿ ಇದಿರಾದವರನ್ನು ತರಿದೊಟ್ಟುತ್ತಿದ್ದೆವು."

—ಎಂದ ರಾಯಣ್ಣ, ಉಕ್ಕಿದ ರೋಷದಲ್ಲಿ ಮಾತನಾಡಲೂ ಆಗದೆ, ಕುಳಿತಿರಲೂ ಆಗದೆ, ಕೆಂಡಕಾರುವ ಕಣ್ಣುಗಳಿಂದ ಶೂನ್ಯವನ್ನು ದಿಟ್ಟಿಸುತ್ತಾ ಅತ್ತಿಂದಿತ್ತ ಓಡಾಡುತ್ತಿದ್ದ ಮುದ್ದಣ್ಣನ ಮೊಗವನ್ನು ನೋಡಿ.

"ಅಷ್ಟೇಕೆ—ನೀವು ಆಗಲಿ ಎನ್ನುವುದಾದರೆ ಕತ್ತಿಗೆ ಶ್ರಮವೂ ಬೇಕಿಲ್ಲ. ಅರಮನೆಗೆ ಸುರಂಗ ಮದ್ದಿಟ್ಟು ಉಡಾಯಿಸಿ ಬಿಡುತ್ತೇನೆ. ಅಲ್ಲಿ ಅರಮನೆ ಇತ್ತು ಎಂಬ ಗುರುತೂ ಉಳಿಯಬಾರದು. ಅದಕ್ಕೆ ಅನುಕೂಲವಾದ ಸ್ಥಳ ಯಾವುದೆಂಬುದನ್ನು ನಾನು ಬಲ್ಲೆ."

—ಎಂದ, ಅರಮನೆಯ ಕಾರ್ಯಭಾರಿಯಾಗಿದ್ದು ಅದರ ಒಳಹೊರಗನ್ನೆಲ್ಲಾ ಬಲ್ಲ ಚುಕ್ಕಣ್ಣ.

"ಒಂದು ಗಳಿಗೆ ಸುಮ್ಮನಿರಿ—ಮಳೆಗಾಲದ ಕಪ್ಪೆಗಳಂತೆ ಒಟಗುಟ್ಟಬೇಡಿ. ನಿಮ್ಮ ಸಲಹೆ ಬೇಕಾದಾಗ ಕೇಳುತ್ತೇನೆ".

—ಎಂದ, ಅವರ ಮಾತು ಕೇಳಿ ತಾಳ್ಮೆ ಸೋತ ಮುದ್ದಣ್ಣ, ಸಿಟ್ಟಿನಲ್ಲಿ ತನ್ನವರ ಮೇಲೇ ಹಾರಿಬಿದ್ದು. ಅವನ ಸಿಟ್ಟಿನ ಮಾತನ್ನು ಕೇಳಿ ಅವರಿಬ್ಬರೂ ಪ್ರೀತಿಸುವ ಕೈಯಿಂದಲೇ ಪೆಟ್ಟುತಿಂದ ನಾಯಿಯಂತೆ ಸುಮ್ಮನಾಗಿ, ಮುದ್ದಣ್ಣನ ರೋಷಭೀಕರವಾದ ಮೊಗವನ್ನೇ ನೋಡುತ್ತಾ ಕುಳಿತರು.

ಮುದ್ದಣ್ಣನ ಮನಸ್ಸು, ಅವನಷ್ಟೇ ಹಿಂಸಾಪೂರ್ಣವಾದ ಪ್ರತೀಕಾರದ ಯೋಜನೆಗಳನ್ನು ಚಿಂತಿಸಿ, ತಲೆಯಲ್ಲಿ ಬಂದ ನೂರಾರು ಯೋಚನೆಗಳಲ್ಲಿ ಯಾವುದು ಸರಿ ಎಂದು ಹಿಂಜಿ ನೋಡುತ್ತಿತ್ತು. ನಾಯಕನಾಡಿದ ಒಂದೊಂದು ಮಾತೂ ಅವನ ಮೆದುಳಿನಲ್ಲಿ ಶಿಲಾಲಿಪಿಯಂತೆ ಸ್ಥಿರವಾಗಿ ನಿಂತು, ತಿರುಗಿದತ್ತ ಅವನ ಮೆದುಳನ್ನು ಮುಳ್ಳಿನಿಂದ ಇರಿಯುತ್ತಿತ್ತು.

ಲಿಂಗಣ್ಣನಾಯಕ ಇನ್ನು ಉಳಿಯಕೂಡದೆಂಬುದೇನೋ ಅವನ ಮನಸ್ಸಿನಲ್ಲಿ ನಿಶ್ಚಯವಾಗಿತ್ತು. ಆದರೆ ಹೇಗೆ ಅವನನ್ನು ಕೊನೆಗೊಳಿಸ

ಬೇಕು, ಅವನು ಮಾಡಿದ ಅಪಮಾನದ ಹಗೆ ತೀರಿಸಿ, ಬಳಿಕ ತಲೆ ತೆಗೆಯುವ ಉತ್ತಮ ಮಾರ್ಗ ಯಾವುದು, ಎಂದು ಅವನು ಚಿಂತಿಸುತ್ತಿದ್ದ. ಅದರೊಂದಿಗೆ ಇದು ಬರೀ ನಾಯಕನ ಕೊಲೆಯಲ್ಲಿಯೇ ಮುಕ್ತಾಯವಾಗಬಾರದು; ಮತ್ತೆ ದುರ್ಗದ ಯಾವ ನಾಯಕನೂ ತನ್ನಿದುರು ನಿಲ್ಲದಂತೆ, ಅಧಿಕಾರ ಸಮಸ್ತವೂ ತನ್ನ ಕೈವಶವಾಗಬೇಕು; ದುರ್ಗದ ಅಧಿಕಾರ ಚಕ್ರ ತಾನು ಸೂಚಿಸಿದಂತೆ ನಡೆಯಬೇಕು; ತನ್ನ ಹೆಸರು ಕೇಳಿದರೂ ಇದಿರಾಡಲು ನಡುಗಬೇಕು—ಆ ರೀತಿ ಈ ಪ್ರಸಂಗವನ್ನು ಮುಕ್ತಾಯಗೊಳಿಸುವ ದಾರಿ ಯಾವುದೆಂದು ಯೋಚಿಸಿ ಕೊನೆಗೊಂದು ನಿರ್ಧರಕ್ಕೆ ಬಂದ. ಆ ನಿರ್ಧರಕ್ಕೆ ಬಂದ ಕೂಡಲೇ ಭಯಂಕರ ತೃಪ್ತಿಯ ಪಿಶಾಚ ಮಂದಹಾಸ ಅವನ ಮುಖದಲ್ಲಿ ಮೂಡಿ, ಹೇಳಿದ—

"ಹೀಗೆ ಮಾಡುವುದು ಸರಿ."

ಇದ್ದಕ್ಕಿದ್ದ ಹಾಗೇ ಮುದ್ದಣ್ಣನಾಡಿದ ಅರ್ಧ ಮಾತನ್ನು ಕೇಳಿ, ಚಕಿತರಾಗಿ ಆ ಮೂವರೂ ಮಿಕ ಮಿಕ ಅವನ ಮೋರೆಯನ್ನು ನೋಡಿ ಒಟ್ಟಿಗೆ ಕೇಳಿದರು—

"ಹೇಗೆ ಮಾಡುವುದು ಸರಿ?"

"ನಾಯಕನ ತಲೆಯುರುಳುವ ಹೊತ್ತು ಬಂದಿದೆ ರಾಯಣ್ಣ."

"ಈ ರಾತ್ರಿಯೇ ಅದು ಮುಗಿಯಬೇಕಾಗಿತ್ತು."

"ಮತ್ತೆ ಮತ್ತೆ ಅದೇ ಮಾತಾಡಬೇಡ ರಾಯಣ್ಣ. ತಾನು ಅರಕ್ಷಿತನಾಗಿ ನಮ್ಮನ್ನು ಅರಮನೆಗೆ ಕರಸುವಷ್ಟು ಮೂರ್ಖನಲ್ಲ ನಾಯಕ. ತನ್ನ ರಕ್ಷಣೆಗೆ ಸಾಕಷ್ಟು ಸಿದ್ಧತೆ ಮಾಡಿಕೊಂಡಿರದಿದ್ದರೆ, ಅವನ ಬಾಯಿಂದ ದುರಹಂಕಾರದ ಮಾತುಗಳು ಅಷ್ಟು ಸಲೀಸಾಗಿ ಬರುತ್ತಿರಲಿಲ್ಲ. ಅದನ್ನರಿತೇ ಬಿಟ್ಟು ಬಂದೆ."

"ಹಾಗಾದರೆ ಸೈನಿಕರೊಂದಿಗೆ ಸಿದ್ಧವಾಗಿರು ಎಂದು ನನಗೆ ಹೇಳಿದ್ದೇಕೆ?"

"ಅದು ನಾಯಕನ ಕೊಲೆಗಲ್ಲ, ನಮ್ಮ ರಕ್ಷಣೆಗೆಂದು"

"ನಿಮ್ಮ ಮೇಲೆ ಕೈಮಾಡುವಷ್ಟು ದೂರಕ್ಕೆ ಹೋಗುತ್ತಿದ್ದನೇ ಅವನು?"

—ಮುದ್ದಣ್ಣನ ಮಾತನ್ನು ನಂಬಲಾಗದವನಂತೆ ಕೇಳಿದ ಚಿಕ್ಕಣ್ಣ.

"ಪರಶುರಾಮಪ್ಪ, ಭರಮಣ್ಣ ನಮ್ಮ ಕೈಯಲ್ಲಿಲ್ಲದಿದ್ದರೆ, ಖಂಡಿತ ಆ ಪ್ರಯತ್ನ ಮಾಡುತ್ತಿದ್ದ. ಆದರಿಂದಲೇ ನಮಗೂ ಅವನು ನಮ್ಮ ಮೇಲೆ ಕೈಮಾಡನೆಂಬ ಭರವಸೆ ಇದ್ದದ್ದು. ಈಗ ಅದೆಲ್ಲಾ ಮುಖ್ಯವಲ್ಲ. ನಾಯಕರು ನಮಗೆ ವಿಶೇಷ ಕೃಪೆಮಾಡಿ ಒಂದು ದಿನದ ಅವಧಿ ಕೊಟ್ಟಿದ್ದಾರೆ. ಅದನ್ನು ನಾವು ಸರಿಯಾಗಿ ಉಪಯೋಗಿಸಬೇಕು. ಮತ್ತೊಮ್ಮೆ ನಾವು ಈ ನಾಯಕನಿಂದಿರಲಿ, ಯಾವ ನಾಯಕನಿಂದಲೂ, ಈ ಬಗೆಯ ಮಾತು ಕೇಳುವ ಪರಿಸ್ಥಿತಿ ಬರಬಾರದು—ಈ ಬಾರಿ ಹಾಗೆ ಇತ್ಯರ್ಥವಾಗಬೇಕು. ಚುಕ್ಕಣ್ಣ ಕೊಂಚ ಜಾಣ್ಮೆಯಿಂದ ನಡೆದುಕೊಂಡಿದ್ದರೆ, ಅರಮನೆ ನಮ್ಮ ಕೈತಪ್ಪಿ ಹೋಗುತ್ತಿರಲಿಲ್ಲ."

"ಈಗಲೂ ಅರಮನೆಯಲ್ಲಿ ನಮ್ಮವರು ಸಾಕಷ್ಟು ಜನ ಇದ್ದಾರೆ."

"ಇರಬಹುದು. ಆದರೆ ಅವರಲ್ಲಿ ಎಷ್ಟು ಜನ ಹೊರಗಿದ್ದಾರೆ, ಎಷ್ಟು ಜನ ಅರಮನೆಯಲ್ಲಿ ಕೊಳೆಯುತ್ತಿರಬಹುದು ಎಂದು ಬಲ್ಲೆಯಾ? ನಾಯಕ ನಿದ್ರಿಸುತ್ತಿಲ್ಲ ಚುಕ್ಕಣ್ಣ, ಎಚ್ಚರವಾಗಿದ್ದಾನೆ."

"ಹೂ. ತನ್ನ ಸಾವನ್ನು ತಾನೇ ಆಹ್ವಾನಿಸುವಷ್ಟು ಎಚ್ಚರವಾಗಿದ್ದಾನೆ! ಶುದ್ಧ ದುರಹಂಕಾರದ ಮೊಟ್ಟೆ."

—ಉಕ್ಕಿದ ಕಿನಿಸನ್ನು ಕಠೋರವ್ಯಂಗ್ಯವಾಗಿ ವ್ಯಕ್ತಪಡಿಸಿ ಹೇಳಿದ ರಾಯಣ್ಣ.

"ಈಗ ಹೆಂಗಸರಂತೆ ಕಿಡಿನುಡಿಗಳಲ್ಲೇ ಕಾಲ ಕಳೆಯುವ ಹೊತ್ತು ಇದಲ್ಲ, ರಾಯಣ್ಣ, ನಾವು ಅಂದುಕೊಂಡುದು ಆಗಬೇಕೆಂದರೆ, ಒಂದು ಗಳಿಗೆಯೂ ಬಿಡುವಿಲ್ಲ. ಕೂಡಲೇ ಕಾರ್ಯ ಪ್ರವೃತ್ತರಾಗಬೇಕು."

"ಏನು ಮಾಡಬೇಕು ಹೇಳಿ—ಅದಕ್ಕೆ ಸಿದ್ಧವಾಗಿದ್ದೇವೆ."

"ಮೇಲುದುರ್ಗದಲ್ಲಿರುವ ಸೇನೆಯಲ್ಲಿ ಎಷ್ಟು ನಮ್ಮ ಕಡೆಗಿದೆ? ಗುರಿಕಾರರೆಲ್ಲರೂ ನಮ್ಮ ಮಾತನ್ನು ಕೇಳುತ್ತಾರೆಯೇ ಚಿಕ್ಕಣ್ಣ?"

"ನಮ್ಮ ಮಾತು ಕೇಳದವರು ಸೆರೆಮನೆಯಲ್ಲಿ ಕೊಳೆಯುತ್ತಿದ್ದಾರೆ. ಉಳಿದವರಾರೂ ನಮಗೆ ಇದಿರಾಡುವುದಿಲ್ಲ."

"ಅದು ನಂಬಬಹುದಾದ ಮಾತೋ, ಅಥವಾ ಅತಿ ಆತ್ಮವಿಶ್ವಾಸದ ಊಹೆಯೋ?"

"ನಂಬಲಾಗದಂಥ ಮಾತನ್ನು ನಾನೆಂದಾದರೂ ಹೇಳಿದ್ದೇನೆಯೇ"

"ನೀನು ಎಂದಾದರೂ ಹೇಳಿದೆ ಎನ್ನುವುದಿಲ್ಲ. ಆದರೆ ಈ ಬಾರಿ ಎಳ್ಳುಕಾಳು ಮುಳ್ಳುಮೊನೆಯಷ್ಟು ಗುರಿ ತಪ್ಪಬಾರದು. ಆದಕ್ಕಾಗಿ ಹೇಳುತ್ತಿದ್ದೇನೆ. ಯಾರಲ್ಲಿಯಾದರೂ ಅಲ್ಪ ಸಂಶಯವಿದ್ದರೂ ಮೊದಲೇ ಎಚ್ಚರಿಕೆಯಾಗಿರುವುದು ಮೇಲು."

"ಖಂಡಿತವಾಗಿಯೂ ಅಂಥ ಅನುಮಾನಕ್ಕೆ ಅವಕಾಶವೇ ಇಲ್ಲ."

"ಅರಮನೆಯ ವಿಚಾರದಲ್ಲೂ ಚುಕ್ಕಣ್ಣ ಹಾಗೆಯೇ ಹೇಳುತ್ತಾ ಇದ್ದ. ಆದರೆ ದ್ರೋಹದ ಸರ್ಪ ಮೊದಲು ಅಲ್ಲಿಯೇ ಹೆಡೆಬಿಚ್ಚಿದ್ದು ಎಂಬುದು ನೆನಪಿನಲ್ಲಿರಲಿ ಚಿಕ್ಕಣ್ಣ. ಸೇನೆಯ ವಿಷಯದಲ್ಲೂ ನಮ್ಮ ಮೈ ಮರೆವಿನಿಂದ ಹಾಗಾದರೆ, ನಾವು ದುರ್ಗಾಧಿಪತಿಗಳಾಗಲು ಯತ್ನಿಸುವುದ ಕ್ಕಿಂತ ಇನ್ನೂ ಅವಕಾಶವಿರುವಾಗಲೇ, ತಲೆಯಮೇಲೆ ಬಟ್ಟೆ ಹಾಕಿ ಕೊಂಡು, ಮುಖಮುರೆಸಿಕೊಂಡು ದುರ್ಗದಿಂದ ತಲೆ ತಪ್ಪಿಸಿಕೊಳ್ಳುವುದು ಮೇಲು."

"ಚುಕ್ಕಣ್ಣನಿಂದಾದ ಮೈಮರೆವು ನಮ್ಮಿಂದ ಆಗುವುದಿಲ್ಲ. ಯುದ್ಧಕ್ಕೆ ಕತ್ತಿಯನ್ನು ಮಸೆದಿಟ್ಟುಕೊಂಡಂತೆ ಸೇನೆಯನ್ನು ಸಿದ್ಧ ವಾಗಿಯೇ ಇಟ್ಟುಕೊಂಡಿದ್ದೇವೆ."

"ನಾನೂ ಮೈಮರೆಯುಲಿಲ್ಲ ಅಣ್ಣ. ಅಲ್ಲಿ ನಮಗಾಗದವರು ಹೇಗೆ ಸೇರಿಕೊಂಡರೆಂಬುದು ಇನ್ನೂ, ಎಷ್ಟು ಯೋಚಿಸಿದರೂ ನನಗೆ ಅರ್ಥ ವಾಗುತ್ತಿಲ್ಲ."

—ತನ್ನ ಮೇಲೆ ಬಂದ ಆಪಾದನೆಯನ್ನು ಸಹಿಸಲಾಗದೆ ಹೇಳಿದ ಚುಕ್ಕಣ್ಣ.

"ಅರ್ಥವಾಗಲೇ ಇಲ್ಲವೇ? ಹೋಗಲಿ ಬಿಡು. ಅದು ಒಂದೊಂದು ಮೆದುಳಿನ ಲಕ್ಷಣ. ಅಲ್ಲದೆ ಮೆದುಳಿನ ಕೆಲಸ ನಿನಗೆ ಹೇಳಿ ದ್ದಲ್ಲ. ಆದ್ದರಿಂದಲೇ ನಾನು ಹೇಳುವುದು ಎಲ್ಲರೂ ಮೆದುಳು ಉಪ ಯೋಗಿಸಲು ಹೋಗಬೇಡಿ; ಅದನ್ನು ನನಗೆ ಬಿಟ್ಟು ನಾನು ಹೇಳಿದಂತೆ ಕೇಳಿ ಎಂದು. ಮೈಗೆ ಎರಡುಕೈ ಇದ್ದರೂ ಮೆದುಳು ಒಂದೇ ಇರು ವುದು. ಈಗಲೂ ಅಷ್ಟೆ—ನೀವು ಮೆದುಳನ್ನು ಉಪಯೋಗಿಸ ಹೊರಟರೆ ಕೆಲಸವಾಗುವುದಿಲ್ಲ, ಹೇಳಿದಷ್ಟು ಕೇಳಬೇಕು."

"ಅಣ್ಣನವರ ಮಾತು ನಿಜ. ನಾವಿಂದು ಈ ಅಧಿಕಾರದಲ್ಲಿರುವುದು ಅಣ್ಣನವರ ಮೆದುಳಿನ ವರದಾನ."

—ಎಂದ ರಾಯಣ್ಣ ಮುದ್ದಣ್ಣನ ರಾಗಕ್ಕೆ ತಾಳಹಾಕುತ್ತಾ.

"ಆ ಮಾತಿನ ಚರ್ಚೆ, ಪ್ರಶಂಸೆಗಳು ಆಮೇಲಾಗಲಿ. ಈಗ ಚಿಕ್ಕಣ್ಣ, ನೀನೂ ರಾಯಣ್ಣ, ಇಬ್ಬರೂ ಒಂದು ಕೆಲಸಮಾಡಬೇಕು."

"ಏನು ಹೇಳಿ."

'ನೀವು ಈಗಲೇ ಹೊರಟು ಸೇನೆಯ ಗುರಿಕಾರರನ್ನೆಲ್ಲಾ ಕಂಡು ಬೆಳಗಿನ ಜಾವದ ಪಹರೆ ಬದಲಾಗುವ ವೇಳೆಗೆ, ಎಲ್ಲ ಕಡೆಯಲ್ಲೂ ನಮ್ಮ ಕಡೆಯವರೇ ಕಾವಲಿಗಿರುವಂತೆ ಏರ್ಪಾಟು ಮಾಡಬೇಕು. ಹಾಗೆಯೇ, ಒಂಟಿಯಾಗಿ ಯಾರನ್ನೂ ಕಾಣಲು ಹೋಗಬೇಡಿ. ಯಾರ ಬಗ್ಗೆ ಕೊಂಚ ಸಂಶಯ ಬಂದರೂ ಅವರನ್ನು ಉಳಿಸಬೇಡಿ. ಕಿಡಿ ಸಂಶಯ ಕಂಡರೂ ಅದನ್ನು ನಿರ್ದಾಕ್ಷಿಣ್ಯವಾಗಿ ತುಳಿದು ಒರೆಸಿ ಬಿಡಬೇಕು. ಮೈಮರೆತರೆ ನಿಮ್ಮ ತಲೆ ಉಳಿಯುವುದಿಲ್ಲವೆನ್ನುವುದನ್ನು ನೆನಪಿನಲ್ಲಿಟ್ಟುಕೊಂಡು ವರ್ತಿಸಿ."

"ಮುಂದೆ?"

"ಮೇಲುದುರ್ಗ, ಕೆಳದುರ್ಗಗಳಲ್ಲಿ ನಾಳೆಯೊಂದು ದಿನ ಒಂದು ಪಿಳ್ಳೆಯೂ ಮನೆಬಿಟ್ಟು ಹೊರಹೊರಡಬಾರದು. ಬೀದಿಬೀದಿಗೂ ಕೋವಿಯಾಳುಗಳ ಕಾವಲು ಹಾಕಿ, ಅವರಿಗೆ ಚೆನ್ನಾಗಿ ಕಳ್ಳುಕುಡಿಸಿ ಹೊರಬಂದವರ ತಲೆ ಉಳಿಸಕೂಡದೆಂದು ಹೇಳಿ. ನಾಳೆಯೊಂದು ದಿನ ಎಷ್ಟು ತಲೆ ಬಿದ್ದರೂ ಸರಿಯೆ. ಮತ್ತೆ ನಮ್ಮ ವಿರುದ್ಧ ಎತ್ತುವ ತಲೆಯೊಂದೂ ಇರಬಾರದು."

"ಆ ಮಾತು ನಮಗೆ ಬಿಡಿ."

—ಎಂದ ರಾಯಣ್ಣ, ಉತ್ಸಾಹದಿಂದ.

"ನಾನು ಮಾಡುವುದೇನೂ ಇಲ್ಲವೇ? ನಾನು ಯಾವ ಕೆಲಸಕ್ಕೂ ಬಾರದವನೆಂದೇ ತೀರ್ಮಾನಿಸಿಬಿಟ್ಟಿರಾ?"

—ಈ ನೆತ್ತರೋಕುಳಿ ಚೆಲ್ಲುವ ಕಾಮನ ಹಬ್ಬದಲ್ಲಿ ತನಗೇನೂ ಪಾಲಿಲ್ಲವೇನೋ ಎಂಬ ನಿರಾಶೆಯಲ್ಲಿ ಕೇಳಿದ ಚಿಕ್ಕಣ್ಣ.

"ನೀನು ಮಾಡುವ ಕೆಲಸವೂ ಇದೆ ಚುಕ್ಕಣ್ಣ."

"ಏನು ಹೇಳಿ?"

"ಅರಮನೆಗೆ ಎಲ್ಲೆಲ್ಲಿ ನೆಲಮಾರ್ಗಗಳಿವೆ ಎಂದು ನಿನಗೆ ಗೊತ್ತಿಲ್ಲವೇ?"

"ಗೊತ್ತಿದೆ."

"ಸರಿ. ಆ ನೆಲಮಾರ್ಗಗಳಿಗೆಲ್ಲಾ ನೀನು ಕಾವಲುಕಟ್ಟು ಮಾಡಬೇಕು. ನೆಲಮಾರ್ಗದಿಂದ ಯಾರೂ ತಪ್ಪಿಸಿಕೊಂಡು ಹೋಗಲು ಅವಕಾಶವಿರಕೂಡದು."

"ಅವಕಾಶವೇ—ಯಾರ ತಲೆಯಾದರೂ ಅಲ್ಲಿ ಕಾಣಲಿ. ನಾಯಕ ಆ ಮಾರ್ಗವಾಗಿ ಬಂದರೆ ಸಾಕು, ನಿನ್ನೆ ಮಾಡಿದ ಅಪಮಾನಕ್ಕೆ ಸರಿಯಾದ ಪ್ರತಿಮಾಡುತ್ತೇನೆ."

—ಎಂದ ಚುಕ್ಕಣ್ಣ ಕರ್ಕಶಧ್ವನಿಯಲ್ಲಿ.

"ನಾಯಕರ ವಿಚಾರ ನಮಗಿರಲಿ. ಅದು ನಮ್ಮ ಖಾಸಾ ಬೇಟೆ. ಅದನ್ನು ಆಡಿಸಿ ಆಡಿಸಿ ಕೊಲ್ಲಬೇಕು. ಆ ವಿಚಾರವನ್ನು ನಮಗೆ ಬಿಟ್ಟು, ಉಳಿದದ್ದನ್ನು ನಾವು ಹೇಳಿದಂತೆ ಮಾಡಿ. ಇನ್ನು ಹೊರಡಿ."

—ಎಂದ ಮುದ್ದಣ್ಣ ಧೃಡ ನಿರ್ಧರದ ಧ್ವನಿಯಲ್ಲಿ.

ಅವನ ಮೂವರು ಸೋದರರೂ ತಮಗೆ ಗೊತ್ತಾದ ಕೆಲಸಮಾಡಲು ಹೊರಟರು. ಬಾಗಿಲ ಬಳಿಯವರೆಗೂ ಅವರು ಹೋದಾಗ, ಮುದ್ದಣ್ಣ ಏನೋ ಜ್ಞಾಪಿಸಿಕೊಂಡು—

"ಚಿಕ್ಕಣ್ಣ, ಹಾಗೇ ದಾಸಣ್ಣನನ್ನು ಇತ್ತ ಕಳುಹಿಸಿ ಹೋಗು. ಹಾಗೇ—ಪ್ರತಿ ಅರ್ಧಗಂಟೆಗೂ ಏನಾಗುತ್ತಿದೆ ಎಂಬುದನ್ನು ನಮಗೆ ಸುದ್ದಿ ಕಳುಹಿಸಬೇಕು. ನಮ್ಮಿಂದ ಆಜ್ಞೆ ಬಂದಕೂಡಲೇ ಹೇಳಿದ ಹಾಗೇ ಮಾಡುವುದಕ್ಕೆ ಸಿದ್ಧವಾಗಿರಬೇಕು ಎಂದು ಎಲ್ಲ ಗುರಿಕಾರರಿಗೂ ತಿಳಿಸಿ. ಮದ್ದಿನ ಉಗ್ರಾಣದ ಬಳಿ ನೀನೇ ಇರಬೇಕು ಚಿಕ್ಕಣ್ಣ. ರಾಯಣ್ಣ ತಾರಾಮಂಡಲ (ನಾಯಕರ ಶಸ್ತ್ರಸಂಗ್ರಹಾಲಯ)ದ ಉಸ್ತುವಾರಿ ನಿನ್ನದು. ನಮ್ಮವರಿಗಲ್ಲದೆ ಬೇರೆ ಯಾರಿಗೂ ಒಂದು ಆಯುಧವೂ ಸಿಗಬಾರದು. ಒಂದು ಹಿಡಿ ಮದ್ದು ಸಿಗಕೂಡದು. ಪ್ರತಿಯೊಂದು ಬತೇರಿಯೂ

ನಮ್ಮವರ ಹತೋಟಿಯಲ್ಲೇ ಇರಬೇಕು. ತಿಳಿಯಿತೇ ? ಹೆಜ್ಜೆಹೆಜ್ಜೆಗೂ ಎಚ್ಚರ—ಆಯಿತು ಇನ್ನು ಹೋಗಿ.”

—ಎಂದು ಬೇಟೆಯ ಮಿಗದ ವಾಸನೆ ತೋರಿಸಿ, ಆದರಮೇಲೆ ಬೇಟೆಯ ನಾಯಿಗಳನ್ನು ಬೆನ್ನು ಚಪ್ಪರಿಸಿ ಛೂ ಬಿಡುವವನಂತೆ ತಮ್ಮಂದಿರನ್ನು ಕಳುಹಿಸಿದ ಮುದ್ದಣ್ಣ. ಘೋರವೃತ್ತಿಯ ಪಿಶಾಚನಿರೀಕ್ಷೆಯಿಂದ, ಅವನ ಕಣ್ಣುಗಳು ಅಗ್ನಿಗೋಲಗಳಂತೆ ಥಳಥಳಿಸಿದವು.

“ಮುಂದೇನು ಮಾಡಬೇಕು ಎಂಬುದನ್ನು ನಾವು ಬಲ್ಲೆವು. ನೀನೂ ಬಲ್ಲೆಯಲ್ಲವೇ ಲಿಂಗಣ್ಣನಾಯಕ—ನಾಳೆ ನಿನಗೇ ತಿಳಿಯುತ್ತದೆ, ಏನು ಮಾಡಬೇಕೆಂಬುದು. ಕರವರತಿ ನಾಯಕರ ಶೃಂಗಾರಸರಸ್ಸು. ಹ್ಹ ಹ್ಹ ಹ್ಹಾ ....ಅದು ನಿನ್ನ ರಕ್ತಸರಸ್ಸಾಗುವುದು ನಾಯಕಾ....ದುರ್ಗ ನಿನ್ನ ಸೊಕ್ಕಿನ ತಲೆಯ ಚಂಡಾಟವಾಡುವ ಬಯಲಾಗುವುದು. ಉರಿ ಉರಿ, ಇವತ್ತೊಂದು ರಾತ್ರಿ ಎಷ್ಟು ಮೆರೆದು ಉರಿಯುತ್ತೀಯೋ ಉರಿ. ಆರುವ ದೀಪದಂತೆ ಧಿಗ್ಗನೆ ಉರಿದು ಸಾಯಿ.”

—ಎಂದು ಗಹಗಹಿಸಿ ನಕ್ಕ; ಮುಗಿಲು ಬೆದರಿ ನಡುಗುವಂತೆ ನಕ್ಕ ದಳವಾಯಿ ಮುದ್ದಣ್ಣ.

೧

ಮೂಡಲಲ್ಲಿ ಕೆಂಪುಕಂಡು ಹಗಲು ಹರಿದ ವೇಳೆಗೆ ಮನೆ ಬಾಗಿಲನ್ನು ತೆಗೆದು ಹೊರಬರಲು ಹೊರಟ ಜನ—ತಲೆಬಾಗಿಲು ತೆಗೆದವರೇ, ಹಗಲೇ ಪಿಶಾಚವನ್ನು ಕಂಡಂತೆ ಹೆದರಿ, ಒಳಸರಿದು ಬಾಗಿಲನ್ನು ಮುಚ್ಚಿ ಒಳಗಿನಿಂದ ಅಗುಳಿಹಾಕಿಕೊಂಡರು. ಮನೆಯ ಮುಂದೆ ನೀರುತಳಿದು, ಬಾಗಿಲು ತೊಳೆದು, ಅಂಗಳದಲ್ಲಿ ರಂಗವಲ್ಲಿ ಹಾಕಬೇಕೆಂದು ಬಂದ ಹೆಂಗಸರನ್ನು ಸೈನಿಕರು ನಿರ್ದಾಕ್ಷಿಣ್ಯವಾಗಿ ಕತ್ತು ಹಿಡಿದು ಒಳಗೆ ತಳ್ಳಿದರು. ಬೀದಿಯುದ್ದಕ್ಕೂ ಅಷ್ಟಷ್ಟು ದೂರಕ್ಕೆ ಒಬ್ಬ ಕೋವಿಯನ್ನು ಹಿಡಿದ ಸೈನಿಕ ಮೃತ್ಯುದೂತನಂತೆ ನಿಂತಿದ್ದುದಲ್ಲದೆ, ಕೆಲವರು, ಆಗಾಗ ಬೆದರು ಗುಂಡುಗಳನ್ನು ಹಾರಿಸುತ್ತಾ, ಕುದುರೆಗಳ ಮೇಲೆ ಸುತ್ತುತ್ತಿದ್ದರು. ಚೌಕದಲ್ಲಿ ಫಿರಂಗಿಯ ಗಾಡಿಗಳು ನಿಂತು, ಗೊಲಂದಾಜರ ಅಪ್ಪಣೆಯಾದ ಕೂಡಲೇ, ಮದ್ದು ತುಂಬಿದ ಫಿರಂಗಿಗೆ ಕೊಳ್ಳಿ ಕೊಡಲು ಆಳುಗಳು ಸಿದ್ಧವಾಗಿ ನಿಂತಿದ್ದರು. ನಗರದ ಮುಖ್ಯ ದ್ವಾರಗಳಾದ ಸಿದ್ದಯ್ಯನ ಬಾಗಿಲು, ರಂಗಯ್ಯನ ಬಾಗಿಲು, ಸಿಹಿನೀರು ಹೊಂಡದ ಬಾಗಿಲು, ಅಗ್ರಹಾರದ ಬಳಿಯ ಬಾಗಿಲುಗಳ ಮೇಲೆ ಫಿರಂಗಿ ಗಳನ್ನಿಟ್ಟಿದ್ದುದೇ ಅಲ್ಲದೆ, ಎರಡೂ ಕಡೆಯ ರಾಜಮಾರ್ಗಗಳ ನಡುವೆ ಇದ್ದ ಉತ್ಸವಾಂಬಾ ದೇವಾಲಯದ ಮಹಾದ್ವಾರದ ಗೋಪುರದ ಮೇಲೆ ಕುಳಿತ ಕರಿಬಾಯಿ ಫಿರಂಗಿ, ಜನಸಂಚಾರವಿಲ್ಲದೆ ಭಣಗುಟ್ಟುವ ಬರಿಯ ಬೀದಿಯನ್ನು ಕಣ್ಣು ಕೆಕ್ಕರಿಸಿ ನೋಡುತ್ತಿತ್ತು.

ಕೆಳದುರ್ಗದಲ್ಲೇ ಹೀಗಿದ್ದರೆ ಮೇಲು ದುರ್ಗದಲ್ಲಂತೂ ಇದ್ದದ್ದೂ ಬಿಗಿ. ಶತ್ರುದಾಳಿ ಸಮಯದಲ್ಲೆಂಬಂತೆ ಕೋಟೆ ಕಾವಲು ಬಲಿತಿತ್ತು. ಹೆಜ್ಜೆಗೊಬ್ಬ ಸೈನಿಕ ನಿಂತು, ಎಲ್ಲೂ ಯಾರೂ ಸುಳಿಯದಂತೆ, ಯಾರೂ ಮನೆಬಿಟ್ಟು ಹೊರಬೀಳದಂತೆ, ಎಲ್ಲೂ ನರಪಿಳ್ಳೆಯ ನೆರಳೂ ಬೀದಿಯಲ್ಲಿ ಬೀಳದಂತೆ ಗಸ್ತು ಸುತ್ತುತ್ತಿದ್ದರು.

ಹಗಲುಹರಿದು, ಅರಮನೆಯ ಮಹಾದ್ವಾರವನ್ನು ತೆಗೆಯಬೇಕೆನ್ನು ವಾಗಲೇ, ಅರಮನೆಯ ಮುಂದೆ ನಿಂತಿದ್ದ ಸೈನಿಕರನ್ನು ಕಂಡು,

ಅರಮನೆಯ ಕಾರ್ಯಭಾರವನ್ನು ಹೊತ್ತ ಹೊರಕೆನಾಯಕ ಮತ್ತೆ ದ್ವಾರ ಬಂಧನ ಮಾಡಿಸಿ, ನಂಬಿಕೆಯ ಆಳುಗಳನ್ನು ದ್ವಾರರಕ್ಷಣೆಗಿರಿಸಿ, ನಾಯಕನ ರಕ್ಷಣೆಗೆಂದು ಓಡಿದ.

ಅವನ ಕೂಗಿಗೆ ಎಚ್ಚತ್ತ ನಾಯಕ, ಅವನ ಭೀತ ಮುಖಮುದ್ರೆಯನ್ನು ಕಂಡು, ಗಾಬರಿಯಾಗಿ, ಹಾಸಿಗೆಯಿಂದ ಧಿಗ್ಗದೆ ಎದ್ದು ಕುಳಿತು ಪಕ್ಕದಲ್ಲಿದ್ದ ಕತ್ತಿಯನ್ನು ಹಿಡಿದೇ—

"ಏನಾಯಿತು ಹೊರಕೆನಾಯಕ?"—ಎಂದ.

"ಪ್ರಭುಗಳು ಬೇಗ ಏಳಬೇಕು. ಘಾತವಾಯಿತು. ಪ್ರಧಾನಿಗಳ ಕಡೆಯವರು ಅರಮನೆಯನ್ನು ಮುತ್ತಿದ್ದಾರೆ. ಪ್ರಭುಗಳು ಇಲ್ಲಿಂದ ಹೊರಡಲು ಸಿದ್ಧರಾಗಬೇಕು."

"ಆ—ಪ್ರಧಾನಿಗಳ ಸಂಚೆ?"

"ನಿನ್ನೆಯೇ ನಾನು ಹೇಳಿದೆ—ಪ್ರಧಾನಿಯನ್ನು ಜೀವಂತನಾಗಿ ಬಿಡಬಾರದೆಂದು. ಪ್ರಭುಗಳು ನನ್ನ ಮಾತು ಕೇಳದೆ ಮೋಸವಾಯಿತು. ಏಳಿ, ಪ್ರಧಾನಿಯ ಸೇನೆ ಅರಮನೆಯ ಮೇಲೆ ಧಾಳಿ ಮಾಡುವ ಮೊದಲೇ ಇಲ್ಲಿಂದ ತಾವು ಪಾರಾಗಬೇಕು."

—ಎಂದು ಹೊರಕೆನಾಯಕ, ತಾನೇ ಅವಸರದಲ್ಲಿ ನಾಯಕನಿಗೆ ಬಟ್ಟೆಹಾಕಿ, ಆಕಸ್ಮಿಕ ಘಟನೆಯಿಂದ ದಿಗ್ಭ್ರಾಂತನಾದ ಅವನನ್ನು ಕೈಹಿಡಿದು ಎಳೆದ.

"ಎಲ್ಲಿಗೆ ಹೋಗಬೇಕು?"

"ನೆಲಮಾರ್ಗದಲ್ಲಿ ಅರಮನೆಯಿಂದಾಚೆ ಹೋಗಿ, ತಿಮ್ಮಣ್ಣನಾಯಕನ ಕೆರೆಯ ಬಳಿ ಇಳಿಯುಬಹುದು. ಒಮ್ಮೆ ದುರ್ಗದಿಂದಾಚೆ ಹೋದರೆ ಬಳಿಕ ಮುಂದೇನು ಮಾಡಬೇಕೆಂದು ಯೋಚಿಸಬಹುದು. ಈಗ ಬೇರಾವ ಮಾತನ್ನು ಚಿಂತಿಸಲೂ ವೇಳೆಯಿಲ್ಲ, ಏಳಿ."

"ಏನು—ಪ್ರಧಾನಿಗೆ ಹೆದರಿ ಪಲಾಯನ ಮಾಡುವುದೇ? ಅದು ನಮ್ಮಿಂದ ಆಗದ ಕಾರ್ಯ."

—ಕ್ರೋಧದಲ್ಲಿ ಕೆರಳಿ ಹೇಳಿದ ನಾಯಕ.

"ಪ್ರಭೂ....ಪ್ರಭೂ....ಆ ಪೌರುಷಕ್ಕಿದುವೇಳೆಯಲ್ಲ. ನಮಗಿಂತ

ನೂರುಪಟ್ಟು ಅವನ ಬಲ ಹೆಚ್ಚಾಗಿದೆ. ಈಗ ಪೌರುಷ ಮೆರೆಸಲು ಹೋದರೆ ಪ್ರಾಣ ಹಾನಿಯಾಗುವುದೇ ವಿನಾ ಬೇರೇನೂ ಆಗುವುದಿಲ್ಲ. ತಾವು ಬದುಕಿದ್ದರೆ, ಬಳಿಕ ಈ ದ್ರೋಹಕ್ಕೆ ಪ್ರತೀಕಾರ ಮಾಡಬಹುದು. ತಮಗೇನಾದರೂ ಆದರೆ ನಮ್ಮೆಲ್ಲರಿಗೂ ಕಣ್ಣು ಕಿತ್ತಂತಾಗುತ್ತದೆ. ಆದುದರಿಂದ ದಯವಿಟ್ಟು ಹೊರಡಿ."

"ನೀವು—?"

"ಪ್ರಭುಗಳು ಸುರಕ್ಷಿತವಾಗಿ ಕೋಟೆ ದಾಟಿದರೆಂದು ತಿಳಿಯುವವರೆಗೂ ಹೇಗಾದರೂ, ಪ್ರಧಾನಿಯ ಸೇನೆ ಒಳಗೆ ನುಗ್ಗದಂತೆ ನಮ್ಮವರು ತಡೆಯುತ್ತಾರೆ. ನೀವು ನನ್ನೊಡನೆ ಬನ್ನಿ."

—ಎಂದ ಹೊರಕೆನಾಯಕ ಅಂಗಲಾಚಿ ಬೇಡುತ್ತಾ. ಬೇರೆ ದಾರಿಕಾಣದೆ, ಮುಂದೇನು ಮಾಡಬೇಕೆಂದು ತೋಚದೆ, ಲಿಂಗಣ್ಣನಾಯಕ ಕನಸಿನಲ್ಲಿರುವವನಂತೆ ಹೊರಕೆನಾಯಕನನ್ನು ಹಿಂಬಾಲಿಸಿದ.

ಅಂತಃಪುರದ ಗೋಡೆಯಲ್ಲಿ ನಿರ್ಮಿತವಾಗಿದ್ದ ನೆಲಮಾರ್ಗದ ಬಾಗಿಲನ್ನು ತೆರೆದು, ಹೊರಕೆನಾಯಕ, ಲಿಂಗಣ್ಣನಾಯಕನನ್ನು ತನ್ನೊಡನೆ ಎಳೆದುಕೊಂಡು ಎತ್ತರವಾಗಿಲ್ಲದ, ಕತ್ತಲುಕವಿದ ನೆಲಮಾರ್ಗದಲ್ಲಿ ತಲೆ ತಗ್ಗಿಸಿ ಆದಷ್ಟು ವೇಗವಾಗಿ ಓಡಿದ. ಅಷ್ಟುದೂರ ಹೋಗುವುದರೊಳಗಾಗಿಯೇ ಓಡುವ ಅವರನ್ನು ಹೊಗೆಯವಾಸನೆ ಇದಿರಾಯಿತು. ಮತ್ತೆ ನಾಲ್ಕು ಹೆಜ್ಜೆ ಇಡುವುದರೊಳಗೆ ಗಾಳಿಯಾಡದ ಮಾರ್ಗದಲ್ಲಿ ತುಂಬಿದ ಹೊಗೆ ಅವರ ಕಣ್ಣು, ಮೂಗನ್ನು ತುಂಬಿ, ಉಸಿರುಕಟ್ಟಿದಂತಾಯಿತು.

"ಅಯ್ಯೋ—ಈ ದಾರಿಯೂ ನಮ್ಮ ಪಾಲಿಗೆ ಇಲ್ಲದಂತಾಯಿತೇ? ದ್ರೋಹಿಗಳು ನೆಲಮಾರ್ಗದ ಆ ಬದಿಗೆ ಹೊಗೆ ಹಾಕಿಸಿದ್ದಾರೆ."

ಎಂದು ಹಂಬಲಿಸಿ ಹೇಳಿದ ಹೊರಕೆನಾಯಕ, ಗಂಟಲಲ್ಲಿ ಹೊಗೆ ಕಟ್ಟಿ ಕೆಮ್ಮುತ್ತಾ.

ಈ ಮಾರ್ಗವನ್ನು ಅವರು ಉಪಯೋಗಿಸಬಾರದೆಂದು ಚುಕ್ಕಣ್ಣ, ನೆಲಮಾರ್ಗದ ಆ ಬದಿಯ ಬಾಯಿಗೆ ಹಸಿ ಸೊಪ್ಪಿನ ಬೆಂಕಿ ಹಾಕಿಸಿ, ಹೊಗೆ ತುಂಬುವಂತೆ ಮಾಡಿದ್ದ.

ಶತ್ರು ಮುತ್ತಿಗೆ ಹಾಕಿದ ಅರಮನೆಯಿಂದ ತಪ್ಪಿಸಿಕೊಂಡು ಹೋಗಲು

ಇದ್ದ ನೆಲಮಾರ್ಗವೂ ತಪ್ಪಿದುದರಿಂದ ಮುಂದೇನು ಮಾಡಬೇಕೆಂದು ಹೊರಕೆನಾಯಕನಿಗೆ ತೋಚದಂತಾಯಿತು. ಅವನೆದೆಯಲ್ಲಿ ಘೋರ ನಿರಾಶೆಯು ಹಾಲಹಲ ಕಡಲಲೆಗಳಂತೆ ಅಪ್ಪಳಿಸಿತು. ಅದರೊಂದಿಗೆ ಹುಚ್ಚು ಕ್ರೋಧವೂ ನರನರಗಳಲ್ಲಿ ಬೆಂಕಿಯ ಹೊಳೆಯಂತೆ ಹರಿಯಿತು.

ಗಳಿಗೆ ಗಳಿಗೆಗೆ ನೆಲಮಾರ್ಗದಲ್ಲಿ ಕವಿದು ದಟ್ಟವಾಗುತ್ತಿದ್ದ ಹೊಗೆಯಲ್ಲಿ ನಿಲ್ಲಲಾರದೆ ಮತ್ತೆ ಬಂದ ದಾರಿಯಲ್ಲೇ ಹಿಂದಿರುಗಿದರು. ಮುಂದೇನು ಮಾಡುವುದೆಂದು ಹೊರಕೆನಾಯಕ ಲಿಂಗಣ್ಣನಾಯಕನ ಮುಖವನ್ನು ನೋಡಿದ. ಅವನ ಮೊಗದಲ್ಲೂ ಭಯಂಕರ ದ್ವೇಷಪೂರ್ಣ ಕ್ರೋಧ ದಳ್ಳುರಿಯಂತೆ ಥಾಳಿಸುತ್ತಿತ್ತು.

"ಈಗ ನಮಗೆ ಉಳಿದಿರುವುದೊಂದೇ ದಾರಿ ಹೊರಕೆನಾಯಕ—ಅದಕ್ಕೆ ಸಿದ್ಧನಾಗು."

"ಏನು ದಾರಿ ಪ್ರಭು?"

"ಕತ್ತಿಹಿಡಿದು, ಶತ್ರುಗಳಮೇಲೆ ಬಿದ್ದು ಆದಷ್ಟು ಮಂದಿಯನ್ನು ಕೊಂದು ನಾವೂ ಸಾಯುವುದು, ಏಳಿ—ಪಲಾಯನದ ಅಪಮಾನವನ್ನು ಶಿವನೇ ತಪ್ಪಿಸಿದ. ಇನ್ನು ವೀರಮರಣಕ್ಕೆ ಸಿದ್ಧರಾಗಿ.

"ನಿಜ ಪ್ರಭು, ಅದೊಂದೇ ಇನ್ನು ಉಳಿದ ದಾರಿ."

—ಹಲ್ಲು ಕಡಿಯುತ್ತಾ ಹೇಳಿದ ಹೊರಕೆನಾಯಕ.

"ಸರಿ. ಹಾಗಾದರೆ, ಶಿವನಿಗೆ ಕಡೆಯ ಪೂಜೆಯೊಪ್ಪಿಸಿ ಸಿದ್ಧರಾಗುತ್ತೇವೆ. ಪೂಜಾಗೃಹದತ್ತನಡೆ."

—ಎಂದು ಲಿಂಗಣ್ಣನಾಯಕ ಅಂತಃಪುರದ ಬಳಿಯಿದ್ದ ಪೂಜಾಗೃಹಕ್ಕೆ ನಡೆದ. ಹೊರಕೆನಾಯಕ, ತನ್ನೊಂದಿಗೆ ಪ್ರಭುಗಳ ಪ್ರಾಣ ರಕ್ಷಣೆಯ ಪಟ್ಟತೊಟ್ಟ ಉಳಿದ ಐದು ಮಂದಿಯೊಂದಿಗೆ ಕತ್ತಿ ಹಿರಿದು, ಪೂಜಾಗೃಹದ ಬಾಗಿಲಲ್ಲಿ ಕಾವಲು ನಿಂತ ಕಾವಲು ನಿಲ್ಲುತ್ತಿದ್ದ ಹಾಗೆಯೇ, ಅರಮನೆಯ ಮಹಾದ್ವಾರದ ಬಾಗಿಲು ಮುರಿದು ಬಿದ್ದ ಸದ್ದು ಕೇಳಿ ಬಂದು ಅದರೊಂದಿಗೆ ಅವನ ಆಶಾಸೌಧವೂ ಉರುಳಿಬಿತ್ತು.

೨

ಅರಮನೆಯ ಮೇಲೆ ದಾಳಿ ಮಾಡಲು ಎಲ್ಲವೂ ಸಿದ್ಧವಾಗಿದೆ ಯೆಂದು ಸುದ್ದಿ ಬಂದ ಕೂಡಲೇ ಆರಿಸಿದ ನೂರುಮಂದಿ ಭಟರೊಂದಿಗೆ ಕರಿಯ ಬಣ್ಣದ ಯುದ್ಧಾಶ್ವವನ್ನೇರಿ, ಅರಮನೆಯತ್ತ ಬಂದ ಮುದ್ದಣ್ಣ, ಮಹಾದ್ವಾರ ಮುಚ್ಚಿದ್ದನ್ನು ಕಂಡು, ಕೂಗಿ ಹೇಳಿದ—

"ಬಾಗಿಲು ತೆರೆಯಿರಿ. ಇಲ್ಲವಾದರೆ ಅರಮನೆ ಉಳಿಯುವುದಿಲ್ಲ."

ಅವನ ಕೂಗಿಗೆ ಪ್ರತ್ಯುತ್ತರವಾಗಿ ಯಾರೂ ಮಾತನಾಡದೆ,ಬಂದೂಕ ವೊಂದು ಸಿಡಿದ ಸದ್ದು ಕೇಳಿ, ಆ ಸದ್ದು ಅಡಗುವಷ್ಟರಲ್ಲಿಯೇ ಗುಂಡಿ ನೇಟು ತಿಂದ ಮುದ್ದಣ್ಣನ ಕುದುರೆ ನೋವಿನಿಂದ ಕೈಕಾಲುಗಳನ್ನು ಝಾಡಿಸುತ್ತಾ ಕೆಳಗುರುಳಿತು. ತಟಕ್ಕನೆ, ಬಳಿಯಲ್ಲಿದ್ದ ಚಾವಡಿಯ ಮರೆಯಲ್ಲಿ ನಿಂತು, ಮುದ್ದಣ್ಣ, ತನ್ನ ಪ್ರೀತಿಯ ಕುದುರೆಯ ಸಾವಿನಿಂದ ಕೆರಳಿ, ಅಷ್ಟು ದೂರದಲ್ಲಿದ್ದ ಫಿರಂಗಿಯ ಬಂಡಿಯವರಿಗೆ—

"ಬಾಗಿಲಿಗೆ ಗುರಿಯಿಟ್ಟು ಉಡಾಯಿಸಿ"—ಎಂದ.

ಅದುವರೆಗೂ ಕಪ್ಪಾಗಿದ್ದ ಫಿರಂಗಿಯ ಬಾಯಿ ಒಂದುಗಳಿಗೆ ಹೊಗೆ ಯುಗುಳಿ, ಮರುಗಳಿಗೆಯೇ ಧಾಂ ಎಂದು ಉರಿಗಾರಿತು. ಆ ಸದ್ದು ಅಡಗುವಷ್ಟರಲ್ಲಿಯೇ ಕಬ್ಬಿಣದ ತಗಡು ಬಿಗಿದ ಮಹಾದ್ವಾರ, ಫಿರಂಗಿಯ ಪೆಟ್ಟಿಗೆ ಕಾಗದದ ಚೂರಿನಂತೆ ಸಿಡಿದು ಹಾರಿ, ಮಹಾದ್ವಾರದ ಗೋಪುರ, ಬುಡ ಕತ್ತರಿಸಿದಂತೆ ಕೆಳಗುರುಳಿತು. ಅದರೊಂದಿಗೆ ಮಹಾದ್ವಾರದ ಮೇಲಿದ್ದ ಸೈನಿಕರೂ ಕೆಳಗುರುಳಿದರು. ಬಾಗಿಲ ಚೂರುಗಳೊಂದಿಗೆ, ಫಿರಂಗಿಯ ಸಿಡಿತಕ್ಕೆ ಸಿಕ್ಕಿ ನಾಲ್ಕಾರು ಕೈಕಾಲು, ತಲೆಗಳೂ ಹದ್ದುಗಳಂತೆ ಹಾರಿ ಕೆಳಗೆ ಕೆಡೆದವು. ಗಾಯಗೊಂಡವರ ಚೀರುಧ್ವನಿ, ಹೊಗೆಹಬ್ಬಿದ ಗಾಳಿಯನ್ನು ಕತ್ತರಿಸಿ ತೇಲಿತು.

ಫಿರಂಗಿಯ ಸಿಡಿತದಿಂದ ಗಾಳಿಯಲ್ಲಿ ಹಬ್ಬಿದ ಹೊಗೆ ಅಡಗುತ್ತಿದ್ದ ಹಾಗೆ, ಮುದ್ದಣ್ಣ ಬೇರೊಂದು ಕುದುರೆಯನ್ನೇರಿ, ಭಟರೊಂದಿಗೆ ಅರಮನೆಯಲ್ಲಿ ನುಗ್ಗಿದ. ಇದಿರಾದ ಒಬ್ಬಿಬ್ಬರನ್ನು ಅವನ ಕತ್ತಿ ಕತ್ತರಿಸಿ ಚೆಲ್ಲಿತು. ಮುಚ್ಚಿದ ಬಾಗಿಲುಗಳು ಮೀಟು ತೊಲೆಗಳ ಏಟಿಗೆ ಮುರಿದು

ಹಾರಿದುವು. ಹೆದರಿ ಪ್ರಜ್ಞೆತಪ್ಪಿ ನೆಲದಲ್ಲಿ ಕೆಡೆದ ದಾಸಿಯರನ್ನು ಕಾಲಡಿಯಲ್ಲಿ ಹೊಸಗುತ್ತಾ, ಯಮುನ ಕೋಣನಂತೆ, ಅರಮನೆಯಲ್ಲಿ ನುಗ್ಗಿತು ಮುದ್ದಣ್ಣನ ಕುದುರೆ.

ಒಂದುಗಳಿಗೆ ಗರಬಡಿದಂತೆ ನಿಶ್ಶಬ್ದವಾಗಿದ್ದ ಅರಮನೆ ಮರುಗಳಿಗೆಯೇ ಹಲಬಗೆಯ ಭಯಂಕರ ಶಬ್ದಗಳ ಆಡುಂಬೊಲವಾಗಿ ನಡುಗಿತು–

ನಾಯಕನನ್ನು ಹುಡುಕಿಕೊಂಡು ಅಂತಃಪುರದತ್ತ ನುಗ್ಗಿದ ಮುದ್ದಣ್ಣ, ಅಂತಃಪುರದ ಮುಚ್ಚಿದ ಬಾಗಿಲಿದಿರು ಬಿಚ್ಚುಗತ್ತಿ ಹಿಡಿದು ನಿಂತ, ಹೊರಕೆನಾಯಕ, ಅವನ ಸಂಗಡಿಗರಾದ ಭಾಷೆಯಾಳುಗಳನ್ನು ಕಂಡು ಭಯಂಕರವಾದ ನಗೆ ನಗುತ್ತಾ ಕೇಳಿದ—

"ಎಲ್ಲಡಗಿದನೋ ನಿಮ್ಮ ನಾಯಕ ಕುನ್ನಿ."

ಹೊರಕೆನಾಯಕ ಮುದ್ದಣ್ಣನ ನೆತ್ತರುಗುದಿಸುವ ಮಾತಿಗೆ ಉತ್ತರ ಕೊಡದೆ; ಅವನ ಮೇಲೆ ಹಾರಿ ಕತ್ತಿಯನ್ನು ಬೀಸಿದ—ಮುದ್ದಣ್ಣ ಅದನ್ನು ನಿರೀಕ್ಷಿಸಿ ಕುದುರೆಯ ಲಗಾಮನ್ನು ಹಿಡಿದು ಹಿಂದೆ ಎಳೆದುದರಿಂದ, ಕುದುರೆಯ ಕತ್ತು ಛಾವಣಿಯ ಎತ್ತರಕ್ಕೆ ಹಾರಿ ಉರುಳಿತು.

ಕೂಡಲೇ ಮುದ್ದಣ್ಣನೊಂದಿಗೆ ಬಂದಿದ್ದ ಸೈನಿಕರು ಹೊರಕೆನಾಯಕನ ಗುಂಪಿನ ಮೇಲೆ ಬಿದ್ದರು. ಆ ಆರುಜನ ಅರವತ್ತು ಜನದಂತೆ ಹೋರಾಡಿದರು, ಚಕ್ರಾಕಾರವಾಗಿ ಕತ್ತಿಯನ್ನು ಬೀಸುತ್ತಾ ಹತ್ತಾರು ಮಂದಿಯನ್ನು ಕೊಂದರು. ಆದರೆ ನೂರು ಜನರ ಇದಿರು ಆರು ಜನ ಎಷ್ಟು ಹೋರಾಡಿಯಾರು? ಹತ್ತು ನಿಮಿಷ ಕಳೆಯುವುದರೊಳಗಾಗಿ, ಕತ್ತರಿಸಿದ ಅವರ ಕತ್ತು ಅರಮನೆಯ ನೆಲದಮೇಲೆ ನೆತ್ತರು ರಂಗವಲ್ಲಿಯನ್ನು ಬರೆದವು. ಮುಚ್ಚಿದ ಬಾಗಿಲೂ ಮುರಿದು ಬಿತ್ತು.

ಅಂತಃಪುರದ ಬಾಗಿಲು ಬೀಳುತ್ತಿದ್ದ ಹಾಗೆಯೇ, ಪೂಜೆ ಮುಗಿಸಿ ಸಿದ್ಧನಾದ ಲಿಂಗಣ್ಣನಾಯಕ ಕತ್ತಿ ಹಿರಿದು, ಕೆಣಕಿದ ಹುಲಿಯಂತೆ ಸೈನಿಕರ ಮೇಲೆ ಹಾರಿದ.

"ನಾಯಕರನ್ನು ಕೊಲ್ಲಕೂಡದು. ಸೆರೆಹಿಡಿಯ ಬೇಕು. ಎಚ್ಚರಿಕೆ"

—ಎಂದು ಕೂಗಿ ಹೇಳಿದ ಮುದ್ದಣ್ಣ.

"ಜೀವಂತನಾಗಿ ನನ್ನನ್ನು ಸೆರೆ ಹಿಡಿವ ಆಳಿಯಾಸೆಯನ್ನು ಬಿಡು."

—ಎಂದ ಲಿಂಗಣ್ಣನಾಯಕ, ಸುತ್ತುವರಿದ ಸೈನಿಕರನ್ನು ಹತ್ತಿರ ಬರಲು ಬಿಡದೆ ಪಟ್ಟಾವರಸೆಯಿಂದ ಕತ್ತಿ ಬೀಸುತ್ತಾ. ಹೋರಾಡುವವರ ಗುಂಪಿನಿಂದ ಅಷ್ಟು ದೂರ ನಿಂತ ಮುದ್ದಣ್ಣ ತನ್ನ ಬಳಿಯುಲ್ಲಿದ್ದ ದಾಸಣ್ಣನಿಗೆ ಕಣ್ಣುಸನ್ನೆ ಮಾಡಿದ. ದಾಸಣ್ಣ ಗುಂಪಿನಲ್ಲಿ ನುಸುಳಿ, ನಾಯಕನ ಹಿಂಭಾಗ ಸೇರಿ, ಹೊತ್ತು ಕಾಯುತ್ತ ನಿಂತು, ನಾಯಕನ ಬೆನ್ನು ತನ್ನತ್ತ ತಿರುಗಿದಾಗ, ಗುರಿಯಿಟ್ಟು, ನಾಯಕನ ಕತ್ತಿ ಹಿಡಿದ ತೋಳಿಗೆ ಕತ್ತಿಯಿಂದ ಹೊಡೆದ. ಕತ್ತಿ ಹಿಡಿದ ನಾಯಕನ ತೋಳು ಕತ್ತರಿಸಿ ಅಷ್ಟು ಧೂರ ಹಾರಿಬಿತ್ತು. ಆ ನೋವಿಗೆ ನಾಯಕನ ಕಣ್ಣಲ್ಲಿ ಕತ್ತಲು ತುಂಬಿತು. ಆ ಕತ್ತಲಡಗಿ ನಾಯಕ ಕಣ್ಣು ಬಿಡುವುದರೊಳಗಾಗಿ, ಹತ್ತಾರು ಕೈಗಳು ಅವನನ್ನು ಹಿಡಿದಿದ್ದವು.

"ನಾಯಕನನ್ನು ಕಟ್ಟಿ ಎಳೆದು ತನ್ನಿ."

—ಎಂದು ಸೈನಿಕರಿಗೆ ಅಪ್ಪಣೆ ಮಾಡಿ, ಮುದ್ದಣ್ಣ, ಮತ್ತೊಬ್ಬ ಸೈನಿಕನ ಕುದುರೆಯನ್ನೇರಿ, ದಾಸಣ್ಣನಿಗೆ "ಅರಮನೆಯ ಕಾವಲು ನಿನ್ನ ಹೊಣೆಗಾರಿಕೆ. ಸರ್ಪಕಾವಲು ಕಾಯಬೇಕು"

ಎಂದು ಹೇಳಿ, ನಾಯಕನತ್ತ ತಿರುಗಿ—

"ಮಹಾಸ್ವಾಮಿಗಳು ಹೀಗೆ ದಯಮಾಡಿಸಬೇಕು."

—ಎಂದ, ಗಹಗಹಿಸಿ ನಗುತ್ತಾ.

"ತೊಲಗಾಚೆ—ನಾಯಿ."

—ಎಂದು ನಾಯಕ ಅಸಹ್ಯದಿಂದ ಮುಖ ಕಿವುಚಿಕೊಂಡು, ಮುದ್ದಣ್ಣನತ್ತ ಉಗುಳಿದ. ಕೂಡಲೇ ಅವನ ಕತ್ತು ಕತ್ತರಿಸಲು ದಾಸಣ್ಣ ಕತ್ತಿ ಎತ್ತಿದ—

"ಅದು ಕೂಡದು ದಾಸಣ್ಣ, ಪ್ರಭುಗಳನ್ನು ಮರ್ಯಾದೆಯಿಂದ ಕರೆತರಬೇಕು. ಗೊತ್ತಿಲ್ಲವೇ ನಿನಗೆ—ಈಗ ದುರ್ಗಕ್ಕೆ ಚಿಕ್ಕಣ್ಣನಾಯಕರು ನಾಯಕರಲ್ಲ, ಶ್ರೀಮನ್ಮಹಾನಾಯಕಾಚಾರ್ಯ, ಕಾಮಗೇತಿ ಕಸ್ತೂರಿ, ಮುಮ್ಮಡಿ ಲಿಂಗಣ್ಣ ಮದಕರಿನಾಯಕರು, ನಮ್ಮನ್ನೆಲ್ಲಾ ಆಳುವ ಮಹಾಸ್ವಾಮಿಗಳು. ಅವರಿಗೆ ಸಲ್ಲಬೇಕಾದ ಮರ್ಯ್ಯಾದೆಯಿಂದ ಕರೆತನ್ನಿ. ನಾವು ಹೋಗಿ, ಈ ಸಂಜೆ ಮಹಾಪ್ರಭುಗಳ ಸ್ವಾಗತಕ್ಕೆ

ತಕ್ಕ ಸಿದ್ಧತೆಮಾಡುತ್ತೇವೆ. ಪ್ರಭುಗಳು ಅದುವರೆಗೂ ಸೇವಕರ ಉದ್ಧಟತನವನ್ನು ಮನ್ನಿಸಬೇಕು."

—ಎಂದು ಎದೆ ಇರಿವ ಕ್ರೂರ ಅಣಕದ ನಗೆನಗುತ್ತಾ ಹೇಳಿ, ಅರಮನೆಯಲ್ಲೇ ಕುದುರೆಯನ್ನು ಓಡಿಸಿ ನಡೆದ.

೩

ಆ ಸಂಜೆ ಚಂದ್ರೋದಯವಾದ ಕೊಂಚ ಹೊತ್ತಿನಮೇಲೆ ಅರಮನೆಯತ್ತಣಿಂದ ವಿಚಿತ್ರವಾದೊಂದು ಮೆರವಣಿಗೆ ಹೊರಟಿತು. ಆದರೆ ಸೇನೆಯವರು ಕಾವಲು ಕಾಯುತ್ತಿದ್ದ ಬಿಗಿದ ಬಾಗಿಲುಗಳ ಹಿಂದೆ, ಭೀತಿಯಿಂದ ಅವಿತ ಪುರಜನಗಳ ಪಾಲಿಗೆ ಅದನ್ನು ನೋಡುವ ಯೋಗವಿರಲಿಲ್ಲ!

ಅರಮನೆಯ ಮುರಿದುಬಿದ್ದ ಮಹಾದ್ವಾರದ ಸಾಲು ಕಹಳೆಗಳು ಮೊಳಗಿದ ಕೂಡಲೇ, ಡೋಲು, ಉರುಮೆ, ತಮಟೆ ಮೊದಲಾದ ಉಗ್ರ ವಾದ್ಯಗಳ ಮೊರೆತ ಆರಂಭವಾಗಿ, ಸ್ವಲ್ಪ ಹೊತ್ತಿನಲ್ಲೇ ಬಿಚ್ಚುಗತ್ತಿಯ ಕಾವಲಿನ ನಡುವೆ, ಬರಿಗಾಲು, ಬರಿನೆತ್ತಿಯಲ್ಲಿ, ಲಿಂಗಣ್ಣನಾಯಕ ಹೊರಗೆ ಬಂದ. ಅವನ ಉಳಿದಿದ್ದ ಒಂದೇ ತೋಳಿಗೆ ಸರಪಣಿ ಬಿಗಿದು, ಅದನ್ನು ಒಬ್ಬ ಆಳು ಹಿಡಿದಿದ್ದ. ಅವನ ಹಣೆಗೆ ಕುಂಕುಮವನ್ನು ಬಳಿದು, ಕತ್ತಿಗೆ ಕೆಂಪು ಕಣಗಿಲೆ, ದಾಸವಾಳದ ಹೂಗಳ ಮಾಲೆಯನ್ನು ಹಾಕಿದ್ದರು.

ಮುಖವೆತ್ತದೆ ಕತ್ತುಬಾಗಿಸಿ, ಅರಮನೆಯ ಮುಂದೆ ಬಂದು ನಿಂತ ನಾಯಕನನ್ನು ಮುಂದೆ ನಡೆಸಲು, ಅವನ ಹಿಂದೆ ನಿಂತ ಸೈನಿಕ, ಕತ್ತಿಯ ತುದಿಯಿಂದ ಅವನ ಪಕ್ಕೆಯನ್ನು ತಿವಿದು ಮುಂದೆ ಒತ್ತಿದ. ಆ ನೋವು ತಡೆಯಲಾರದೆ ನಾಯಕ ಮುಂದೆ ಹೆಜ್ಜೆಹಾಕಿದ. ಆದರೆ ಮುಖವನ್ನು ಮಾತ್ರ ಮೇಲೆತ್ತಲಿಲ್ಲ.

ನಾಯಕ ಮುಂದೆ ಹೆಜ್ಜೆ ಇಟ್ಟಕೂಡಲೇ, ಮತ್ತೊಮ್ಮೆ ಡೋಲು, ತಮಟೆ ಉರುಮೆಗಳು ಮೊರೆದು, ಕುಡಿದ ಕೆಲವರು, ಉತ್ಸಾಹದಿಂದ 'ಕೆಹ್ಯೋ' ಎಂದು, ಆ ರಣವಾದ್ಯಗಳ ಮೊರೆತದೊಂದಿಗೆ ಸ್ಪರ್ಧಿಸಿ ಕೇಕೆ ಹಾಕಿದರು.

ಸಾಲುಪಂಜು, ಕಕ್ಕಡಗಳ ಕೆಂಬೆಳಕಿನಲ್ಲಿ, ರಣವಾದ್ಯಗಳ ಮೊರೆತ ದಲ್ಲಿ, ಉನ್ಮತ್ತ ಪಶುಕೇಕಾರವದಲ್ಲಿ ಮೆರವಣಿಗೆ ಅರಮನೆಯ ಮುಂದಿ ನಿಂದ ನಡೆಯಿತು.

ಮೇಲುದುರ್ಗದ ರಾಜಮಾರ್ಗದಲ್ಲಿ ನಡೆದ ಮೆರವಣಿಗೆ, ಒಂದೊಂದು ಕೋಟೆಯ ಬಾಗಿಲನ್ನು ದಾಟಿದಾಗಲೂ, ಗೌರವಾರ್ಥ ವಾಗಿ ಎಂಬಂತೆ ಕುಶಾಲು ತೋಪು ಹಾರಿಸಿದರು. ಅಲ್ಲಲ್ಲಿ ನಿಂತ ಕುಡಿದು ಮತ್ತರಾದ ಸೈನಿಕರ ಗುಂಪು ಈ ಮೆರವಣಿಗೆಯನ್ನು ಕಂಡು ಕೇಕೆ ಹಾಕಿ ಚಪ್ಪಾಳೆ ತಟ್ಟಿತು.

ಮೇಲುದುರ್ಗದಿಂದ ಇಳಿದ ಮೆರವಣಿಗೆ, ಕಾಮನ ಭಾವಿಯ ಬಳಿಯ ಅಗ್ರಹಾರದ ಮಾರ್ಗದಲ್ಲಿ ನಿಧಾನವಾಗಿ ನಡೆದು, ಒಡ್ಡಿನ ಬಳಿಗೆ ಹೋಗುವ ಬಾಗಿಲ ಬಳಿ ಬಂತು.

ಅಲ್ಲಿ ಹತ್ತಾರು ಮಂದಿ ದಾಸಿಯರು ಕಲಶ, ಕನ್ನಡಿಗಳೊಂದಿಗೆ ನಾಯಕನನ್ನು ಇದಿರುಗೊಂಡು ಆರತಿ ಎತ್ತಿ, ಇಳೆ ತೆಗೆದ ಬಳಿಕ, ಮೆರವಣಿಗೆ ಮುಂದೆ ನಡೆದು, ಕರವರತಿಯ ಬಳಿಯ ಉದ್ಯಾನವನ್ನು ಸೇರಿತು.

ಮೆರವಣಿಗೆ ಉದ್ಯಾನದ ಬಾಗಿಲಿಗೆ ಬರುತ್ತಿದ್ದ ಹಾಗೆಯೇ ಭವ್ಯ ವಾದ ಉಡುಪು ಧರಿಸಿದ ಮುದ್ದಣ್ಣ, ತನ್ನಂತೆಯೇ ಅಲಂಕೃತರಾದ ತನ್ನ ತಮ್ಮಂದಿರೊಂದಿಗೆ, ನಾಯಕನನ್ನು ಇದಿರುಗೊಂಡು—

"ಮಹಾಸ್ವಾಮಿಯವರು ಇತ್ತ ದಯಮಾಡಿಸಬೇಕು."

ಎಂದು ಮುಂದೆ ಕರೆದೊಯ್ದ. ಆ ಮಾತನ್ನು ಮುದ್ದಣ್ಣ ಹೇಳಿ ದಾಗ ಮೆರವಣಿಗೆಯಲ್ಲಿ ನೆರೆದವರು ಕೇಕೆಹಾಕಿ ನಕ್ಕರು; ವಾದ್ಯಗಳೂ ಕಳ್ಳುಕುಡಿದಂತೆ ಮೊರೆದವು.

ನಾಯಕನನ್ನು ತಾನೇ ಕೈಹಿಡಿದು ನಡೆಸಿ ಮುದ್ದಣ್ಣ ಕರವರತಿಯ ಕೊಳದ ಬಳಿ ಕರೆತಂದು—

"ಮಹಾಪ್ರಭು—ಇದು ತಮ್ಮ ಚಂದ್ರಿಕಾ ವಿಹಾರಕ್ಕಾಗಿಯೇ ಕಟ್ಟಿಸಿದ ಕೊಳ-ಒಪ್ಪಿಸಿಕೊಳ್ಳಬೇಕು."

—ಎಂದು ಎದೆ ಇರಿವ ಕುಹಕದಿಂದ ನುಡಿದು, ತನ್ನ ತಮ್ಮನತ್ತ ತಿರುಗಿ—

"ಚುಕ್ಕಣ್ಣ. ಪ್ರಭುಗಳಲ್ಲಿ ಉದ್ಧಟತನದಿಂದ ವರ್ತಿಸಿದವನು ನೀನೇ ಅಲ್ಲವೇ? ಯೋಗ್ಯರೀತಿಯಲ್ಲಿ ಅವರ ಸೇವೆಮಾಡಿ ಆ ಕಳಂಕ ವನ್ನು ತೊಡೆದುಕೊಳ್ಳಬೇಕು."

—ಎಂದು, ತಾನು ಹಿಡಿದ ನಾಯಕನ ಕೈಯನ್ನು ಚುಕ್ಕಣ್ಣನ ವಶಕ್ಕೆ ಒಪ್ಪಿಸಿದ.

"ಪ್ರಭುಗಳು ಹೀಗೆ ದಯಮಾಡಿಸಬೇಕು."

—ಎಂದು ಚುಕ್ಕಣ್ಣ ಒರಟಾಗಿಯೇ ಅವನ ಮುಂಗೈ ಕತ್ತರಿಸಿ ಉಳಿದ, ಮೊಂಡ ತೋಳನ್ನು ಹಿಡಿದೆಳೆದು—

"ಓ—ಮಹಾಸ್ವಾಮಿಯವರಿಗೆ ನೋವಾಯಿತೇನೋ. ಕ್ಷಮಿಸ ಬೇಕು. ಪ್ರಭುಗಳು ಒಕ್ಕೈವೀರರಾದ ಕೀರ್ತಿ ನಮಗೆ ತಿಳಿದಿರಲಿಲ್ಲ. ಹೀಗೆ ದಯಮಾಡಿಸಬೇಕು ಪ್ರಭು—"

—ಎಂದು ನಾಯಕನನ್ನು ಎಳೆದು ತಂದು, ಕೊಳದಮೇಲೆ ಇಟ್ಟಿದ್ದ ಬೆಳ್ಳಿಯ ಮಂಚದ ಕಾಲಿನ ಬಳಿ ಅವನನ್ನು ನಿಲ್ಲಿಸಿ, ತೆರೆಗಂಭಕ್ಕೆ ಅವನನ್ನು ಬಿಗಿದು ಕಟ್ಟಿದ.

"ತಮ್ಮ ಚಂದ್ರಿಕಾವಿಹಾರಕ್ಕಾಗಿಯೇ ಸಜ್ಜಾಗಿರುವ ಶೃಂಗಾ ರೋದ್ಯಾನವನ್ನು ಪ್ರಭುಗಳು ಪರಾಂಬರಿಸಬೇಕು."

—ಎಂದು ಮುದ್ದಣ್ಣ, ಕತ್ತು ಬಾಗಿಸಿ ನಿಂತ ನಾಯಕನ ಗಡ್ಡವನ್ನು ಮೇಲೆತ್ತಿದ. ಮುದ್ದಣ್ಣನ ಕೈ ತನ್ನ ಬಾಯಿ ಬಳಿ ಬಂದ ಕೂಡಲೇ, ಕ್ರೋಧದಿಂದ ಕುದಿಯುತ್ತಿದ್ದ ನಾಯಕ ತಟಕ್ಕನೆ ಅವನ ಕೈಗೇ ಬಾಯಿ ಹಾಕಿ, ಕಸುವನ್ನೆಲ್ಲಾ ಬಿಟ್ಟು ಕಡಿದ.

"ಹಾ" ಎಂದು ರಕ್ತಕಾರುವ ಕೈಯನ್ನೆಳೆದುಕೊಂಡು ಮುದ್ದಣ್ಣ, ನೋವಿನೊಂದಿಗೆ ನುಗ್ಗಿಬಂದ ರೋಷದಲ್ಲಿ ಹಾಗೆಯೇ ನಾಯಕನ ಮುಖಕ್ಕೆ ಹೊಡೆದ. ಆ ಏಟಿನ ಜೋರಿಗೆ, ನಾಯಕನ ಮೂಗು ಬಿಚ್ಚಿ ತುಟಬಿರಿದು, ಮೂಗು ಬಾಯಿಗಳಿಂದ ಹರಿದ ನೆತ್ತರು ಎದೆಯ ಮೇಲೆ ತೊಟಕಿತು. ಆದರೆ ಆತನ ಬಾಯಿಂದ ನೋವಿನ ಶಬ್ದ ಹೊರಬೀಳಲಿಲ್ಲ.

ಒಂದುಗಳಿಗೆ ಹುಚ್ಚಾಗಿ ಮೂಡಿದ ಕ್ರೋಧವನ್ನು ತಡೆ ಹಿಡಿದು ಮುದ್ದಣ್ಣ—

"ಚಂದ್ರಿಕಾ ವಿಹಾರದ ಬಯಕೆಯನ್ನು ತೀರಿಸಿಕೊಳ್ಳದೆ, ಪ್ರಭುಗಳು ಹೀಗೆ ಆಹಾರಕ್ಕೆ ಆತುರ ಪಡಬಾರದು. ಕೊಂಚ ತಡೆಯಬೇಕು. ರಾಯಣ್ಣಾ—ಇನ್ನು ನೃತ್ಯಕೇಳಿ ನಡೆಯಲಿ" ಎಂದ.

ರಾಯಣ್ಣ ದೇವಾಲಯದ ರಂಗಮುಂಟಪದಲ್ಲಿ ವೀಣೆ ಮೃದಂಗ ನುಡಿಸುವವರತ್ತ ಕಣ್ಣು ಕೆಕ್ಕರಿಸಿ ನೋಡಿ—

"ವಾದ್ಯಗಳಿನ್ನು ನುಡಿಯಲಿ."

—ಎಂದ. ನಡೆದುದನ್ನೆಲ್ಲವನ್ನೂ ನೋಡುತ್ತಿದ್ದ ವಾದ್ಯಗಾರರ ಕೈಗಳು ಕಂಪಿಸುತ್ತಿದ್ದರೂ, ಭೀತಿವಶರಾಗಿ ನುಡಿಯಿಸಲೇ ಬೇಕಾಗಿ ಬಂದು, ವೀಣೆ, ಮೃದಂಗಗಳು ಕೈ ಕಂಪನದಿಂದಾಗಿ ಅಪಸ್ವರ ನುಡಿಯುತ್ತಿದ್ದರೂ ನುಡಿಯಿಸಲಾರಂಭಿಸಿದರು. ವಾದ್ಯವಾದನ ಆರಂಭವಾದ ಕೂಡಲೇ ಧಡಿಯರಿಬ್ಬರು ನಾಯಕನ ಇಬ್ಬದಿಯಲ್ಲಿ ನಿಂತು, ರಾಯಣ್ಣನ ಅಪ್ಪಣೆಯಂತೆ ಅವನನ್ನು ಚಾವಟಿಯಿಂದ ಹೊಡೆಯಲಾರಂಭಿಸಿದರು. ಒಮ್ಮೊಮ್ಮೆ ಚಾವಟಿ ಮೈಗೆ ಸೋಕಿದಾಗಲೂ, ಉರಿ ಸೋಕಿದಂತೆ ನಾಯಕನ ಮೈ ಹೊಯ್ದಾಡಿತು. ಆದರೆ ನಾಯಕನ ಬಾಯಿಂದ ನೋವು ಸದ್ದಾಗಲಿ ಹೊರಬೀಳಲಿಲ್ಲ. ತಾನಾಗಿಯೇ, ಹೊರಹೊಮ್ಮುವ ಸದ್ದೂ ಹೊರಬರದಂತೆ ಹಲ್ಲುಗಳು ಕಚ್ಚಿದ ತುಟಿಗಳಿಂದ ನೆತ್ತರು ಸುರಿಯುತ್ತಿತ್ತು. ಕಡೆಗೆ ಆ ಮೈ ನೋವು ತಡೆಯಲಾರದೆ ಪ್ರಜ್ಞೆತಪ್ಪಿ, ಅದುವರೆಗೂ ಕೆಂಡ ಕಾರುತ್ತಿದ್ದ ಕಣ್ಣುಗಳು ಮುಚ್ಚಿ, ನಿಮಿರಿ ನಿಂತಿದ್ದ ತಲೆ ಎದೆಯ ಮೇಲೆ ಜೋಲಿತು—ಕೂಡಲೇ ಚಾವಟಿಯಿಂದ ಹೊಡೆಯುವುದು ಸಾಕು ಎಂದು ಸೂಚಿಸಿದ ರಾಯಣ್ಣ.

ಅದುವರೆಗೂ ಆ ಭೀಕರ ದೃಶ್ಯವನ್ನು ಪಿಶಾಚತೃಪ್ತಿತುಂಬಿ ತುಳುಕುವ ಕಣ್ಣುಗಳಿಂದ ನೋಡುತ್ತಾ ಮಂಚದ ಮೇಲೆ ಮೈ ಒರಗಿಸಿದ್ದ ಮುದ್ದಣ್ಣ, ಪ್ರಜ್ಞೆತಪ್ಪಿದ ನಾಯಕನಿಗೆ ನೀರು ತಳಿಯಲು ಹೇಳಿದ. ತಣ್ಣನೆಯ ನೀರು ಸೋಕಿ, ನಾಯಕನಿಗೆ ಪ್ರಜ್ಞೆ ಬಂದಿತೆಂಬುದು, ಗೊತ್ತಾದ ಮೇಲೆ, ಮುದ್ದಣ್ಣ ನಾಯಕನನ್ನು ಕೇಳಿದ—

"ಪ್ರಭುಗಳಿಗೆ ನೃತ್ಯಕ್ರೀಡೆ ಸಾಕಾಯಿತೆಂದು ತೋರುತ್ತದೆ. ಮತ್ತೇನಾದರೂ ಅಪ್ಪಣೆ ಇದ್ದರೆ ಪಾದಸೇವಕನಿಗೆ ತಿಳಿಸಬೇಕು."

ಅದುವರೆಗೂ ಮಾತನಾಡದೆ, ನೋವನ್ನು ಕೂಡಾ ತೋರಿಸದೆ ಇದ್ದ ಲಿಂಗಣ್ಣನಾಯಕ, ಕಂಭಕ್ಕೆ ಬಿಗಿದ ಮೈಯನ್ನು ಸೆಡೆಸಿ ಹೇಳಿದ—

"ನಿನಗೆ ಮತ್ತಾವ ಕ್ರೀಡೆಯ ಬಯಕೆ ಇದೆಯೋ ತೀರಿಸಿಕೋ."

"ಪ್ರಭುಗಳಿಗೇನೂ ಬಯಕೆ ಇಲ್ಲವೇ?"

"ಇದೆ. ತೀರಿಸುತ್ತೀಯಾ?"

"ಆ!—ಪ್ರಭುಗಳಿಗೆ ತೀರದ ಬಯಕೆಯೂ ಇನ್ನೊಂದು ಉಳಿದಿದೆ. ಆಗಬಹುದು. ಅಪ್ಪಣೆಯಾಗಲಿ."

"ಒಂದಲ್ಲ, ಎರಡು ಬಯಕೆ ಇದೆ."

"ಅಪ್ಪಣೆ ಮಾಡಿ."

"ಒಂದು—ನೀನು ನಮ್ಮನ್ನು ಪ್ರಭು ಎಂದು ಕರೆದು ಆ ಹೆಸರಿಗೆ ಅಪಮಾನ ಮಾಡುವುದು ಬೇಡ."

"ಆಯಿತು—ಇನ್ನೊಂದು?"

"ಮುದ್ದಣ್ಣ, ನೀನು ಮನುಷ್ಯನಲ್ಲ, ನರಪಿಶಾಚಿ. ರಕ್ತಪಿಪಾಸಿ ರಕ್ಕಸ, ಕ್ರೂರಪಶು, ನರಕದ ಹುಳು. ನಿನ್ನನ್ನು ಬೇಡುವ ನಾಲಗೆಯಲ್ಲಿ ಹುಳ ಸುರಿಯಬೇಕು. ಆದರೂ ಬೇಡುತ್ತೇನೆ........"

ನಾಯಕ ಮುದ್ದಣ್ಣನನ್ನು ಬೈಯುವುದನ್ನು ಕೇಳಿ ಅವನನ್ನು ಹೊಡೆಯಲು ಮುಂದಾದ ರಾಯಣ್ಣನನ್ನು ತಡೆದು—

"ಸುಮ್ಮನಿರು ರಾಯಣ್ಣ. ಇದು ಅವರು ಕಡೆಯ ಬಾರಿ ಮಾತನಾಡುವುದು. ಅವರಿಗೆ ಏನೇನು ಮಾತನಾಡಬೇಕೆಂಬ ಬಯಕೆ ಇದೆಯೋ ತೀರಿಸಿಕೊಳ್ಳಲಿ— ನಾಯಕರು ಮುಂದೆ ಹೇಳಬೇಕು."

—ಎಂದ ಮುದ್ದಣ್ಣ.

"ಆದರೆ—ನೀನೂ ಯೋಧ, ಸಿಪಾಯಿಯಾಗಿದ್ದವನು. ವೀರ ಬಯಸುವ ಮರಣ ಎಂಥದೆಂದು ನಿನಗೆ ಗೊತ್ತಿದೆ. ನೀನು ನನ್ನ ಸಾವು ಬಯಸುತ್ತೀಯ ಎಂಬುದನ್ನು ನಾನು ಬಲ್ಲೆ. ಆ ತೃಪ್ತಿ ನಿನಗಾಗುವುದು. ಆದರೆ ನನ್ನ ಮೈಯನ್ನು ಬಿಗಿದ ಕಟ್ಟು ಬಿಚ್ಚಿ ಒಂದು ಕತ್ತಿ ಕೊಡು. ನಿನ್ನ ಸೈನಿಕರನ್ನು ನನ್ನ ಮೇಲೆ ಬಿಡು. ಅಷ್ಟೇ ನಾನು ಕೇಳುವುದು."

ನಾಯಕನಾಡಿದ ಮಾತನ್ನು ಕೇಳಿ ಮುದ್ದಣ್ಣ ಗಹಗಹಿಸಿ ನಗಲಾ

ರಂಭಿಸಿದ; ವಿನೋದವಾರ್ತೆಯನ್ನು ಕೇಳಿದವನಂತೆ ತನ್ನ ಪಕ್ಕೆಹಿಡಿದು ನಕ್ಕ. ಬಳಿಯ ಗುಡ್ಡದ ಕಲ್ಲುಗಳೂ ನಡುಗುವಂತೆ ನಕ್ಕ. ಅವನ ನಗು ಅಡಗಿದ ಮೇಲೆ ನಾಯಕ ಹೇಳಿದ—

"ಏಕೆ—ಒಕ್ಕೈಯಾದ ನನ್ನ ಕೈಗೆ ಕತ್ತಿ ಕೊಡಲೂ ಹೆದರಿಕೆಯೇ. ಥೂ, ಹೇಡಿ!"

ಆ ಮಾತನ್ನು ಕೇಳಿದ ಕೂಡಲೇ, ಮುದ್ದಣ್ಣನ ಮೊಗದ ಮೇಲಿದ್ದ ನಗು ವೇಗವಾಗಿ ಮಾಯವಾಗಿ, ಭಯಂಕರ ಕ್ರೋಧ ಅವನ ಮುಖದಲ್ಲಿ ಕಾಳ್ಗಿಚ್ಚಿನಂತೆ ಉರಿಯಿತು. ಮಂಚದ ಮೇಲೆ ಮಲಗಿದ್ದವನು ಸಿಡಿದೆದ್ದು, ತನ್ನತ್ತ ಉಗಿದ ನಾಯಕನ ಮುಖದ ಮೇಲೆ ಹೊಡೆದು, ಅವನ ನೆತ್ತಿಯ ಕೂದಲನ್ನು ಮುಷ್ಟಿಯಲ್ಲಿ ಹಿಡಿದು ಅಬ್ಬರಿಸಿದ—

"ಕತ್ತಿ ಬೇಕೇ ನಿನಗೆ? ಅದು ಸಿದ್ಧವಾಗಿದೆ ನಾಯಕ. ರಾಯಣ್ಣಾ—ಇದು ನಮ್ಮನ್ನು ಸೆಟೆದು ನೋಡಿದ ಕಣ್ಣು, ಇದು ನಮ್ಮನ್ನು ಬೈದ ಬಾಯಿ—ಇದು ನಮಗೆ ಅಡ್ಡವಾದ ತಲೆ."

—ಎಂದವನೇ ಬಳಿಯಿದ್ದ ಕತ್ತಿಯಿಂದ ನಾಯಕನ ಕತ್ತಿಗೆ ಹೊಡೆದ. ಲಿಂಗಣ್ಣನಾಯಕನ ತಲೆ ಹಾರಿ, ಮಂಚದ ಮೇಲೆ ಉರುಳಿ ರಕ್ತ ಕಾರುತ್ತಾ ಅತ್ತಿಂದಿತ್ತ ಪುಟಿಯಿತು. ಪುಟಿಯುತ್ತಿದ್ದ ತಲೆಯನ್ನು ಕಾಲಿನಿಂದ, ಚೆಂಡಿನಂತೆ ಒದೆದು, ಪುಟಹಾರಿದ ಅದನ್ನು ನೋಡುತ್ತಾ ಹೇಳಿದ—

"ರಾಯಣ್ಣಾ—ನನ್ನ ಹಗೆ ತೀರಿತು, ಇಂದಿನಿಂದ ದುರ್ಗ ನನ್ನದು"

"ನಿಜ—ಅಣ್ಣನವರೇ ಇಂದಿನಿಂದ ದುರ್ಗದ ನಾಯಕರು"

—ಎಂದ ರಾಯಣ್ಣ. ಚುಕ್ಕಣ್ಣ, ಚಿಕ್ಕಣ್ಣರೂ ಅದಕ್ಕೆ ದನಿಗೂಡಿಸಿದರು.

ತನ್ನ ಕಣ್ಣೆದುರು ಹರಡಿದ, ಬತೇರಿಗಳ ಕಿರೀಟವನ್ನಿಟ್ಟುಕೊಂಡ ಸಪ್ತಶೃಂಗಿಯಾದ, ಮಲೆಯ ಸಾಲನ್ನು ನೋಡಿ ಹೇಳಿದ ಮುದ್ದಣ್ಣ—

"ಇದೆಲ್ಲಾ ನನ್ನದು. ಇದಕ್ಕೆ ನಾನು ಅಧಿಕಾರಿ"

ಅವನ ನುಡಿಯ ಸಿಡಿಲಿಗೆ ಮುಗಿಲು ಬೆಚ್ಚಿ ನಡುಗಿ ನೋಡಿದಂತೆ ಬೆಳದಿಂಗಳು ತುಂಬಿದ ಮುಗಿಲಿನಲ್ಲಿ ಅಲ್ಲಲ್ಲಿ ಮಿಣುಕು ತಾರೆಗಳು

ಮುಂಕಾಗಿ ಹೊಳೆದವು. ಮುದ್ದಣ್ಣನ ಹೃದಯದಿಂದುಕ್ಕಿದ ಪಿಶಾಚ ತೃಪ್ತಿಯ ನಗೆಯನ್ನು ಗವಿಗಳು ಮಾರ್ದನಿಸಿ, ದುರ್ಗದಲ್ಲೆಲ್ಲಾ ಆ ನಗೆಯ ಭೂತ ತಾನೇ ತಾನಾಗಿ ಅಲೆದಾಡಿತು.

---

# ಪ್ರಕಟನೆಗಳು

## ಪ್ರಕಟವಾಗಿವೆ

ಕಂಬನಿಯ ಕುಯಿಲು (ಎರಡನೆಯ ಮುದ್ರಣ) — ತ. ರಾ. ಸು.
*ಜೀವನದಿ — ಅ. ನ. ಕೃ.
*ಓದಿದ ಹುಡುಗಿ — ನರೇಂದ್ರಬಾಬು
*ಬನಶಂಕರಿ — ನಿರಂಜನ
ಮುತ್ತೈದೆ — ಕೃಷ್ಣಮೂರ್ತಿ ಪುರಾಣಿಕ
ಹಿಂದಿರುಗಿ ಬರಲಿಲ್ಲ — ಕೋ. ಚೆನ್ನಬಸಪ್ಪ
ಗೃಹಲಕ್ಷ್ಮಿ (ಎರಡನೆಯ ಮುದ್ರಣ) — ಅ. ನ. ಕೃ.
ತಿರುಗುಬಾಣ — ತ. ರಾ. ಸು.
ರಕ್ತರಾತ್ರಿ (ಎರಡನೆಯ ಮುದ್ರಣ) — ತ. ರಾ. ಸು.

## ಅಚ್ಚಿನಲ್ಲಿ

ಮಿಸ್ ಲೀಲಾವತಿ — ಶ್ರೀನಿವಾಸರಾವ್ ಕೊರಟಿ
ಚಿನ್ನದ ಬೆಲೆ — ಕೃಷ್ಣಮೂರ್ತಿ ಪುರಾಣಿಕ

## ಬರಲಿವೆ

ಅಪರಾಜಿತೆ — ಅ. ನ. ಕೃ.
ಹಾವಾಡಿಗ — ನರೇಂದ್ರಬಾಬು
ಜನ್ಮಾಂತರ — ದೇವುಡು
ಸೌಭಾಗ್ಯ — ನಿರಂಜನ
ಕೆಂಪು ಬಂಗಾರ — ನಿರಂಜನ
ಜನಮೇಜಯ — ನಾ. ಕಸ್ತೂರಿ
ವೀರವಧೆ — ವೀರಕೇಸರಿ
ಪುನರ್ಮಿಲನ — ರಾ. ವೆಂ. ಶ್ರೀನಿವಾಸ
ಸೋತ ಬದುಕು — ಎಸ್. ಅನಂತನಾರಾಯಣ
ಭಾರತೀಯ ದರ್ಶನಗಳು — ಎಂ. ಯಾಮುನಾಚಾರ್ಯ
ಕನ್ನಡ ಸಾಹಿತ್ಯ ಚರಿತ್ರೆಯ ಕೈಪಿಡಿ — ಎಸ್. ವಿ. ಪರಮೇಶ್ವರಭಟ್ಟ
ಇಂಗ್ಲಿಷ್-ಕನ್ನಡ ನಿಘಂಟು
ಕನ್ನಡ-ಇಂಗ್ಲಿಷ್-ಕನ್ನಡ ನಿಘಂಟು

*ಪ್ರತಿಗಳು ಮುಗಿದಿವೆ.



ತ. ರಾ. ಸು.

ಮನೆಗೆ ಬಂದ ಮಹಾಲಕ್ಷ್ಮಿ, ರಕ್ತತರ್ಪಣ, ಬೆಂಕಿಯ ಬಲೆ, ಹಂಸಗೀತೆ, ನೃಪತುಂಗ, ಬಿಡುಗಡೆಯ ಬೇಡಿ ಮುಂತಾದ ಕಾದಂಬರಿಗಳನ್ನು ಬರೆದು ಸುಪ್ರಸಿದ್ಧರಾಗಿರುವ ಶ್ರೀ ತ.ರಾ.ಸು. ಅವರು ೧೯೨೦ ರಲ್ಲಿ ಜನಿಸಿದರು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ದಿ. ತಳುಕಿನ ವೆಂಕಣ್ಣಯ್ಯನವರ ಮನೆತನಕ್ಕೆ ಸೇರಿದ ಇವರಿಗೆ ಚಿಕ್ಕವಯಸ್ಸಿನಲ್ಲೇ ಸಾಹಿತ್ಯ ಶಕ್ತಿ ಅಂಕುರಿಸಿತು.

ಭಾವಗರ್ಭಿತವಾದ ಭಾಷೆ, ಸ್ವಾರಸ್ಯವಾದ ವರ್ಣನೆ, ಸಂಭಾಷಣೆ, ಎಂತಹ ಸನ್ನಿವೇಶವನ್ನಾದರೂ ಆತ್ಮೀಯತೆಯಿಂದ ಚಿತ್ರಿಸಬಲ್ಲ ಮೊನೆಚಾದ ಶೈಲಿ, ತ. ರಾ. ಸು. ಅವರಿಗೆ ಸಹಜವಾಗಿ ಸಾಧಿಸಿವೆ.

ಸಾಹಿತ್ಯ ಸೃಷ್ಟಿಯಲ್ಲಿಯೇ ಸದಾ ಆಸಕ್ತಿವಹಿಸಿ ದುಡಿಯುತ್ತಿರುವ ಶ್ರೀ ತ. ರಾ. ಸು. ಅವರಿಂದ ಇನ್ನೂ ಅನೇಕ ಅತ್ಯುತ್ತಮ ಕೃತಿಗಳನ್ನು ಕನ್ನಡಿಗರು ನಿರೀಕ್ಷಿಸಬಹುದು.